ಶ್ರೀವೀತರಾಗಾಯ ನಮಃ

# ಶ್ರೀ ಸಮಂತಭದ್ರಾಚಾರ್ಯ ವಿರಚಿತ

## ಅನ್ವಯಾರ್ಥತಾತ್ಪರ್ಯವೃತ್ತಿಸಹಿತ

# ರತ್ನಕರಂಡಕಶ್ರಾವಕಾಚಾರಃ

**ನಮಃ ಶ್ರೀವರ್ಧಮಾನಾಯ । ನಿರ್ಧೂತಕಲಿಲಾತ್ಮನೇ**
**ಸಾಲೋಕಾನಾಂ ತ್ರಿಲೋಕಾನಾಂ । ಯದ್ವಿದ್ಯಾದರ್ಪಣಾಯತೇ ॥**

**ಅನ್ವಯಾರ್ಥಃ—** ಯದ್ವಿದ್ಯಾ, ಯತ್–ಯಾವ ವರ್ಧಮಾನ ಸ್ವಾಮಿಯ ವಿದ್ಯಾ–ಕೇವಲಜ್ಞಾನವು ಸಾಲೋಕಾನಾಂ–ಅಲೋಕದೊಡನೆ ಕೂಡಿರುವ ತ್ರಿಲೋಕಾನಾಂ–ಮೂರು ಲೋಕಗಳಿಗೆ ದರ್ಪಣಾಯತೇ–ಕನ್ನಡಿಯೋಪಾಧಿಯಲ್ಲಿ ಆಚರಿಸುತ್ತದೆಯೋ 'ತಸ್ಮೈ' ಅಂಥಾ ನಿರ್ಧೂತ ಕಲಿಲಾತ್ಮನೇ–ನಿರ್ಧೂತ–ಕೆಡಿಸಲ್ಪಟ್ಟ ಕಲಿಲ–ಪಾಪವೇ ಆತ್ಮನೇ–ಸ್ವರೂಪವಾಗುಳ್ಳ ಶ್ರೀವರ್ಧಮಾನಾಯ–ಶ್ರೀ–ಅಂತರಂಗಬಹಿರಂಗಲಕ್ಷ್ಮಿಯೊಡನೆ ಕೂಡಿದ ವರ್ಧಮಾನಾಯ–ಮಹಾವೀರಸ್ವಾಮಿಗೋಸ್ಕರ ನಮಃ–ನಮಸ್ಕಾರವು 'ಅಸ್ತು' ಆಗಲಿ.

**ತಾತ್ಪರ್ಯಾರ್ಥ:—** ಶ್ರೀ ಸಮಂತಭದ್ರಾಚಾರ್ಯರು ರತ್ನಕರಂಡಕನೆಂಬೀ ಶ್ರಾವಕಾಚಾರಗ್ರಂಥವನ್ನು ರಚಿಸಲು ಪ್ರಾರಂಭಿಸಿ, ಗ್ರಂಥಾರಂಭದಲ್ಲಿ ನಾಸ್ತಿಕತ್ವಪರಿಹಾರ—ಶಿಷ್ಟಾಚಾರಪರಿಪಾಲನೆ–ಪುಣ್ಯಪ್ರಾಪ್ತಿ—ನಿರ್ವಿಘ್ನವಾಗಿ ಗ್ರಂಥಪರಿಸಮಾಪ್ತಿಯಾಗುವಿಕೆ ಈ ನಾಲ್ಕು ಪ್ರಯೋಜನಗಳನ್ನಿಟ್ಟುಕೊಂಡು ತಮಗಿಷ್ಟದೈವವಾದ ಶ್ರೀವರ್ಧಮಾನಸ್ವಾಮಿಯವರನ್ನು ನಮಸ್ಕರಿಸಿರುತ್ತಾರೆ. ಇದಕ್ಕೆ ಮಂಗಲಾಚರಣೆಯೆಂದು ಹೆಸರು. * ಗ್ರಂಥದ ಆರಂಭ—ಮಧ್ಯ—ಅವಸಾನದಲ್ಲಿ ಮಂಗಲವನ್ನು ಮಾಡಬೇ–

---

*ಆದೌ ಮಧ್ಯೇಽವಸಾನೇ ಚ । ಮಂಗಲಂ ಭಾಷಿತಂ ಬುಧೈಃ
ತಜ್ಜಿನೇಂದ್ರ ಗುಣಸ್ತೋತ್ರಂ । ತದವಿಘ್ನಪ್ರಸಿದ್ಧಯೇ ॥೧॥

ಕೆಂದು ಆಚಾರ್ಯರು ಅಪ್ಪಣೆ ಕೊಡಿಸಿರುತ್ತಾರೆ. ಜಿನಗುಣಸ್ತೋತ್ರಕ್ಕೆ ಮಂಗಲವೆಂದು ಹೆಸರು ಮಧ್ಯೇಮಧ್ಯೇ ಬರುವ ವಿಘ್ನಗಳ ಪರಿಹಾರ ಕ್ಕೋಸ್ಕರ ಮಂಗಲಸ್ತೋತ್ರವನ್ನು ಮಾಡುವುದು. ತನ್ನೆದುರಿಗಿರುವ ಪರ ಪದಾರ್ಥಗಳನ್ನೆಲ್ಲಾ ತನ್ನಲ್ಲಿ ಅಂತರ್ಭಾವವನ್ನಾಗಿ ಮಾಡಿಕೊಳ್ಳುವುದು ಕನ್ನಡಿಯ ನೈಜವಾದ ಸ್ವಭಾವವು. ಅದರಂತೆ ಆ ವರ್ಧಮಾನಸ್ವಾಮಿಯು ತಮ್ಮ ಕೇವಲ [ದಿವ್ಯ] ಜ್ಞಾನದಿಂದ ಅಧೋಮಧ್ಯೋರ್ಧ್ವ ಭೇದಗ ಳಾದ ಮೂರು ಲೋಕಗಳನ್ನೂ ಅವುಗಳ ಹೊರಗಿರುವ ಅಲೋಕವನ್ನೂ ತಿಳಿಯುವವರೂ ತನ್ನ ತಪೋಬಲದಿಂದ ಜ್ಞಾನಾವರಣೀಯ ಮೊದಲಾದ ಕರ್ಮಗಳನ್ನು ಕೆಡಿಸಿದವರೂ ಅನಂತ [ಕೊನೆಯಿಲ್ಲದಿರುವ] ಜ್ಞಾನ ಅನಂತದರ್ಶನ ಅನಂತವೀರ್ಯ ಅನಂತಸುಖಗಳೆಂಬೀ ಅಂತರಂಗ ಸಂಪತ್ತು ಇಂದ್ರಾದಿದೇವನಿರ್ಮಿತವಾದ ಸಮವಸರಣ †ಅಷ್ಟಮಹಾಪ್ರಾತಿಹಾರ್ಯ– [೧] ಅಶೋಕಮರ [೨] ಕುಸುಮವೃಷ್ಟಿ [೩] ದಿವ್ಯಧ್ವನಿ [೪] ಚಾಮರ [೫] ಸಿಂಹಾಸನ [೬] ಪ್ರಭಾಮಂಡಲ [೭] ದೇವ ದುಂದುಭಿ [೮] ಮುಕ್ಕೊಡೆ ಇವುಗಳಿಗೆ ಅಷ್ಟಮಹಾಪ್ರಾತಿಹಾರ್ಯ ಗಳೆಂಬ ಹೆಸರು—ಇವು ಮೊದಲಾದ ಬಾಹ್ಯಸಂಪತ್ತುಗಳಿಂದ ಕೂಡಿ ದವರೂ ಅಂತಿಮತೀರ್ಥಂಕರರೂ ಆದ ವರ್ಧಮಾನಸ್ವಾಮಿಯವರಿ ಗೋಸ್ಕರ ನಮಸ್ಕಾರವನ್ನು ಮಾಡಿರುತ್ತಾರೆ. ಈ ಶ್ಲೋಕದಲ್ಲಿ 'ತಸ್ಮೈ' 'ಅಸ್ತು' ಈ ಎರಡು ಪದಗಳಿಲ್ಲವಾದರೂ ಇವುಗಳನ್ನು ಅನ್ವಯಾರ್ಥ ದಲ್ಲಿ ಅಧ್ಯಾಹಾರವನ್ನಾಗಿ ಮಾಡಿರುತ್ತದೆ. ಶ್ಲೋಕದಲ್ಲಿಲ್ಲದಿರುವ ಪದಗ ಳನ್ನು ಅರ್ಥಪೂರ್ತಿಗಾಗಿ ಗ್ರಹಣಮಾಡಿಕೊಳ್ಳುವುದಕ್ಕೆ 'ಅಧ್ಯಾಹಾರ' ವೆಂದು ಹೆಸರು. ಜೈನಧರ್ಮಾನುಸಾರವಾಗಿ ಸಮ್ಯಗ್ದರ್ಶನಸಮ್ಯಗ್ಜ್ಞಾನ ಸಮ್ಯಕ್ಚಾರಿತಗಳೆಂಬೀ ಮೂರು ರತ್ನತ್ರಯಗಳ ವಿಷಯವನ್ನೂ ಶ್ರಾವಕರ

---

† ಅಶೋಕವೃಕ್ಷಸ್ಸುರಪುಷ್ಪವೃಷ್ಟಿ । ರ್ದಿವ್ಯಧ್ವನಿಶ್ಚಾಮರಮಾ ಸನಂಚ ॥ ಭಾಮಂಡಲಂ ದುಂದುಭಿರಾತಪತ್ರಂ । ಸತ್ಪ್ರಾತಿಹಾರ್ಯಾಣಿ ಜಿನೇಶ್ವರಾಣಾಂ ॥೧॥

ಮೂಲೋತ್ತರಗುಣಗಳೆಂಬೀ ಶ್ರಾವಕಾಚಾರವನ್ನೂ ಇದರಲ್ಲಿ ಸಂಕ್ಷೇಪ್ತವಾಗಿ ವರ್ಣಿಸಿರುವುದರಿಂದ ಇದಕ್ಕೆ "ರತ್ನಕರಂಡಕಶ್ರಾವಕಾಚಾರ" ವೆಂಬೀ ಹೆಸರು ಅನ್ವರ್ಥವಾಗಿದೆ.

## ಧರ್ಮೋಪದೇಶದ ಪ್ರತಿಜ್ಞೆ.

**ದೇಶಯಾಮಿ ಸಮೀಚೀನಂ | ಧರ್ಮಂ ಕರ್ಮನಿಬರ್ಹಣಂ||**
**ಸಂಸಾರದುಃಖತಃ ಸತ್ವಾನ್ | ಯೋ ಧರತ್ಯುತ್ತಮೇ ಸುಖೇ ||**

**ಅನ್ವಯಾರ್ಥಃ**—ಯಃ—ಯಾವದು ಸತ್ವಾನ್—ಪ್ರಾಣಿಗಳನ್ನು ಸಂಸಾರದುಃಖತಃ—ಚತುರ್ಗತಿಭ್ರಮಣರೂಪವಾದ ಸಂಸಾರದುಃಖದಿಂದ ಉತ್ತಮೇ ಸುಖೇ—ಉತ್ತಮವಾದ ಸುಖದಲ್ಲಿ ಧರತಿ—ಇರಿಸುತ್ತದೆಯೋ 'ತಂ' ಅಂತಹ ಕರ್ಮನಿಬರ್ಹಣಂ—ಕರ್ಮಗಳನ್ನು ನಾಶಮಾಡುವುದೂ ಸಮೀಚೀನಂ—ಉತ್ಕೃಷ್ಟವೂ ಆದ ಧರ್ಮಂ-ಧರ್ಮವನ್ನು 'ಅಹಂ' ನಾನು (ಸಮಂತಭದ್ರಾಚಾರ್ಯ) ದೇಶಯಾಮಿ—ಉಪದೇಶಿಸುತ್ತೇನೆ.

**ತಾತ್ಪರ್ಯಃ**— ಈ ಶ್ಲೋಕದಲ್ಲಿ ಸಮಂತಭದ್ರಾಚಾರ್ಯರು ಧರ್ಮದ ಸ್ವರೂಪವನ್ನುಪದೇಶಿಸುತ್ತೇನೆಂದು ಪ್ರತಿಜ್ಞೆ ಮಾಡುತ್ತಾರೆ. "ಧರತೀತಿ ಧರ್ಮಃ" ಎಂಬೀ ನಿರುಕ್ತಿಯಂತೆ ಸಮಸ್ತವಾದ ಚರಾಚರ ಪ್ರಾಣಿಗಳ ನರಕತಿರ್ಯಂಚಮನುಷ್ಯದೇವಗತಿಗಳೆಂಬ ಚತುರ್ಗತಿಭ್ರಮಣ ರೂಪವಾದ ಸಂಸಾರದುಃಖಗಳನ್ನು ಹೋಗಲಾಡಿಸಿ, ಉತ್ತಮವಾದಸ್ವರ್ಗ ಮೊದಲಾದ ಸುಖಗಳಲ್ಲಿ ಧರಿಸು [ಉಂಟುಮಾಡು] ತ್ತದೋ ಅದಕ್ಕೆ 'ಧರ್ಮ'ವೆಂದು ಹೆಸರು. ಈ ಪ್ರಕಾರವಾದ ಧರ್ಮವು ಮೌಲ್ಯಕ್ಕೆ ಸಿಕ್ಕತಕ್ಕುದಲ್ಲವು. ಪರಂತು, ಪರವಸ್ತುಗಳಲ್ಲಿ ಮಮತೆಯನ್ನು ಬಿಟ್ಟು ಸಚ್ಚಿದಾನಂದಮಯನೂ ಪರಮನಿರ್ಮಲನೂ ಪರಂಜ್ಯೋತಿಸ್ವರೂಪನೂ ಆದ ಪರಮಾತ್ಮನಲ್ಲಿ ಭಕ್ತಿ-ಜ್ಞಾನ-ವೈರಾಗ್ಯಯುಕ್ತವಾದ ಭಾವನೆಯಿಂದಲೇ ದೊರೆಯತಕ್ಕುದು. ಮತ್ತು ಇದರಲ್ಲಿ ದಯಾಮೂಲಧರ್ಮವೆಂದೂ, ವ್ಯವಹಾರನಿಶ್ಚಯಧರ್ಮಗಳೆಂದೂ, ರತ್ನತ್ರಯಧರ್ಮಗಳೆಂದೂ ಉತ್ತಮಕ್ಷಮಾದಿದಶಧರ್ಮಗಳೆಂದೂ ಅನೇಕಭೇದಗಳಿವೆಯಾದರೂ ಈ ಗ್ರಂಥ

ದಲ್ಲಿ ರತ್ನತ್ರಯರೂಪವಾದ ಧರ್ಮಗಳ ಸ್ವರೂಪವನ್ನು ಪ್ರತಿಪಾದಿಸಿರುತ್ತಾರೆ. ಈ ಜೀವನು ರಾಗ—ದ್ವೇಷ ಮೊದಲಾದ ಪರಿಣಾಮುಗಳನ್ನು ತೊರೆದು ವೀತರಾಗಭಾವದಿಂದ ಮಾಡತಕ್ಕ ದಾನ, ಪೂಜೆ, ಪರೋಪಕಾರ, ಜಪ. ತಪ, ಕಾಯಕ್ಲೇಶ ಮೊದಲಾದುವುಗಳೆಲ್ಲವೂ ಧರ್ಮಕಾರ್ಯಗಳಾಗಿವೆ. ಶುಭಪರಿಣಾಮದಿಂದ ಪುಣ್ಯಬಂಧವೂ ಅಶುಭಪರಿಣಾಮದಿಂದ ಪಾಪಬಂಧವೂ ಆಗುವುದು. ಆದುದರಿಂದ ಧರ್ಮವು ಶುಭಾಶುಭರೂಪವಾದ ಕರ್ಮಗಳನ್ನು ನಾಶಮಾಡಿ ಉತ್ತಮವಾದ [ಮೋಕ್ಷ] ಸುಖವನ್ನುಂಟು ಮಾಡತಕ್ಕದಾಗಿದೆ. ಇದರ ಸ್ವರೂಪವನ್ನು ಮುಂದೆ ವಿವರಿಸುತ್ತಾರೆ. ||೨||

## ಧರ್ಮಸ್ವರೂಪ ವರ್ಣನೆ.

**ಸದ್ದೃಷ್ಟಿಜ್ಞಾನವೃತ್ತಾನಿ | ಧರ್ಮಂ ಧರ್ಮೇಶ್ವರಾ ವಿದು: ||**
**ಯದೀಯಪ್ರತ್ಯನೀಕಾನಿ | ಭವಂತಿ ಭವಪದ್ಧತಿ: ||೩||**

**ಅನ್ವಯಾರ್ಥ:**—ಧರ್ಮೇಶ್ವರಾ:—ಧರ್ಮಕ್ಕೊಡೆಯರಾದ ಗಣಧರರು ಮೊದಲಾದ ಆಚಾರ್ಯರು ಸದ್ದೃಷ್ಟಿಜ್ಞಾನವೃತ್ತಾನಿ—ಸಮ್ಯಗ್ದರ್ಶನ ಸಮ್ಯಗ್ಜ್ಞಾನ ಮತ್ತು ಸಮ್ಯಕ್ಚಾರಿತ್ರ ಇವುಗಳಿಗೆ ಧರ್ಮಂ—ಧರ್ಮವೆಂದು ವಿದು:—ಹೇಳುತ್ತಾರೆ. ಯದೀಯಪ್ರತ್ಯನಿಕಾನಿ—ಯದೀಯ-ಯಾವ ರತ್ನತ್ರಯರೂಪವಾದ ಧರ್ಮಗಳಿಗೆ ಪ್ರತ್ಯನಿಕಾನಿ— ವಿಪರೀತಗಳಾದ ಮಿಥ್ಯಾದರ್ಶನ ಮಿಥ್ಯಾಜ್ಞಾನ ಮಿಥ್ಯಾಚಾರಿತ್ರಗಳು ಭವಪದ್ಧತಿ:—ಸಂಸಾರಕ್ಕೆ ಮಾರ್ಗ[ಕಾರಣ]ಗಳಾಗಿ ಭವಂತಿ— ಆಗುತ್ತವೆ.

**ತಾತ್ಪರ್ಯ:**—ಲೋಕದಲ್ಲಿ ಧರ್ಮೋಪದೇಶವನ್ನು ಮಾಡಿ ಭವ್ಯಪ್ರಾಣಿಗಳನ್ನುದ್ಧರಿಸಿದ ತೀರ್ಥಂಕರರು ಗಣಧರರು ಮೊದಲಾದವರು ಯಥಾರ್ಥ [ನಿರ್ದೋಷ]ವಾದ ದೇವಗುರುಶಾಸ್ತ್ರಗಳಲ್ಲಿ ಭಕ್ತಿಯೂ ಅವುಗಳ ಯಥಾರ್ಥವಾದ ಜ್ಞಾನವೂ ಅವುಗಳಿಂದುಂಟಾದ ಯಥಾರ್ಥವಾದ ವೈರಾಗ್ಯ [ಚಾರಿತ್ರ]ವೂ ಅಂದರೆ ಯಥಾರ್ಥವಾದ ನಂಬಿಕೆ, ತಿಳುವಳಿಕೆ ನಡವಳಿಕೆ ಇವುಗಳಿಗೆ ಸಮ್ಯಗ್ದರ್ಶನಜ್ಞಾನಚಾರಿತ್ರಗಳೆಂದೂ 'ರತ್ನತ್ರಯ'

ಗಳೆಂದು ಹೇಳುತ್ತಾರೆ– ಇವುಗಳಿಗೆ ಧರ್ಮವೆಂದು ಹೆಸರು. ಇವುಗಳಿಗೆ ವಿಪರೀತವೂ ಯಥಾರ್ಥವಲ್ಲ [ಸದೋಷ] ದಿರುವುದೂ ಆದ ದೇವಗುರು ಶಾಸ್ತ್ರಗಳಲ್ಲಿ ಭಕ್ತಿಜ್ಞಾನವೈರಾಗ್ಯಗಳನ್ನಿಡುವುದಕ್ಕೆ ಮಿಥ್ಯಾದರ್ಶನ ಜ್ಞಾನಚಾರಿತ್ರಗಳೆಂದು ಹೆಸರು. ಇವು ಅಧರ್ಮಗಳಾಗಿಯೂ ಸಂಸಾರ ಪರಂಪರೆಗೆ ಕಾರಣಗಳಾಗಿಯೂ ಆಗಿವೆಯೆಂದು ತಿಳಿಯಬೇಕು. ಮುಂದೆ ಸಮ್ಯಗ್ದರ್ಶನದ ಸ್ವರೂಪವನ್ನು ಪ್ರತಿಪಾದಿಸುತ್ತಾರೆ. ॥ ೩ ॥

## ಸಮ್ಯಗ್ದರ್ಶನದವರ್ಣನೆ.

**ಶ್ರದ್ಧಾನಂ ಪರದೂರ್ಥಾನಾ । ಮಾಪ್ತಾಗಮತಪೋಭೃತಾಂ ॥**
**ತ್ರಿಮೂಢಾಪೋಢಮಷ್ಟಾಂಗಂ । ಸಮ್ಯಗ್ದರ್ಶನಮಸ್ಮಯಂ ॥ ೪ ॥**

**ಅನ್ವಯಾರ್ಥ:**— ಪರಮಾರ್ಥಾನಾಂ- ಯಥಾರ್ಥವೂ ಮೋಕ್ಷಕ್ಕೆ ಕಾರಣವೂ ಆದ ಆಪ್ತಾಗಮತಪೋಭೃತಾಂ—ದೇವ ಶಾಸ್ತ್ರ ಮತ್ತು ಗುರುಗಳ ಅಷ್ಟಾಂಗಂ—ಎಂಟು ಅಂಗಗಳಿಂದ ಕೂಡಿದುದೂ ತ್ರಿಮೂಢಾಪೋಢಂ— ಮೂರು ಮೂಢಗಳಿಂದ ರಹಿತವಾದುದೂ ಅಸ್ಮಯಂ—ಎಂಟು ಮದಗಳಿಲ್ಲದುದೂ ಆದ ಶ್ರದ್ಧಾನಂ-ನಂಬಿಕೆಯು—ಸಮ್ಯಗ್ದರ್ಶನಂ–ಸಮ್ಯಗ್ದರ್ಶನವಾಗಿ 'ಭವತಿ' ಆಗುತ್ತದೆ.

**ತಾತ್ಪರ್ಯ:**– ನಿರ್ದೋಷವಾದ ದೇವಶಾಸ್ತ್ರಗುರುಗಳನ್ನು ನಂಬುವಿಕೆಗೆ ಸಮ್ಯಗ್ದರ್ಶನ ಯಾ ಸಮ್ಯಕ್ತ್ವವೆಂದು ಹೆಸರು. ಭಗವಂತ [ದೇವ] ನು ತನ್ನ ಕೇವಲ [ದಿವ್ಯ] ಜ್ಞಾನದಿಂದ ಸಮಸ್ತಪದಾರ್ಥಗಳನ್ನು ತಿಳಿದು ಯಥಾರ್ಥವಾಗಿ ಪ್ರಕಟಿಸುವವನಾಗಿರಬೇಕು. ಶಾಸ್ತ್ರವು ಆ ಭಗವಂತನಿಂದ ಹೇಳಲ್ಪಟ್ಟುದೂ ಶಬ್ದರಚನಾಯುಕ್ತವೂ ಆದುದಾಗಿರಬೇಕು. ಆಪ್ತಪ್ರಣೀತಶಾಸ್ತ್ರದಂತೆ ವರ್ತಿಸುವವನೂ ಸಮಸ್ತವಾದ ಪರಿಗ್ರಹತ್ಯಾಗಿಯೂ ಆದ ಯತಿಗೆ–ಗುರುವೆಂದು ಹೆಸರು. ಈ ರೀತಿಯಾದ ದೇವಗುರುಶಾಸ್ತ್ರಗಳಲ್ಲಿ ನಿಃಶಂಕಿತ ಮೊದಲಾದ ಎಂಟು ಅಂಗಗಳಿಂದ ಕೂಡಿದುದೂ ಲೋಕಮೂಢ ಮೊದಲಾದ ಮೂರು ಮೂಢಗಳಿಲ್ಲದುದೂ ಜ್ಞಾನಾದಿ ಎಂಟು ಮದಗಳಿಂದ ರಹಿತವೂ ಆದ ನಂಬಿಕೆಗೆ ಸಮ್ಯಗ್ದರ್ಶನ

ವೆಂದು ಹೆಸರು. ಇದರ ಸ್ವರೂಪವನ್ನು ಮುಂದೆ ವಿಸ್ತಾರವಾಗಿ ಪ್ರತಿಪಾದಿಸುತ್ತಾರೆ. " ತತ್ವಾರ್ಥಶ್ರದ್ಧಾನಂ ಸಮ್ಯಗ್ದರ್ಶನಂ " ಎಂಬೀ ಸೂತ್ರಾನುಸಾರವಾಗಿ ತತ್ವಾರ್ಥಗಳನ್ನು ನಂಬುವದಕ್ಕೆ ಸಮ್ಯಗ್ದರ್ಶನವೆಂದು ಪ್ರತಿಪಾದಿಸಿರುವಾಗ ಇಲ್ಲಿ ನಿರೂಪಿಸಿದ ಲಕ್ಷಣವು ವಿರೋಧವಾಗಲಾರದೇ ? ಎಂದು ಯಾರೂ ಶಂಕಿಸಬಾರದು. ಯಾಕಂದರೆ ? ನಿರ್ದೋಷವೂ ಬಾಧಾರಹಿತವೂ ಆದ ಸಪ್ತತತ್ವ [ಆಗಮ]ಗಳ ಯಥಾರ್ಥವಾದ ಉಪದೇಶವು ಆಪ್ತ [ದೇವ] ನಿಂದಲ್ಲದೆ ಇತರರಿಂದೆಂದೂ ಆಗಲಾರದು. ಆತನ ದಿವ್ಯವಚನಕ್ಕೆ ' ತತ್ವ ' ಯಾ ' ಶಾಸ್ತ್ರ ' ವೆಂದು ಹೆಸರು. ಆದುದರಿಂದ ಅವನಲ್ಲಿ ಅಥವಾ ಅವನ ವಚನದಲ್ಲಿ ಭಕ್ತಿ—ವಿಶ್ವಾಸಗಳನ್ನಿಡುವುದು ಒಂದೇಯೆಂದರೂ ವಿರೋಧವಾಗಲಾರದು. ॥೪॥

## ಆಪ್ತ [ ದೇವ ] ನ ಲಕ್ಷಣವು.

**ಆಪ್ತೇನೋಚ್ಛಿನ್ನದೋಷೇಣ । ಸರ್ವಜ್ಞೇನಾಗಮೇಶಿನಾ ॥**
**ಭವಿತವ್ಯಂ ನಿಯೋಗೇನ । ನಾನ್ಯಥಾ ಹ್ಯಾಪ್ತತಾ ಭವೇತ್ ॥ ೫ ॥**

**ಅನ್ವಯಾರ್ಥಃ**— ನಿಯೋಗೇನ- ನಿಶ್ಚಯವಾಗಿ ಉಚ್ಛಿನ್ನ ದೋಷೇಣ- ಉಚ್ಛಿನ್ನ-ನಾಶ ಮಾಡಲ್ಪಟ್ಟ ದೋಷೇಣ—ಕ್ಷುಧಾದಿ ದೋಷಗಳುಳ್ಳವನೂ ಸರ್ವಜ್ಞೇನ- ಸಮಸ್ತವನ್ನು ತಿಳಿದವನೂ ಆಗಮೇಶಿನಾ- ಶಾಸ್ತ್ರಕ್ಕೊಡೆಯನೂ ಆದ, ಆಪ್ತೇನ—ಭಗವಂತನಿಂದ ಭವಿತವ್ಯಂ- ಆಗತಕ್ಕದ್ದು. ಹಿ-ಯಾಕಂದರೆ ಅನ್ಯಥಾ—ಬೇರೆ ಪ್ರಕಾರವಾಗಿ ಆಪ್ತತಾ- ದೇವತ್ವವು ನ ಭವೇತ್- ಆಗಲಾರದು,

**ತಾತ್ಪರ್ಯಃ**— ನಿರ್ದೋಷತ್ವ—ಸರ್ವಜ್ಞತ್ವ--ಆಗಮೇಶಿ ( ಪರಮಹಿತೋಪದೇಶಿ ) ತ್ವ ಈ ಮೂರು ಗುಣಗಳು ದೇವರಲ್ಲಿರಬೇಕು. ಹೊಟ್ಟೆ ಹಸಿವೆ ಬಾಯಾರಿಕೆ ಮೊದಲಾದ ಹದಿನೆಂಟು ದೋಷಗಳಿಲ್ಲದಿರುವದರಿಂದ 'ನಿರ್ದೋಷಿ' ಯೆಂದೂ ಭೂತಭವಿಷ್ಯದ್ವರ್ತಮಾನಕಾಲೀನ ಸಮಸ್ತವಾದ ಗುಣಪರ್ಯಾಯಗಳಿಂದ ಕೂಡಿದುದೂ ಜೀವಪುದ್ಗಲಧರ್ಮ

ಅಧರ್ಮ ಆಕಾಶ ಕಾಲಗಳೆಂಬೀ ಷಡ್ದ್ರವ್ಯಗಳ ಅನಂತಪರ್ಯಾಯಗಳಿಂದ ಯುಕ್ತವೂ ಆದ ಲೋಕಾಲೋಕಗಳನ್ನು ಯುಗಪತ್ [ ಏಕಕಾಲದಲ್ಲಿ ] ತಿಳಿಯುವವನಾದ್ದರಿಂದ— 'ಸರ್ವಜ್ಞ'ನೆಂದೂ ದ್ವಾದಶಾಂಗವೇದಗಳೆಂಬ ಆಗಮ [ ಶಾಸ್ತ್ರ ] ಕ್ಕೆ ಮೂಲಕರ್ತೃವೂ ಪರಮಹಿತೋಪದೇಶಿಯೂ ಆಗಿರುವುದರಿಂದ 'ಆಗಮೇಶಿ' ಯೆಂದೂ ಹೇಳುತ್ತಾರೆ. ಈ ಪೂರ್ವೋಕ್ತವಾದ ಗುಣಗಳಿಂದ ಯುಕ್ತನಾದವನಿಗೆ 'ದೇವ' 'ಆಪ್ತ' ಯಾ 'ಭಗವಂತ'ನೆಂದು ಹೆಸರು. ಈ ಗುಣಗಳಿಲ್ಲದವನು ಎಂದೂ ದೇವನಾಗಲಾರನು. ||೫||

## ಹದಿನೆಂಟು ದೋಷಗಳು.

**ಕ್ಷುತ್ಪಿಪಾಸಾಜರಾಂತಕ | ಜನ್ಮಾಂತಕಭಯಸ್ಮಯಾಃ ||**
**ನ ರಾಗದ್ವೇಷಮೋಹಾಶ್ಚ | ಯಸ್ಯಾಪ್ತಃ ಸ ಪ್ರಕೀರ್ತ್ಯತೇ||೬||**

**ಅನ್ವಯಾರ್ಥಃ**—ಯಸ್ಯ—ಯಾವನಿಗೆ ಕ್ಷುತ್ಪಿಪಾಸಾಜರಾತಂಕ ಜನ್ಮಾಂತಕಭಯಸ್ಮಯಾಃ—ಕ್ಷುತ್—ಹೊಟ್ಟೆಹಸಿವೆ, ಪಿಪಾಸಾ—ಬಾಯಾರಿಕೆ, ಜರಾ—ಮುಪ್ಪು, ಆತಂಕ ರೋಗ, ಜನ್ಮ—ಹುಟ್ಟುವಿಕೆ, ಅಂತಕ—ಮರಣ, ಭಯ—ಭೀತಿಯು ಸ್ಮಯ—ಗರ್ವವು, ಇವುಗಳೂ, ರಾಗದ್ವೇಷ ಮೋಹಾ:—ಪ್ರೀತಿ-ವೈರ—ಮಮತೆ ಇವುಗಳೂ, ಚ ಶಬ್ದದಿಂದ ಚಿಂತೆ ರತಿ ವಿಷಾದ ಖೇದ ಸ್ವೇದ [ ಬೆವರು ] ನಿದ್ರೆ ಆಶ್ಚರ್ಯ ಇವುಗಳೂ ಕೂಡ ನ—ಇಲ್ಲವೋ ಸಃ—ಅವನು ಆಪ್ತಃ—ಭಗವಂತನೆಂದು ಪ್ರಕೀರ್ತ್ಯತೇ—ಹೇಳಲ್ಪಡುತ್ತಾನೆ.

**ತಾತ್ಪರ್ಯ:**— ಈ ಪೂರ್ವೋಕ್ತವಾದ ೧೮ ದೋಷಗಳಿಲ್ಲದವರಿಗೆ ದೇವರೆಂದು ಹೆಸರು. "ದೇವರು ಆಹಾರವನ್ನು ಸೇವಿಸದಿದ್ದರೆ ಅವರ ಶರೀರವು ಸ್ಥಿರವಾಗಿರುವುದು ಹೇಗೆ? ನಮ್ಮ ಶರೀರವು ಆಹಾರಾದಿಗಳಿಲ್ಲವಾದರೆ ಜೀವಿಸದಿರುವಂತೆ ಕೇವಲಿಗಳ ಶರೀರವೂ ಸ್ಥಿರವಾಗಿರಲಾರದೆಂದೂ— ಆದುದರಿಂದ ದೇವರು ಆಹಾರಸೇವನೆಯನ್ನು ಮಾಡುತ್ತಾರೆಂದೂ 'ಶ್ವೇತಾಂಬರ' ಮತದವರ ಅಂಬೋಣವು. ಪರಂತು ಕೇವಲಿ

[ದೇವರು] ಗಳಿಗೆ ಸಾಮಾನ್ಯವಾಗಿ ಆಹಾರವೇ ಇಲ್ಲವೆಂದು ದಿಗಂಬರರು ಹೇಳುವುದಿಲ್ಲವು. ಏಕೇಂದ್ರಿಯ ಮೊದಲುಗೊಂಡು ಸಯೋಗಕೇವಲಿ [ಅರ್ಹಂತ]ಗಳ ವರೇಗಿನ ಜೀವರೆಲ್ಲರೂ ಕರ್ಮ ಮತ್ತು ನೋಕರ್ಮ ರೂಪವಾದ ಪರಮಾಣುಗಳನ್ನು ಪ್ರತಿಸಮಯದಲ್ಲಿಯೂ ಗ್ರಹಣೆ ಮಾಡು ತ್ತಾರೆ. ಅದಲ್ಲದೆ ನಮ್ಮಂತೆ ಕೇವಲಿಗಳು ಕವಲಾ [ತುತ್ತು] ಹಾರ ಸೇವನೆಯನ್ನು ಮಾಡುವುದಿಲ್ಲವೆಂದು ನಮ್ಮಾಭಿಮತವು. ಕವಲಾಹಾರ ವಿಲ್ಲದೆ ಅವರ ಶರೀರವು ಸ್ಥಿರವಾಗಿರುವುದು ಅದೆಂತೆಂದು ಶಂಕಿಸಬಹು ದಾದರೂ ದೇವತೆಗಳು ಕವಲಾಹಾರವಿಲ್ಲದೆ ಮಾನಸಿಕಾಹಾರ ಮಾತ್ರ ದಿಂದಲೇ ಸಾಗರೋಪಮ ಕಾಲದವರೆಗೆ ಜೀವಿಸಿಕೊಂಡಿಲ್ಲವೇ ? ಆದು ದರಿಂದ ಅವರ ಕಾರಣವು ಯುಕ್ತಿಸಂಗತವಾದುದಲ್ಲವು. ದೇವತೆಗಳಿಗೆ ಆಹಾರೇಚ್ಛೆಯುಂಟಾಗುತ್ತಿರಲು ಅವರ ಕಂಠದಲ್ಲಿರುವ ಅಮೃತಪಿಂಡವು ಸ್ರವಿಸಿ ತೃಪ್ತಿಯನ್ನು ಹೊಂದುವರು. ಇದಕ್ಕೆ 'ಮಾನಸಿಕಾಹಾರ'ವೆಂದು ಹೆಸರು. ಭವನವಾಸಿ ವ್ಯಂತರ ಜ್ಯೋತಿಷ್ಕ ಕಲ್ಪವಾಸಿಗಳೆಂಬ ಚತುರ್ನಿ ಕಾಯಾಮರರಿಗೂ ಕವಲಾಹಾರವಿಲ್ಲದೆ ಮಾನಸಿಕಾಹಾರ ಮಾತ್ರದಿಂದ ಅವರ ಶರೀರವು ಸ್ಥಿರವಾಗಿರುವಂತೆ ಭಗವಂತನ ಶರೀರವೂ ಕರ್ಮನೋ ಕರ್ಮರೂಪವಾದ ಆಹಾರಗಳಿಂದ ಸ್ಥಿರವಾಗಿರುತ್ತದೆ. ಇಲ್ಲವಾದರೆ ನಮ್ಮಂತೆ ಅವರಿಗೂ ಕವಲಾಹಾರವಿದೆಯೆಂದರೆ, ನಮ್ಮಂತೆ ಬೆವರು ಮಲಮೂತ್ರ ಖೇದ ಉಪಸರ್ಗ ಮೊದಲಾದುವುಗಳೂ ಇಂದ್ರಿಯಜನಿತ ಸುಖೇಚ್ಛೆಯೂ ಇದೆಯೆಂದು ಒಪ್ಪಬೇಕಾಗುವುದು. ಇಚ್ಛೆಯು ಮೋಹ ನೀಯಕರ್ಮದಿಂದುಂಟಾದುದು. ಮೋಹನೀಯಕರ್ಮವಿರುತ್ತಿರಲು ಇಷ್ಟ ವಸ್ತುಗಳನ್ನು ಭೋಗಿಸಬೇಕೆಂಬೀ ಇಚ್ಛೆಯುಂಟಾಗುವದು. ಆಗ ವೀತ ರಾಗತ್ವವು ಸಿದ್ಧಿಸಲಾರದು. ಅದಲ್ಲದೆ ಇತರ ಪ್ರಾಣಿಗಳಂತೆ ಆಹಾರ ನಿದ್ರೆ, ರೋಗ, ಖೇದ ಮದ, ಮಲ, ಮೂತ್ರ ಮೊದಲಾದುವುಗಳಿವೆ ಯೆಂದರೆ ಸಂಸಾರಿಜೀವ ಮತ್ತು ಪರಮಾತ್ಮರುಗಳಿರುವ ವ್ಯತ್ಯಾಸ ವಾದರೂ ಏನು ? ಆದುದರಿಂದ ಸಂಸಾರಿಜೀವನು ಆಯುಃಪ್ರಾಣದಿಂದ

ಜೀವಿಸಿಕೊಂಡಿರುವುವನಲ್ಲದೆ ಕವಲಾಹಾರ ಮಾತ್ರದಿಂದಲೇ ಜೀವಿಸುವ ದಲ್ಲವೆಂದು ತಿಳಿಯಬೇಕು. ● ೧ ಕರ್ಮಾಹಾರ, ೨ ನೋಕರ್ಮಾಹಾರ, ೩ ಕವಲಾಹಾರ, ೪ ಲೇಪಾಹಾರ, ೫ ಓಜಾಹಾರ, ೬ ಮಾನಸಿಕಾಹಾರ ಗಳೆಂದು ಆಹಾರವು ಆರು ಪ್ರಕಾರವಾಗಿದೆ. ಭಗವಂತನಾದ ಅರ್ಹಂತ ರಲ್ಲಿ ಅನ್ಯಜೀವಾಸಾಧಾರಣವೂ ಪರಮಶುಭವೂ ಸೂಕ್ಷ್ಮವೂ ಆದ 'ನೋಕರ್ಮ' ಪರಮಾಣುಗಳು ಪ್ರತಿಕ್ಷಣದಲ್ಲಿಯೂ ಬಂದು ಸೇರುವುವು. ಇದೇ ಅವರಿಗಾಹಾರವು– ನಾರಕಿಯರಿಗೆ ಆವರವರ ಪೂರ್ವಾರ್ಜಿತ ಕರ್ಮಫಲವನ್ನನುಭವಿಸುವಿಕೆ ರೂಪವಾದ 'ಕರ್ಮಾ'ಹಾರವು. ಚತುರ್ನಿ ಕಾಯದೇವತೆಗಳಿಗೆ 'ಮಾನಸಾಹಾರವು. ಮನುಷ್ಯ ಮತ್ತು ತಿರ್ಯಂಚ ಗಳಿಗೆ 'ಕವಲಾ'ಹಾರವು. ಪಕ್ಷಿಗಳ ತತ್ತಿ [ಮೊಟ್ಟೆ]ಗೆ ಅವುಗಳ ತಾಯಿಯು ಮೇಲೆ ಕೂತು ಕೊಡುವ ಶಾಕಕ್ಕೆ 'ಓಜಾ'ಹಾರವೆಂದು ಹೆಸರು. ಪೃಥ್ವಿ ಕಾಯಿಕ ಮೊದಲಾದ ಏಕೇಂದ್ರಿಯ ಪ್ರಾಣಿಗಳಿಗೆ 'ಲೇಪಾ'ಹಾರವು. ಈ ಪ್ರಕಾರವಾಗಿ ಆಹಾರದಲ್ಲಿ ಆರು ಭೇದಗಳಿವೆ. ಆದುದರಿಂದ ಅರಹಂತ ರಿಗೆ 'ನೋಕರ್ಮ' ರೂಪವಾದ ಶುಭಪರಮಾಣುಗಳ ಗ್ರಹಣೆಯಲ್ಲದೆ ನಮ್ಮಂತೆ ಕವಲಾಹಾರ ವಿಲ್ಲವೆಂದು ಭಾವವು. ಈ ಪೂರ್ವೋಕ್ತವಾದ ಅಷ್ಟಾದಶದೋಷಗಳಿಂದ ವಿರಹಿತವಾದವನೇ ನಿರ್ದೋಷಿಯೆಂದೂ ಇಂದ್ರಿ ಯಜ್ಞಾನವಲ್ಲದೆ ಅತೀಂದ್ರಿಯಜ್ಞಾನದಿಂದ ಕೂಡಿದವನಾದ್ದರಿಂದ ಸರ್ವ ಜ್ಞನೆಂದೂ ಹೇಳಲ್ಪಡುತ್ತಾನೆ. ಆದುದರಿಂದ ವೀತರಾಗನೂ ಸರ್ವಜ್ಞನೂ ಆದ ದೇವನೇ ಪರಮಹಿತೋಪದೇಶಕನಾಗುತ್ತಾನಲ್ಲದೆ ಇತರರೆಂದೂ ಆಗಲಾರರೆಂದಭಿಪ್ರಾಯವು. ಈಗ ಪರಮಹಿತೋಪದೇಶಿಯ ಲಕ್ಷಣವನ್ನು ಪ್ರತಿಪಾದಿಸುತ್ತಾರೆ.

---

● ಣೋಕಮ್ಮಕಮ್ಮಹಾರೋ । ಕವಲಾಹಾರೋಯ ಲೆಪ್ಪಮಾಹಾರೋ॥
ಓಜಮಣೊವಿಯ ಕಮಸೋ । ಆಹಾರೋ ಛವ್ವಿಹೋ ಣೇಯೋ ॥ ೧ ॥
ಣೋಕಮ್ಮಂ ತಿಥ್ಥಯರೇ । ಕಮ್ಮಂಣಾರಯೇ ಮಾಣಸೋ ಅಮರೇ ॥
ಕವಲಾಹಾರೋ ಣರಪಸು । ಉಜ್ಜೋಪಖ್ಖೀಣ ಇಗಿಲೇಪೋ ॥೨॥
[ಗೋಮಟಸಾರ ಕರ್ಮಕಾಂಡ]

# ಪರಮಹಿತೋಪದೇಶಿಯ ವರ್ಣನೆ.

**ಪರಮೇಷ್ಠೀ ಪರಂಜ್ಯೋತಿ । ರ್ವಿರಾಗೋ ವಿಮಲಃ ಕೃತೀ ॥**
**ಸರ್ವಜ್ಞೋನಾದಿಮಧ್ಯಾಂತಃ । ಸಾರ್ವಃ ಶಾಸ್ತ್ರೋಪಲಾಲ್ಯತೇ ॥**

**ಅನ್ವಯಾರ್ಥಃ**—ಯಃ—ಯಾವನು ಪರಮೇಷ್ಠೀ—ಇಂದ್ರಾದಿವಂದ್ಯವಾದ ಪರಮಾತ್ಮಸ್ವರೂಪದಲ್ಲಿರತಕ್ಕವನೋ ಪರಂಜ್ಯೋತಿಃ—ಉತ್ಕೃಷ್ಟವಾದ ಜ್ಯೋತಿಸ್ವರೂಪನೋ ವಿರಾಗಃ—ರಾಗದ್ವೇಷರಹಿತನೋ ವಿಮಲಃ—ಕರ್ಮಮಲರಹಿತನೋ ಕೃತೀ—ಕೃತಕೃತ್ಯನೋ ಸರ್ವಜ್ಞಃ—ಸಮಸ್ತಪದಾರ್ಥಗಳನ್ನು ತಿಳಿದವನೋ ಅನಾದಿಮಧ್ಯಾಂತಃ—ಜನ್ಮಜರಾಮರಣರಹಿತನೋ ಸಾರ್ವಃ—ಎಲ್ಲರಿಗೂ ಹಿತವನ್ನುಂಟು ಮಾಡುವವನೋ ಸಃ— ಅವನು ಶಾಸ್ತಾ—ಪರಮಹಿತೋಪದೇಶಿಯೆಂದು ಉಪಲಾಲ್ಯತೇ—ಹೇಳಲ್ಪಡುತ್ತಾನೆ.

**ತಾತ್ಪರ್ಯಃ**— ಲೋಕದಲ್ಲಿ ಪರಮಹಿತೋಪದೇಶಿಯಾದವನು ಜ್ಞಾನಾವರಣೀಯದರ್ಶನಾವರಣೀಯ ಮೋಹನೀಯ ಅಂತರಾಯಗಳೆಂಬ ಘಾತಿಕರ್ಮಗಳ ನಾಶದಿಂದುಂಟಾದ ಅನಂತಜ್ಞಾನ ಅನಂತದರ್ಶನ ಅನಂತವೀರ್ಯ ಅನಂತಸುಖಗಳೆಂಬೀ ಅನಂತಚತುಷ್ಟಯಗಳಿಂದ ಯುಕ್ತನೂ ದೇವೇಂದ್ರಾದಿಗಳಿಂದ ವಂದ್ಯನೂ ಸಮವಸರಣದ ಮಧ್ಯದಲ್ಲಿ ದಿವ್ಯವಾದ ಸಿಂಹಾಸನವನ್ನು ಸ್ಪರ್ಶ ಮಾಡದೆ ನಾಲ್ಕು ಅಂಗುಲದ ಮೇಲೆ ಇರತಕ್ಕವನೂ ಛತ್ರಚಾಮರಾದಿ ಅಷ್ಟಮಹಾಪ್ರಾತಿಹಾರ್ಯಗಳಿಂದ ಕೂಡಿದವನೂ ದಿವ್ಯಧ್ವನಿಯ ಮೂಲಕ ಧರ್ಮೋಪದೇಶವನ್ನು ಮಾಡುವವನೂ ಆಪ್ತ [ಯಥಾರ್ಥವಕ್ತ]ನೂ ಆದ ಭಗವಂತನಿಗೆ 'ಪರಮೇಷ್ಠಿ'ಯೆಂದು ಹೆಸರು. ಕರ್ಮಾಧೀನತೆಯಿಂದ ಇಂದ್ರಿಯಜನಿತವಾದ ಕಾಮಭೋಗ, ರಾಜ್ಯ ಮೊದಲಾದ ಸುಖ ಸಂಪತ್ತು ಇವುಗಳಲ್ಲಿರತಕ್ಕವನು ಎಂದೂ ಪರಮೇಷ್ಠಿಯಾಗಲಾರನು. ಆವರಣರಹಿತವಾದ ಅನಂತಜ್ಞಾನವುಳ್ಳವನಾದ್ದರಿಂದ 'ಪರಂಜ್ಯೋತಿ'ಯೆಂದೂ ಮೋಹನೀಯಕರ್ಮದ ಅಭಾವದಿಂದ ಪರವಸ್ತುಗಳಲ್ಲಿ ರಾಗದ್ವೇಷಗಳಿಲ್ಲದವನಾದ್ದರಿಂದ 'ವಿರಾಗ'ನೆಂದೂ ಕ್ರೋಧಮಾನ ಮೊದಲಾದ ಕಷಾಯುಗಳೆಂಬ ಭಾವ [ಕರ್ಮ]ಮಲವಿಲ್ಲದವನೂ ಜ್ಞಾನಾ

ವರಣ ಮೊದಲಾದ ದ್ರವ್ಯ[ಕರ್ಮ] ಮಲಗಳಿಲ್ಲದವನೂ ಮಲಮೂತ್ರ ಬೆವರು ಮೊದಲಾದ ಶರೀರಸಂಬಂಧವಾದ ಮಲಗಳಿಲ್ಲದವನೂ ಪರಮೌದಾರಿಕವು ಛಾಯಾರಹಿತವೂ ಕಾಂತಿಯುಕ್ತವೂ ಕ್ಷುಧಾದಿಬಾಧಾರಹಿತವೂ ಆದ ಶರೀರದಿಂದ ಕೂಡಿರುವವನೂ ಆದ್ದರಿಂದ ವಿಮಲನೆಂದೂ ಕೃತಕೃತ್ಯನೂ ಅನಂತಜ್ಞಾನ ಮೊದಲಾದ ತನ್ನಾತ್ಮಸ್ವಭಾವದಲ್ಲಿರುವವನೂ ಆಧಿವ್ಯಾಧಿಗಳಿಲ್ಲದವನೂ ಆದ್ದರಿಂದ'ಕೃತೀ' ಯೆಂದೂ ಭೂತಭವಿಷ್ಯದ್ವರ್ತಮಾನ ಕಾಲಗಳ ಸಮಸ್ತವಾದ ದ್ರವ್ಯಪರ್ಯಾಯಗಳನ್ನು ಏಕಕಾಲದಲ್ಲಿ ತಿಳಿಯುವವನಾದ್ದರಿಂದ 'ಸರ್ವಜ್ಞ'ನೆಂದೂ ಜೀವದ್ರವ್ಯಕ್ಕೆಂದೂ ನಾಶವಿಲ್ಲದಿರುವುದರಿಂದಲೂ ಅನಂತಜ್ಞಾನಾದಿಗಳ ಅಪೇಕ್ಷೆಯಿಂದಲೂ ಆತನು ಅನಂತ ಕಾಲದ ವರೆಗೆ ಶಾಶ್ವತನಾಗಿರುವದರಿಂದಲೂ 'ಅನಾದಿಮಧ್ಯಾಂತ'ನೆಂದೂ ಎಲ್ಲರಿಗೂ ಹಿತಕರವಾದ ಧರ್ಮೋಪದೇಶವನ್ನು ಮಾಡುವವನಾದ್ದರಿಂದ 'ಸಾರ್ವ' ನೆಂದೂ 'ಶಾಸ್ತೀತಿಶಾಸ್ತಾ' ಎಂಬೀ ನಿರುಕ್ತಿಯಂತೆ ಭವ್ಯರಿಗೆ ಸ್ವರ್ಗಮೋಕ್ಷಾದಿ ಉತ್ತಮ ಸ್ಥಾನವನ್ನು ಹೊಂದಿಸುವವನಾದ್ದರಿಂದ 'ಶಾಸ್ತಾ' ಎಂದೂ ಹೇಳಲ್ಪಡುತ್ತಾನೆ. ಅಂದರೆ ಭಗವಂದತನಿಗೆ ಇವುಗಳೆಲ್ಲವೂ ಸಾರ್ಥಕನಾಮಗಳಾಗಿವೆ. ಪರಮಹಿತೋಪದೇಶಿಯು ಈ ಪ್ರಕಾರವಾದ ಗುಣಗಳಿಂದ ಕೂಡಿದವನಾಗಿರಬೇಕೆಂದು ಭಾವವು. ||೭||

## ವೀತರಾಗನಾದ ಭಗವಂತನು ಉಪದೇಶವನ್ನೇಕೆ ಮಾಡುವನು ?

**ಅನಾತ್ಮಾರ್ಥಂ ವಿನಾ ರಾಗೈಃ । ಶಾಸ್ತಾ ಶಾಸ್ತಿ ಸತೋ ಹಿತಂ ||**
**ಧ್ವನನ್ ಶಿಲ್ಪಿಕರಸ್ಪರ್ಶಾನ್ಮುರಜಃ ಕಿಮಪೇಕ್ಷತೇ ||೮||**

**ಅನ್ವಯಾರ್ಥ:**— ಶಾಸ್ತಾ—ಭಗವಂತನಾದ ಜಿನೇಶ್ವರನು ಅನಾತ್ಮಾರ್ಥಂ—ತನಗೇನೂ ಪ್ರಯೋಜನವಿಲ್ಲದೆ ರಾಗೈರ್ವಿನಾ—ಪ್ರೀತಿಯಿಲ್ಲದೆಯೂ ಸತ್ಪುರುಷರಿಗೆ ಹಿತಂ—ಹಿತಕರವಾದ ಉಪದೇಶವನ್ನು ಶಾಸ್ತಿ—ಶಿಕ್ಷಿಸು [ಉಪದೇಶಿಸು] ತ್ತಾನೆ. ಶಿಲ್ಪಿಕರಸ್ಪರ್ಶಾತ್—ಮಾರ್ದಂಗಿನ ಹಸ್ತ

ಮದ ಸ್ವರೂಪವನ್ನು ಹೇಳಿ, ಮುಂದಿನ ಶ್ಲೋಕದಲ್ಲಿ ಗುರುವಿನ ಲಕ್ಷಣ ವನ್ನು ಪ್ರತಿಪಾದಿಸುತ್ತಾರೆ.

## ಗುರುವಿನ ಸ್ವರೂಪ ವರ್ಣನೆ.

**ವಿಷಯಾಶಾವಶಾತೀತೋ । ನಿರಾರಂಭೋಽಪರಿಗ್ರಹಃ**
**ಜ್ಞಾನಧ್ಯಾನತಪೋರಕ್ತಃ । ತಪಸ್ವೀ ಸ ಪ್ರಶಸ್ಯತೇ ॥೧೦॥**

ಅನ್ವಯಾರ್ಥ:—ವಿಷಯಾಶಾವಶಾತೀತಃ--ವಿಷಯ-ಪಂಚೇಂದ್ರಿಯ ಸಂಬಂಧವಾದ ವಿಷಯಗಳ ಆಶಾ-ಇಚ್ಛೆಯ ವಶ—ಅಧೀನತೆಯಿಂದ ಅತೀತ:—ದಾಟಿದವ [ರಹಿತ]ನೂ, ನಿರಾರಂಭಃ—ಕೃಷ್ಯಾದ್ಯಾರಂಭಗಳಿಲ್ಲ ದವನೂ, ಅಪರಿಗ್ರಹ:—ಬಾಹ್ಯಾಭ್ಯಂತರಪರಿಗ್ರಹಗಳಿಲ್ಲದವನೂ, ಜ್ಞಾನ ಧ್ಯಾನತಪೋರಕ್ತಃ—ಜ್ಞಾನಾಭ್ಯಾಸವೂ ಧ್ಯಾನವೂ ತಪಸ್ಸೂ ಇವುಗಳಿಂದ ಕೂಡಿದವನೂ ಯಾವನೋ, ಸ-ಅವನು ತಪಸ್ವಿ—ಗುರುವೆಂದು ಪ್ರಶಸ್ಯತೇ- ಹೇಳಲ್ಪಡುತ್ತಾನೆ.

ತಾತ್ಪರ್ಯ:— ಈ ಶ್ಲೋಕದಲ್ಲಿ ಕ್ರಮಪ್ರಾಪ್ತವಾದ ಗುರುವಿನ ಲಕ್ಷಣವನ್ನು ಪ್ರತಿಪಾದಿಸುತ್ತಾರೆ. ಗುರುವು ಕೋಮಲವೂ ಉನ್ನತವೂ ಆದ ಹಾಸಿಗೆ ಸಿಂಹಾಸನ ಮೊದಲಾದುವುಗಳಲ್ಲಿ ಮಲಗುವ ಯಾ ಕೂತು ಕೊಳ್ಳುವ 'ಸ್ಪರ್ಶನೇಂದ್ರಿಯದ' ಇಚ್ಛೆಯನ್ನೂ, ಪಕ್ವಾನ್ನ ಮೊದಲಾದ ರುಚಿಕರವಾದ ಪದಾರ್ಥಗಳನ್ನು ತಿನ್ನಬೇಕೆಂಬ 'ರಸನೇಂದ್ರಿಯ'ದ ಇಚ್ಛೆ ಯನ್ನೂ, ಸುಗಂಧವಾದ ಪುಷ್ಪವೂ ತೈಲವೂ ಮೊದಲಾದ ವಸ್ತುಗಳನ್ನು ಸೇವಿಸಬೇಕೆಂಬ 'ಘ್ರಾಣೇಂದ್ರಿಯ'ದ ಬಯಕೆಯನ್ನೂ, ಮನೋಹರವೂ ಸುಂದರವೂ ಆದ ಕಾಮಿನ್ಯಾದಿ ಪದಾರ್ಥಗಳನ್ನು ನೋಡಬೇಕೆಂಬ 'ಚಕ್ಷು ರಿಂದ್ರಿಯದ' ಇಚ್ಛೆಯನ್ನೂ, ಹೃದಯಂಗಮವಾದ ಸಂಗೀತವನ್ನು ಕೇಳ ಬೇಕೆಂಬ 'ಶ್ರೋತ್ರೇಂದ್ರಿಯ'ದ ಇಚ್ಛೆಯನ್ನೂ ತೊರೆದು ಈ ಪ್ರಕಾರವಾದ ಪಂಚೇಂದ್ರಿಯಗಳನ್ನು ತನ್ನಾಧೀನತೆಯಲ್ಲಿಟ್ಟುಕೊಂಡು [ಜಯಿಸಿದ]ವನಾ ಗಿರಬೇಕು. ಅದಲ್ಲದೆ ಪಂಚೇಂದ್ರಿಯಗಳ ವಿಷಯಭೋಗಗಳಲ್ಲಿ ಲುಬ್ಧ ನಾದವನೂ ಎಂದೂ 'ಗುರು'ವೆನಿಸಲಾರನು. ಅಸಿ [ಶಸ್ತ್ರಕ್ರಿಯೆ] ಮಸಿ [ಲೇಖನಕ್ರಿಯೆ] ವಾಣಿಜ್ಯ ವಿದ್ಯಾ [ಸಂಗೀತಾದಿ] ಶಿಲ್ಪ [ಚಿತ್ರಕಲೆ]ಗಳೆಂಬ

ಷಟ್ಕರ್ಮರೂಪವೂ ಆರಂಭಜನಿತವೂ ಆದ ಕಾರ್ಯಗಳಿಂದ ರಹಿತನಾಗಿರಬೇಕು. ಪರಿಗ್ರಹಗಳಲ್ಲಿ ಬಾಹ್ಯಪರಿಗ್ರಹಗಳೆಂದೂ ಅಂತರಂಗಪರಿಗ್ರಹಗಳೆಂದೂ ಎರಡು ವಿಧಗಳಾಗಿವೆ. *೧ ಕ್ಷೇತ್ರ [ಹೊಲಗದ್ದೆ] ೨ ವಾಸ್ತು [ ಮನೆ ] ೩ ಧನ—ಧಾನ್ಯ ೪ ದ್ವಿಪದ ( ಸೇವಕ ) ೫ ಚತುಷ್ಪದ—[ನಾಲ್ಕು ಕಾಲುಳ್ಳುದು ದನ ಕುದುರೆ ಮೊದಲಾದ್ದು] ೬ ಯಾನ [ವಾಹನ] ೭ ಶಯ್ಯಾ ]ಹಾಸಿಗೆ] ೮ ಆಸನ ೯ ಕುಪ್ಯ [ಬೆಳ್ಳಿ ಬಂಗಾರ ವಸ್ತ್ರರತ್ನ ಮೊದಲಾದ್ದು ] ೧೦ ಭಾಂಡ [ಪಾತ್ರ] ಇವುಗಳಿಗೆ ದಶವಿಧವಾದ ಬಾಹ್ಯ ಪರಿಗ್ರಹಗಳೆಂದು ಹೆಸರು. †೧ ಮಿಥ್ಯಾತ್ವಪರಿಣಾಮವೂ ೨ ಸ್ತ್ರೀವೇದ ೩ ಪುಂವೇದ ೪ ನಪುಂಸಕವೇದ ೫ ಹಾಸ್ಯ ೬ ರತಿ ೭ ಅರತಿ ೮ ಶೋಕ ೯ ಭಯ ೧೦ ಜಿಗುಪ್ಸಾ ೧೧ ಕ್ರೋಧ ೧೨ ಮಾನ ೧೩ ಮಾಯಾ ೧೪ ಲೋಭಗಳೆಂಬ ಅಂತರಂಗ [ಮನಸ್ಸು] ದಲ್ಲುಂಟಾಗುವ ಈ ಪರಿಣಾಮಗಳಿಗೆ ಅಂತರಂಗಪರಿಗ್ರಹಗಳೆಂದೂ ಹೆಸರು. ಇವುಗಳಿಗೆ ಚೇತನಾಚೇತನಪರಿಗ್ರಹಗಳೆಂದೂ ಹೇಳುತ್ತಾರೆ. ಈ ೨೪ ಭೇದಗಳುಳ್ಳುದೂ ಬಾಹ್ಯಾಭ್ಯಂತರರೂಪವೂ ಆದ ಪರಿಗ್ರಹಗಳಿಂದ ತಪಸ್ವಿಯು ರಹಿತನಾಗಿರಬೇಕು. ಮತ್ತು ನಿರಂತರವೂ ಜ್ಞಾನಾಭ್ಯಾಸವೂ ಧರ್ಮಧ್ಯಾನವೂ ಉಪವಾಸ ಮೊದಲಾದ ತಪಸ್ಸೂ ಇವುಗಳಲ್ಲಿ ಕೂಡಿದವನಾಗಿರಬೇಕು. ಈ ಪೂರ್ವೋಕ್ತಗಳಾದ ನಾಲ್ಕು ವಿಶೇಷಣಗಳಿಂದ ಕೂಡಿದವನೇ ಯಥಾರ್ಥವಾದ 'ತಪಸ್ವಿ' [ಗುರು]ಯು. ಈ ಪ್ರಕಾರವಾದ ಗುಣಗಳಿಲ್ಲದವನು ಎಂದೂ ತಪಸ್ವಿಯಾಗಲಾರನೆಂದು ಭಾವವು. ಈ ಶ್ಲೋಕದಲ್ಲಿ ಹೇಳಿರುವ 'ಜ್ಞಾನಧ್ಯಾನತಪೋರಕ್ತ: ' ಎಂಬಲ್ಲಿ 'ಜ್ಞಾನಧ್ಯಾನ ತಪೋರತ್ನ:' ಎಂಬೀ ಪಾಠಾಂತರವೂ ಇದೆ. ಜ್ಞಾನಧ್ಯಾನತಪಸ್ಸೆಂಬ ರತ್ನಗಳುಳ್ಳವನೆಂದರ್ಥವು. ಈ ಪ್ರಕಾರವಾಗಿ ದೇವಗುರುಶಾಸ್ತ್ರಗಳ ಸ್ವರೂಪವನ್ನು ವರ್ಣಿಸಿ, ಸಮ್ಯ

---

* ಕ್ಷೇತ್ರಂ ವಾಸ್ತು ಧನಂ ಧಾನ್ಯಂ । ದ್ವಿಪದಂ ಚ ಚತುಷ್ಪದಂ ॥ ಯಾನಂ ಶಯ್ಯಾಸನಂ ಕುಪ್ಯಂ ಭಾಂಡಂ ಚೇತಿ ಬಹಿರ್ದಶ ॥೧॥

† ಮಿಥ್ಯಾತ್ವವೇದಹಾಸ್ಯಾದಿಷಟ್ಕಷಾಯಚತುಷ್ಟಯಂ ॥ ಅಂತರಂಗಂ ಜಯೇತ್ಸಂಗಂ । ಪ್ರತ್ಯನೀಕಪ್ರಯೋಗತಃ ॥೨॥ [ಸಾಗಾರಧರ್ಮಾಮೃತ]

ಗ್ದರ್ಶನದ ಎಂಟು ಅಂಗಗಳಲ್ಲಿ ಮೊದಲು ನಿ:ಶಂಕಿತ ಅಂಗದ ಲಕ್ಷಣವನ್ನು ಪ್ರತಿಪಾದಿಸುತ್ತಾರೆ.

### [೧] ನಿಃಶಂಕಿತಾಂಗದ ವರ್ಣನೆ.

**ಇದಮೇವೇದೃಶಮೇವ । ತತ್ವಂ ನಾನ್ಯನ್ನ ಚಾನ್ಯಥಾ ॥**
**ಇತ್ಯಕಂಪಾಯಸಾಂಭೋವತ್ಸನ್ಮಾರ್ಗೇಽಸಂಶಯಾ ರುಚಿಃ ॥೧೧॥**

**ಅನ್ವಯಾರ್ಥ:**—ತತ್ವ-ವಸ್ತುರೂಪವು ಇದಂ ಏವ—ಇದೇನೇಯೇ ಈ ದೃಶಂ ಏವ—ಈ ಪ್ರಕಾರವಾದುದೇ ಅನ್ಯತ್-ಬೇರೆ ನ—ಅಲ್ಲ, ಅನ್ಯಥಾ ಚ ಬೇರೆ ಪ್ರಕಾರವಾಗಿಯೂ ನ-ಇಲ್ಲ ಇತಿ—ಈ ಪ್ರಕಾರವಾಗಿ ಸನ್ಮಾರ್ಗೇ-ಜಿನಧರ್ಮದಲ್ಲಿ ಆಯಸಾಂಭೋವತ್—ಕಬ್ಬಿಣವು ಎಳಕೊಂಡ ನೀರಿನಂತೆ ಆಕಂಪಾ—ಚಂಚಲವಿಲ್ಲದಿರುವ ರುಚಿಃ—ನಂಬಿಕೆಯು ಅಸಂಶಯಾ—ನಿ:ಶಂಕಿತವೆಂಬ ಮೊದಲನೆಯ ಅಂಗವಾಗಿ 'ಭವತಿ' - ಆಗುತ್ತದೆ.

**ತಾತ್ಪರ್ಯ:**—ಲೋಕದಲ್ಲಿ ಅನೇಕಪ್ರಕಾರವಾದ ಚಕ್ರ ಗದೆ ತ್ರಿಶೂಲ ಮೊದಲಾದ ಆಯುಧಧಾರಿಗಳೂ ಸ್ತ್ರೀಮೋಹಿತರೂ ರಾಗದ್ವೇಷ ಯುಕ್ತರೂ ಆದವರನ್ನು ದೇವರೆಂದು ನಂಬುವುದೂ ಪೂರ್ವಾಪರವಿರೋಧವೂ ಹಿಂಸಾಪ್ರತಿಪಾದಕವೂ ಆದ ಶಾಸ್ತ್ರವನ್ನು ನಂಬುವುದೂ ಪಾಷಂಡಿಯೂ ಲೋಭಿಯೂ ಕಾಮುಕನೂ ಮಾಯಾಚಾರಿಯೂ ಆದ ಗುರುಗಳಲ್ಲಿ ಭಕ್ತಿಯನ್ನಿಡುವುದೂ ಮಿಥ್ಯಾತ್ವವಾಗಿದೆ. ಇವುಗಳಲ್ಲಿ ನಂಬಿಕೆಯನ್ನಿಡದಿರುವವನಿಗೆ ಸಮ್ಯಗ್ದೃಷ್ಟಿಯೆಂದು ಹೆಸರು. ಸಮ್ಯಗ್ದೃಷ್ಟಿಯು ಈ ನಿ:ಶಂಕಿತ ಮೊದಲಾದ ಎಂಟು ಗುಣ [ಅಂಗ] ಗಳಿಂದ ಕೂಡಿರಬೇಕು. ಕಾದ ಎಂಟು ಗುಣಗಳಿಲ್ಲದಿದ್ದರೆ ಶಂಕಾದಿ ಎಂಟು ದೋಷಗಳಾಗುವುವು. ಕಾದ ಕಬ್ಬಿಣಕ್ಕೆ—ಖಡ್ಗಮೊದಲಾದುವುಗಳಿಗೆ ಕೊಟ್ಟ (ಎಳಕೊಂಡ) ನೀರನ್ನು ಅದು ವಾಪಸು ಬಿಡದಿರುವಂತೆ, ಸಮ್ಯಕ್ತ್ವವಂತನು ಸಪ್ತಭಯಗಳಿಲ್ಲದವನಾಗಿ ಯಥಾರ್ಥವಾದ ದೇವಗುರುಶಾಸ್ತ್ರಗಳಲ್ಲಿ ಸ್ಥಿರವಾದ ನಂಬಿಕೆಯನ್ನಿಡುವುದಕ್ಕೆ 'ನಿಃಶಂಕಿತ' ಅಂಗವೆಂದು ಹೆಸರು. ೧ ಈ ಸಂಸಾರದಲ್ಲುಂಟಾಗುವ ಭಯಕ್ಕೆ 'ಇಹಲೋಕಭಯ' ವೆಂದೂ, ೨ ಪರಲೋಕದಲ್ಲುಂಟಾಗುವ ಭಯಕ್ಕೆ 'ಪರಲೋಕಭಯ'ವೆಂದೂ ೩. ಮರಣಉಂಟಾಗುವ

ದೆಂಬ ಭಯಕ್ಕೆ 'ಮರಣಭಯ'ವೆಂದೂ, ೪ ರೋಗ ಮೊದಲಾದ ವೇದನೆ ಗಳಿಂದುಟಾಗುವ ಭಯಕ್ಕೆ 'ವೇದನಾಭಯ'ವೆಂದೂ, ೫ ತನಗಾರೂ ರಕ್ಷ ಕರಿಲ್ಲವೆಂಬೀ ಸಂಕಲ್ಪದಿಂದುಂಟಾಗುವ ಭಯಕ್ಕೆ 'ಅರಕ್ಷಕಭಯ'ವೆಂದೂ, ೬ ತನ್ನ ಧನಧಾನ್ಯ ಮೊದಲಾದ ದ್ರವ್ಯಗಳನ್ನು ಇತರರು ಅಪಹರಿಸುತ್ತಾರೆ ಎಂಬೀ ಭಯಕ್ಕೆ 'ಅಗುಪ್ತಿಭಯ'ವೆಂದೂ, ೭ ಸಿಡಿಲುಪಾತ ಮೊದಲಾದು ವುಗಳಿಂದುಂಟಾಗುವ ಭಯಕ್ಕೆ 'ಅಕಸ್ಮಾದ್ಭಯ'ವೆಂದೂ ಹೆಸರು. ಈ ರೀತಿಯಾಗಿ ಭಯವು ಏಳು ಪ್ರಕಾರವಾಗಿದೆ ಆದುದರಿಂದ ಸಮ್ಯಗ್ದೃಷ್ಟಿಯು ಪೂರ್ವೋಕ್ತವಾದ ಸಪ್ತಭಯಗಳಿಲ್ಲದವನಾಗಿಯೂ ನಿಃಸಂಶಯನಾಗಿಯೂ ಸತ್ಯವಾದ ದೇವಶಾಸ್ತ್ರಗುರುಗಳಲ್ಲಿ ವಿಶ್ವಾಸವನ್ನಿಡಬೇಕೆಂದು ಭಾವವು. ಈ ಅಂಗದಲ್ಲಿ ಅಂಜನಚೋರನು ಪ್ರಸಿದ್ಧಿಯನ್ನು ಹೊಂದಿರುವನು.

## ೧ ನೆಯ ಅಂಜನಚೋರನ ಕಥೆ.

ಭದ್ರಾವತೀ ಎಂಬ ಪಟ್ಟಣದಲ್ಲಿ ಧನ್ವಂತರಿ ಮತ್ತು ವಿಶ್ವಲೋಮ ನೆಂಬೀರ್ವರು ಮಿತ್ರರಿದ್ದರು. ಅವರೀರ್ವರಲ್ಲಿ ಧನ್ವಂತರಿಯು ಸಮ್ಯಗ್ದೃಷ್ಟಿ ಯಾಗಿಯೂ ವಿಶ್ವಾನುಲೋಮನು ಮಿಥ್ಯಾದೃಷ್ಟಿಯಾಗಿಯೂ ಇದ್ದನು. ಮುಂದೆ ಅವರೀರ್ವರೂ ಕಾಲಕ್ರಮೇಣ ತಮ್ಮತಮ್ಮ ಕರ್ಮಾನುಸಾರವಾಗಿ ಮರಣವನ್ನು ಹೊಂದಿ, ಧನ್ವಂತರಿಯು ಸ್ವರ್ಗದಲ್ಲಿ ಅಮಿತಪ್ರಭನೆಂಬ ದೇವನಾಗಿಯೂ ವಿಶ್ವಾನುಲೋಮನು ಜೋತಿರ್ಲೋಕದಲ್ಲಿ ವಿದ್ಯುತ್ಪ್ರಭ ನೆಂಬ ದೇವನಾಗಿಯೂ ಹುಟ್ಟಿದರು. ಅಮಿತಪ್ರಭದೇವನು ತನ್ನ ಪೂರ್ವ ಭವಮಿತ್ರನಾದ ಜ್ಯೋತಿರ್ಲೋಕವಾಸಿಯಾದ ವಿದ್ಯುತ್ಪ್ರಭನಿಗೆ ಜೈನ ಧರ್ಮವನ್ನು ಸ್ವೀಕರಿಸುವುದಕ್ಕಾಗಿ ಉಪದೇಶವನ್ನು ಮಾಡಲಾರಂಭಿಸಿದನು. ಪರಂತು ಅದಕ್ಕವನು ಒಡಂಬಡುತ್ತಿರಲಿಲ್ಲವು, ಆದರೂ ನಿರಂತರವೂ ವಾದ ವಿವಾದಗಳು ನಡೆದು 'ನಾವೀರ್ವರು ಮರ್ತ್ಯಲೋಕಕ್ಕೆ ಹೋಗಿ ಪರೀಕ್ಷಿ ಸುತ್ತಿರಲು ಯಾರ ಧರ್ಮವು ಉತ್ತಮವೆಂದು ನಿರ್ಣೈಸಲ್ಪಡುವದೋ ಆ ಧರ್ಮವನ್ನು ನಾವುಗಳು ಸ್ವೀಕರಿಸತಕ್ಕದ್ದೆ'ಂದು ಪ್ರತಿಜ್ಞೆಯನ್ನು ಮಾಡಿ ಅಲ್ಲಿಗೆ ಹೋಗಿ ಪಕ್ಷಿಯ ರೂಪವನ್ನು ಧಾರಣೆ ಮಾಡಿದವರಾಗಿ ಮಿಥ್ಯಾ ದೃಷ್ಟಿಯೂ ಜಟಾಧಾರಿಯೂ ಆದ 'ಜಮದಗ್ನಿ ಋಷಿ'ಯನ್ನು ತಪೋಭ್ರ-

ಷ್ಟನನ್ನಾಗಿ ಮಾಡಿದರು. ಆ ಮೇಲೆ ಜೈನಸಾಧುಗಳ ಪರೀಕ್ಷಾರ್ಥವಾಗಿ ರಾಜಗೃಹಪಟ್ಟಣಕ್ಕೆ ಬಂದರು. ಅಲ್ಲಿ ಧರ್ಮಪರಾಯಣನಾದ ಜಿನದತ್ತಶ್ರೇಷ್ಠಿಯು ಪ್ರತಿತಿಂಗಳ ಬಹುಳ ಚತುರ್ದಶಿಯ ರಾತ್ರೆಯಲ್ಲಿ ಸ್ಮಶಾನಕ್ಕೆ ಹೋಗಿ ಕಾಯೋತ್ಸರ್ಗದಿಂದ ಧ್ಯಾನವನ್ನು ಮಾಡುತ್ತಿದ್ದನು. ಹೀಗಿರುತ್ತಿರಲು ಒಂದು ದಿನ ಶ್ರೇಷ್ಠಿಯು ಧ್ಯಾನಮಾಡುತ್ತಿರಲು ಪಕ್ಷಿರೂಪಗಳಾದ ದೇವತೆಗಳೀರ್ವರೂ ಅಲ್ಲಿಗೆ ಬಂದರು. ಆಗ ಅಮಿತ್ರಪ್ರಭನು ತನ್ನ ಮಿತ್ರನಾದ ವಿದ್ಯುತ್ಪ್ರಭನನ್ನು ಕುರಿತು, "ಎಲೋ ಮಿತ್ರ! ಜೈನಸಾಧುಗಳ ಪರೀಕ್ಷೆಯನ್ನು ಮಾಡುವದಂತಿರಲಿ. ಧ್ಯಾನಾಸಕ್ತನಾದ ಈ ಶ್ರಾವಕೋತ್ತಮನನ್ನು ಧ್ಯಾನಚ್ಯುತನನ್ನಾಗಿ ಮಾಡು" ಎಂದು ಹೇಳಿ ಶ್ರೇಷ್ಠಿಯನ್ನು ತೋರಿಸಿದನು. ಆಗ ವಿದ್ಯುತ್ಪ್ರಭದೇವನು ಹಲವು ವಿಧವಾದ ಉಪಸರ್ಗಗಳನ್ನುಂಟು ಮಾಡಿದರೂ ಶ್ರೇಷ್ಠಿಯು ವಿಚಲಿತನಾಗದೆ ತನ್ನ ಧ್ಯಾನೈಕಾಗ್ರತೆಯಲ್ಲಿದ್ದನು. ಮತ್ತೂ ದೇವನು ಶಾಂತನಾಗದೆ ಪ್ರಾತಃಕಾಲದವರೆಗೆ ಘೋರವಾದ ಉಪಸರ್ಗವನ್ನು ಕೊಟ್ಟು ಹತಾಶನಾಗಿ ಕುಳಿತುಕೊಂಡನು. ಬೆಳಗಾದನಂತರ ಜಿನದತ್ತನು ಧ್ಯಾನವಿಮುಕ್ತನಾಗಲು ದೇವತೆಗಳೀರ್ವರೂ ಹರ್ಷಚಿತ್ತರಾಗಿ ದಿವ್ಯರೂಪವನ್ನು ಧರಿಸಿ, ಶ್ರೇಷ್ಠಿಯನ್ನು ಭಕ್ತಿಪೂರ್ವಕ ನಮಿಸಿ ದಿವ್ಯವಾದ ವಸ್ತ್ರಾಭರಣಗಳಿಂದ ಸತ್ಕರಿಸಿ, ಹಲವು ವಿಧವಾಗಿ ಸ್ತುತಿಸಿ, "ಎಲೈ ಭವ್ಯನೇ! ನಿನ್ನ ಏಕಾಗ್ರತೆಗೆ ಮೆಚ್ಚಿ ನಿನಗೆ 'ಆಕಾಶಗಾಮಿನೀ' ವಿದ್ಯೆಯನ್ನು ಕೊಟ್ಟಿರುವುವೆವು. ಇದನ್ನು ಅಪೇಕ್ಷಿಸುವವರು ಪಂಚನಮಸ್ಕಾರ ಮಂತ್ರಾರಾಧನೆಯಿಂದ ಸಾಧಿಸಿಕೊಳ್ಳಬಹುದು" ಎಂದು ಹೇಳಿ ನಮಸ್ಕರಿಸಿ, ತಮ್ಮ ಸ್ಥಾನಕ್ಕೆ ಹೊರಟು ಹೋದರು. ಇಲ್ಲಿ ಜಿನದತ್ತನು ತನಗೆ ನೂತನವಾಗಿ ಪ್ರಾಪ್ತಿಯಾದ ವಿದ್ಯಾಬಲದಿಂದ ವಿಮಾನಾರೂಢನಾಗಿ ಪ್ರತಿನಿತ್ಯವೂ ಅಕೃತ್ರಿಮಚೈತ್ಯಾಲಯಕ್ಕೆ ಹೋಗುತ್ತಿದ್ದನು. ಈ ಕ್ರಮವನ್ನು ನೋಡಿ ಆ ಊರಿನ ಸೋಮದತ್ತನೆಂಬ ಹೂವಾಡಿಗನು ಒಂದು ದಿವಸ ಶ್ರೇಷ್ಠಿಯನ್ನು ಕುರಿತು "ತಾವು ದಿನಾಲು ಎಲ್ಲಿ ಹೋಗುತ್ತಿರಿ?" ಎಂದು ಕೇಳಲು, "ನಾನು 'ಆಕಾಶಗಾಮಿನೀ' ವಿದ್ಯೆಯ ಸಹಾಯದಿಂದ ಅಕೃತ್ರಿಮಜಿನಚೈತ್ಯಾಲಯಗಳ ದರ್ಶನಕ್ಕೆ ಹೋಗುತ್ತೇನೆ"ಎಂದನು. ಇದನ್ನು ಕೇಳಿ

ವನಪಾಲನು "ತಾವು ನನಗೂ ಆ ಅಮೋಘವಾದ ವಿದ್ಯೆಯನ್ನುಪದೇಶಿಸಿದರೆ, ನಾನೂ ಅಲ್ಲಿಯ ದೇವದರ್ಶನ, ಪೂಜೆ ಮೊದಲಾದುವುಗಳನ್ನು ಮಾಡಿ ಧನ್ಯನಾಗುವೆನು" ಎಂದ ಮೇಲೆ ಶ್ರೇಷ್ಠಿಯು ಆತನಿಗೆ ಪಂಚನಮಸ್ಕಾರ ಮಂತ್ರಾರಾಧನಾವಿಧಿಯನ್ನು ಹೇಳಿ, ಅದನ್ನು ಎರಡು ದಿವಸ ಉಪವಾಸ ವಿದ್ದು ದೃಢ ಮನಸ್ಕನಾಗಿ ಜಪಿಸಿ, ಮೂರನೆಯ ದಿನ ಬಹುಳ ಚತುರ್ದಶಿಯ ರಾತ್ರೆ ಅತಿಭಯಂಕರವಾದ ಸ್ಮಶಾನಕ್ಕೆ ಹೋಗಿ, ಅಲ್ಲಿರುವ ಉನ್ನತವಾದ ವಟ [ಆಲದ] ವೃಕ್ಷದ ಕೊಂಬೆಗೆ ೧೦೮ ಪದರುಗಳುಳ್ಳುದೂ ದರ್ಭೆಯಿಂದ ಮಾಡಲ್ಪಟ್ಟುದೂ ಆದ ನೆಲುವನ್ನು ಕಟ್ಟಿ ಅದರ ಬುಡದಲ್ಲಿ ತೀಕ್ಷ್ಣವೂ ದೇದೀಪ್ಯಮಾನವೂ ಮೇಲ್ಮುಖವಾಗುಳ್ಳುದೂ ಆದ ಆಯುಧಗಳನ್ನು ಇರಿಸಿ, ಆ ನೆಲುವಿನಲ್ಲಿ ಕೂತುಕೊಂಡು ಪಂಚನಮಸ್ಕಾರವನ್ನು ಸ್ಮರಿಸಿ ಕತ್ತರಿಸತಕ್ಕದ್ದೆಂದು ಹೇಳಿದನು. ಆ ರೀತಿಯಾಗಿ ನೆಲುವಿನ ಒಂದೊಂದೇ ಪದರುಗಳನ್ನು ಕತ್ತರಿಸುತ್ತಿರಲು ಅವನ ಲಕ್ಷವು ಕೆಳಗಿರುವ ಆಯುಧಗಳ ಕಡೆಗೆ ಹೋಗಿ ಭಯಭೀತನಾಗಿ "ಜಿನದತ್ತಶ್ರೇಷ್ಠಿಯ ಮಾತು ಸುಳ್ಳಾದರೆ ವ್ಯರ್ಥವಾಗಿ ಸಾಯಬೇಕಾಗುವುದು ಶ್ರೇಷ್ಠಿಯಮಾತನ್ನಾದರೂ ಸುಳ್ಳೆಂದು ಹೇಗೆಂದನ್ನಲಿ! " ಎಂಬಿತ್ಯಾದಿ ವಿಚಾರಗಳಿಂದ ಸಂಶಯಚಿತ್ತನಾಗಿ ನೆಲುವನ್ನು ಕತ್ತರಿಸದೆ ಇರುತ್ತಿದ್ದನು.

ಹೀಗಿರುತ್ತಿರಲು ಇತ್ತ ಆದೇ ನಗರದಲ್ಲಿ ವಿಲಾಸಿನಿಯೆಂಬ ವೇಶ್ಯೆಯು ಇರುತ್ತಿದ್ದಳು ಆಕೆಯು ತನ್ನ ವಿಟನಾದ ಅಂಜನಚೋರನೊಡನೆ ಒಂದು ದಿವಸ ರಾತ್ರಿಯಲ್ಲಿ ಹೀಗೆಂದಳು. "ನಮ್ಮ ನಗರದ ರಾಜನಾದ ಪ್ರಜಾಪಾಲ ಮಹಾರಾಜರ ಪತ್ನಿ ಕನಕರಾಣಿಯವರ ಕಂಠದಲ್ಲಿರುವ ರತ್ನಹಾರವನ್ನು ತಂದುಕೊಟ್ಟರೆ ಮಾತ್ರ ತಮ್ಮ ಪ್ರೇಮಕ್ಕೆ ಪಾತ್ರಳಾಗುವೆನು." ಇಂತೆಂದಳು.. ಇದನ್ನುಕೇಳಿ ಅಂಜನಚೋರನು, "ಎಲೈ ವಿಲಾಸಿನಿಯೇ! ಇದಾವ ದೊಡ್ಡ ಮಾತು! ಈಗಲೇ ತಂದುಕೊಡುವೆನೆ"ಂದು ಹೇಳಿ ಹೊರಟು, ಕಣ್ಣಿಗೆ ತನ್ನ ಅಂಜನವನ್ನು ಪ್ರಯೋಗಿಸಿಕೊಂಡು ಅರಮನೆಗೆ ಹೋದನು. ಅಲ್ಲಿ ಅಂತಃಪುರವನ್ನು ಪ್ರವೇಶಿಸಿ, ರಾಣಿಯ ಕಂಠದಿಂದ ಹಾರವನ್ನು ಅಪಹರಿಸಿಕೊಂಡು ಬರುತ್ತಿರುವಲ್ಲಿ ಈ ದಿವ್ಯವಾದ ರತ್ನದ

ಪ್ರಕಾಶವನ್ನು ದ್ವಾರಪಾಲಕರೂ ನಗರರಕ್ಷಕರೂ ನೋಡಿ, ಆಶ್ಚರ್ಯ-ಚಕಿತರಾಗಿ ಅದನ್ನು ಕಂಡುಹಿಡಿಯಬೇಕೆಂದು ಹಿಂಬಾಲಿಸಿದರು. ಪರಂತು ಇವರು ನನ್ನನ್ನು ಬಿಡುವಂತಿಲ್ಲವೆಂದು ಅಂಜನಚೋರನು ತಿಳಿದು, ಆ ರತ್ನ ಹಾರನ್ನೊಂದೆಡೆ ಬಿಸಾಡಿ ಓಡಿ ಹೋದನು. ಹೀಗೆ ಹೋಗುತ್ತಿರುವಲ್ಲಿ ನಮ್ಮ ಪೂರ್ವಪರಿಚಿತನಾದ ನೆಲುವನ್ನು ಕತ್ತರಿಸುತ್ತಿರುವ ಸೋಮದತ್ತನು ದೃಷ್ಟಿಗೋಚರನಾದನು, ಆತನನ್ನು ನೋಡಿ ನೀನೇನು ಮಾಡುತ್ತಿದ್ದಿಯೇ? ಎನಲು, ನಾನು ಜಿನದತ್ತಶ್ರೇಷ್ಠಿಯು ಹೇಳಿರುವ ಮಂತ್ರಸಿದ್ಧಿಯನ್ನು ಮಾಡುತ್ತಿರುವೇನೆಂದನು. ಆಗ ಅಂಜನಚೋರನು ನಾನಂತೂ ಯಮದೂತನಂತಿರುವ ನಗರಕಕ್ಷಕರ ಕೈಯಿಂದ ಪಾರಾಗಿ ಇಲ್ಲಿಗೆ ಬಂದಿರುವೆನು. ಆದರೂ ನನ್ನನ್ನು ಅವರೆಂದೂ ಬಿಡಲಾರರು. ಆದುದರಿಂದ ಅವರ ಕೈಯಲ್ಲಿ ಸಿಕ್ಕಿ ಪ್ರಾಣಕಳಕೊಳ್ಳುವದಕ್ಕಿಂದ ಇದು ಒಳ್ಳೆದೆಂದು ಯೋಚಿಸಿ, ಆತನಿಂದ ಮಂತ್ರವಿಧಿಯನ್ನು ಕೇಳಿಕೊಂಡು ತಾನು ನಿಃಶಂಕಿತನಾಗಿ ನೆಲುವನ್ನು ಪ್ರವೇಶಿಸಿ, "ಜಿನದತ್ತಶ್ರೇಷ್ಠಿಯು ಮಾತ ಸತ್ಯವಾದುದೂ, ಅದೆಂದೂ ಸುಳ್ಳಾಗಲಾರದು ಅದೇ ಎನಗೆ ಗತಿ"ಯೆಂದು ವಿಶ್ವಾಸವನ್ನಿಟ್ಟು ದೃಢ ಮನಸಿನಿಂದ ಪಂಚ ನಮಸ್ಕಾರಮಂತ್ರವನ್ನು ಜಪಿಸುತ್ತಾ ನೆಲುವನ್ನು ಕೊಯ್ದನು. ಪರಂತು ಆತನು ಕೆಳಗಿರುವ ಶಸ್ತ್ರಗಳ ಮೇಲೆ ಬಂದು ಬೀಳುವಷ್ಟರಲ್ಲಿ 'ಆಕಾಶಗಾಮಿನಿ' ವಿದ್ಯೆಯು ಪ್ರಕಟವಾಗಿ, ಆತನನ್ನು ಅಂತರಾಳದಲ್ಲಿ ಧರಿಸಿ, ನಾನು ನಿನ್ನ ಭಕ್ತಿಗೆ ಪ್ರಸನ್ನಳಾಗಿದ್ದೇನೆ ನಿನಗೇನಾಗ ಬೇಕೆಂದಳು? ಅದಕ್ಕವನು ನನ್ನನ್ನು ಜಿನದತ್ತಶ್ರೇಷ್ಠಿಯು ಇದ್ದ ಕಡೆಗೆ ತೆಗೆದುಕೊಂಡು ಹೋಗಬೇಕೆಂದನು. ಆಗ ವಿದ್ಯಾದೇವತೆಯು ಆತನನ್ನು ವಿಮಾನದಲ್ಲಿ ಕುಳ್ಳಿರಿಸಿ, ಸುದರ್ಶನಮಹಾಮೇರು ಪರ್ವತದಲ್ಲಿರುವ ಅಕೃತ್ರಿಮಚೈತ್ಯಾಲಯಕ್ಕೆ ತೆಗೆದುಕೊಂಡು ಹೋಗಿ ಬಿಟ್ಟಿತು. ಆತನು ಅಕೃತ್ರಿಮಚೈತ್ಯಾಲಯಗಳ ದರ್ಶನವನ್ನು ಮಾಡಿ ಪ್ರಸನ್ನಚಿತ್ತನಾಗಿ ಅಕೃತ್ರಿಮಚೈತ್ಯಾಲಯಗಳ ದರ್ಶನವನ್ನು ಮಾಡಿ ಬಹುಭಕ್ತಿಯಿಂದ ಜಿನದತ್ತಶ್ರೇಷ್ಠಿಯನ್ನು ನಮಸ್ಕರಿಸಿ, "ಶ್ರೇಷ್ಠಿವರ್ಯರೇ! ತಮ್ಮಗಳ ಪುಣ್ಯಪ್ರಭಾವದಿಂದ ನನಗೆ ಈ ವಿದ್ಯೆಯು ಪ್ರಾಪ್ತವಾಯ್ತು ಅದಲ್ಲದೆ ಇಂಥಾ ಪವಿತ್ರವೂ ಪಾಪನಾಶಕವೂ ಆದ ಈ ಅಕೃತ್ರಿಮಚೈತ್ಯಾ

ಲಯಗಳ ದರ್ಶನದಿಂದ ನಾನಿಂದಿಗೆ ಕೃತಾರ್ಥನಾದೆನು. ನನಗೆ ಜೈನ ಧರ್ಮದ ಉಪದೇಶವನ್ನು ಮಾಡಬೇಕೆಂದನು" ಆಗ ಜಿನದತ್ತಶ್ರೇಷ್ಠಿಯು ಈ ಪ್ರಕಾರವಾದ ಅಂಜನಚೋರನ ಮಾತನ್ನು ಕೇಳಿ, ಈತನನ್ನು ಅಲ್ಲಿರುವ ಚಾರಣಮುನಿಗಳ ಸಮೀಪಕ್ಕೆ ಕರೆದುಕೊಂಡು ಹೋಗಿ ಯಥೋಚಿತವಾದ ಉಪಚಾರಗಳಾದನಂತರ ಈತನಿಗೆ ಧರ್ಮೋಪದೇಶವನ್ನು ಮಾಡಬೇಕೆಂದು ಪ್ರಾರ್ಥಿಸಿದನು. ಆಗ ಮುನಿಗಳು ಸಾಗಾರ ಮತ್ತು ಯತಿಧರ್ಮದ ಸ್ವರೂಪವನ್ನು ಚೆನ್ನಾಗಿ ಬೋಧಿಸಿದರು. ಆಗ ಅಂಜನಚೋರನು ಸಂಸಾರದಲ್ಲಿ ವೈರಾಗ್ಯಪರಾಯಣನಾಗಿ ಮುನಿದೀಕ್ಷೆಯನ್ನು ಸ್ವೀಕರಿಸಿ, ಘೋರತರವಾದ ತಪಸ್ಸಿನ ಬಲದಿಂದ ಕರ್ಮಕ್ಷಯವನ್ನು ಮಾಡಿ ಕ್ರಮೇಣ ಶಾಶ್ವತವಾದ ಮೋಕ್ಷಸುಖವನ್ನು ಪಡೆದನು.

ಈ ಕಥೆಯ ಸಾರಾಂಶವೇನಂದರೆ? ಅಂಜನಚೋರನು ಸಪ್ತವ್ಯಸನಾಸಕ್ತನಾಗಿದ್ದರೂ ಜೈನಧರ್ಮದಲ್ಲಿ ನಿಃಶಂಕಿತಭಾವದಿಂದ ದೃಢವಿಶ್ವಾಸವನ್ನಿಟ್ಟು ಪಂಚನಮಸ್ಕಾರಮಂತ್ರೋಚ್ಚಾರಣೆಯಿಂದ 'ಆಕಾಶಗಾಮಿನಿ' ವಿದ್ಯೆಯು ಪ್ರಾಪ್ತಿಯಾಗಿ ಅಕೃತ್ರಿಮಚೈತ್ಯಾಲಯಗಳ ದರ್ಶನದಿಂದ ಪುನೀತನಾಗಿ ಮುನಿದೀಕ್ಷೆಯನ್ನು ಪಡೆದು ಮೋಕ್ಷಸುಖವನ್ನು ಸಂಪಾದಿಸಿಕೊಂಡನು. ಆದುದರಿಂದ ಎಲ್ಲರೂ ಪಂಚನಮಸ್ಕಾರಮಂತ್ರವನ್ನು ನಂಬಿ, ಸಮ್ಯಕ್ತ್ವದ ನಿಃಶಂಕಿತಾಂಗವನ್ನು ಧಾರಣೆಮಾಡಿಕೊಳ್ಳಬೇಕೆಂದಭಿಪ್ರಾಯವು.

**[ ೨ ] ನಿಃಕಾಂಕ್ಷಿತ ಅಂಗದ ವರ್ಣನೆ.**

**ಕರ್ಮಪರವಶೇ ಸಾಂತೇ । ದುಃಖೈರಂತರಿತೋದಯೇ ॥**
**ಪಾಪಬೀಜೇ ಸುಖೇನಾಸ್ಥಾ । ಶ್ರದ್ಧಾನಾಕಾಂಕ್ಷಣಾ ಸ್ಮೃತಾ ॥**

**ಅನ್ವಯಾರ್ಥ**:— ಕರ್ಮಪರವಶೇ—ಕರ್ಮಗಳ ಅಧೀನವು ಸಾಂತೇ—ಕೊನೆಯುಳ್ಳುದೂ ದುಃಖೈಃ—ದುಃಖಗಳಿಂದ ಅಂತರಿತೋದಯೇ—ಪ್ರಾಪ್ತವಾದ [ಮಿಶ್ರ] ಫಲವುಳ್ಳುದೂ ಪಾಪಬೀಜೆ— ಪಾಪಕ್ಕೆ ಕಾರಣವೂ ಆದ ಸುಖೇ—ಸಂಸಾರಸುಖದಲ್ಲಿ ಅನಾಸ್ಥಾ—ಅನಿತ್ಯರೂಪವಾದ—ಶ್ರದ್ಧಾ—ನಂಬಿಕೆಯು ಅನಾಕಾಂಕ್ಷಣಾ—ನಿಃಕಾಂಕ್ಷಿತವೆಂಬ ಯರಡನೆಯ ಅಂಗವೆಂದು ಸ್ಮೃತಾ—ಹೇಳಲ್ಪಟ್ಟಿದೆ.

**ತಾತ್ಪರ್ಯ**-ಸುಖವು ಸಾಂಸಾರಿಕಸುಖವೆಂದೂ ಮುಕ್ತಿಸುಖವೆಂದೂ ಎರಡು ಪ್ರಕಾರವಾಗಿದೆ. ಪಂಚೇಂದ್ರಿಯಗಳಿಂದುಂಟಾದ ಸುಖಕ್ಕೆ ಸಾಂಸಾರಿಕ ಸುಖವೆಂತಲೂ, ಅನಂತವೂ ಶಾಶ್ವತವೂ ಆತ್ಮಜನ್ಯವೂ ಆದ ಸುಖಕ್ಕೆ ಮುಕ್ತಿಸುಖವೆಂತಲೂ ಹೆಸರು ಇಂದ್ರಿಯಜನಿತವಾದ-ಸಾಂಸಾರಿಕಸುಖವೂ ಪುಣ್ಯಕರ್ಮದ ಉದಯದಿಂದುಂಟಾಗುವುದು, ಪುಣ್ಯದ ಉದಯ—ಸಹಾಯವಿಲ್ಲದೆ ನಾವು ಸಾವಿರಾರು ಪ್ರಯತ್ನವನ್ನು ಮಾಡಿದರೂ ಸುಖವು ದೊರೆಯಲಾರದು. ಆದುದರಿಂದ ಸಾಂಸಾರಿಕಸುಖವು ಪರಾಧೀನವಾದುದು. ಯದ್ಯಪಿ, ಪುಣ್ಯಕರ್ಮದ ಉದಯದಿಂದ ಸುಖಪ್ರಾಪ್ತಿಯಾದರೂ ಎಂದಾದರೊಮ್ಮೆ ನಾಶವನ್ನು ಹೊಂದತಕ್ಕದ್ದೂ ಮತ್ತು ದುಃಖದಿಂದ ಕೂಡಿದುದೂ ಪಾಪಕ್ಕೆ ಕಾರಣವಾದುದೂ ಏಂದು ತಿಳಿದು, ತೊರೆದು ಬಿಡುವದಕ್ಕೆ ನಿಃಕಾಂಕ್ಷಿತ ಅಂಗವೆಂದು ಹೆಸರು. ಈ ಅಂಗ[ಗುಣ]ದಲ್ಲಿ ಅನಂತಮತಿಯು ಪ್ರಸಿದ್ಧಿಯನ್ನು ಹೊಂದಿರುವಳು.

### ೨ ನೆಯ ಅನಂತಮತಿಯ ಕಥೆ.

ನಮ್ಮಿ ಭಾರತವರ್ಷದ ಅಂಗದೇಶದಲ್ಲಿ ಚಂಪಾಪುರವೆಂಬೀ ಪಟ್ಟಣವಿತ್ತು. ಅದನ್ನು ವಸುವರ್ಧನನೆಂಬ ರಾಜನು ಪರಿಪಾಲಿಸುತ್ತಿದ್ದನು. ಅವನಿಗೆ ಲಕ್ಷ್ಮೀಮತಿಯೆಂಬ ಹೆಂಡತಿಯಿದ್ದಳು. ಅದೇ ನಗರದಲ್ಲಿ ಪ್ರಿಯದತ್ತನೆಂಬ ರಾಜಶ್ರೇಷ್ಠಿಯು ಅಂಗವತಿಯೆಂಬ ಪತ್ನಿಯೊಡನೆ ವಾಸಿಸುತ್ತಿದ್ದನು. ಪತಿಪತ್ನಿಯರು ಸಮ್ಯಕ್ತ್ವವಂತರೂ ಧರ್ಮಕಾರ್ಯಾಸಕ್ತರೂ ಆಗಿದ್ದರು. ಇವರೀರ್ವರಿಗೆ ಅನಂತಮತಿ ಯೆಂಬ ಕನ್ನಿಕೆಯು ಇದ್ದಳು ಈಕೆಯು ಬಾಲ್ಯಕಾಲದಲ್ಲಿಯೇ ಸುಶಿಕ್ಷಿತಳಾಗಿ ದೇವಪೂಜಾದಿ ಕಾರ್ಯಗಳಲ್ಲಿ ತತ್ಪರಳಾಗಿದ್ದಳು. ಹೀಗಿರಲೊಂದುದಿನನಂದೀಶ್ವರ (ಅಷ್ಟಾಹ್ನಿಕ ಪರ್ವದಲ್ಲಿ ದಂಪತಿಗಳೀರ್ವರೂ ಧರ್ಮಕೀರ್ತ್ಯಾಚಾರ್ಯರ ಸಮೀಪಕ್ಕೆ ಹೋಗಿ ನಂದೀಶ್ವರವ್ರತವನ್ನು ಸ್ವೀಕರಿಸಿಕೊಂಡು ಎಂಟು ದಿವಸಗಳ ವರೆಗೆ ಬ್ರಹ್ಮಚರ್ಯವ್ರತವನ್ನು ಪರಿಗ್ರಹಿಸಿದರು, ಆಗ ಅನಂತಮತಿಯು ಗುರುಗಳೊಡನೆ ''ಪೂಜ್ಯರೆ! ನನಗೂ ಕೂಡ ಆ ವ್ರತವನ್ನು ಕೊಡಿರೆಂದಳು'' ಆಗ ಯತಿಗಳು ವಿನೋದಕ್ಕಾಗಿ ನಿನಗೂ ಆ ವ್ರತವಿರಲಿ ಎಂದರು, ಅಂತೆಯೇ

ಆಕೆಯೂ ಆ ವ್ರತವನ್ನು ಪರಿಪಾಲಿಸುತ್ತಿದ್ದಳು ಮುಂದೆ ಆಕೆಯ ಬಾಲ್ಯಾವಸ್ಥೆಯು ಹೋಗಿ ಯೌವನವು ಪ್ರಾಪ್ತವಾಗುತ್ತಿರಲು ಈಕೆಗೆ ವಿವಾಹ ಮಹೋತ್ಸವವನ್ನು ಜರಗಿಸಬೇಕೆಂದು ದಂಪತಿಗಳು ಯೋಚಿಸುತ್ತಿರುವಲ್ಲಿ, ಅದನ್ನು ಅನಂತಮತಿಯು ತಿಳಿದು, ಪಿತಾಜಿಯರೇ ! ಇದೇನು ವಿವಾಹ ಸಂಭ್ರಮ ? ಅಂದೆನಗೆ—ಧರ್ಮಕೀರ್ತ್ಯಾಚಾರ್ಯರ ಬದಿಯಲ್ಲಿ ಬ್ರಹ್ಮಚರ್ಯವ್ರತವನ್ನು ಕೊಡಿಸಿರಲ್ಲವೇ? ಅದೇಕೆ ಇಷ್ಟುಬೇಗ ಮರೆತಿರುವಿರೇನು ? ಅದಾಗದೆಂದಳು. ಆಗಶ್ರೇಷ್ಠಿಯು:—ಮಗಳೇ! ಅಂದು ಗುರುಗಳು ವಿನೋದಕ್ಕಾಗಿ ನಿನಗೂ ಆ ವ್ರತವಿರಲೆಂದು ಅಂದದ್ದೇನೋ ನಿಜ ! ಆದರೂ ಆ ವ್ರತದಕಾಲಾವಧಿಯು ಎಂಟೇ ದಿವಸಗಳು ಮಾತ್ರವಲ್ಲವೇ? ಆ ಅವಧಿಯು ಅಂದೇ ಪರಿಸಮಾಪ್ತಿಯಾಗಿದೆಯಲ್ಲವೇ? ಇಂತೆಂದನು ಆಗ ಅನಂತಮತಿಯು ಪಿತೃವರ್ಯರೇ! ಧರ್ಮಕಾರ್ಯಗಳಲ್ಲಿಯೂ ವ್ರತಾಚರಣೆಯಲ್ಲಿಯೂ ಅದೇತರ ವಿನೋದ? ಅದಲ್ಲದೆ ಆ ಸಮಯದಲ್ಲಿ ತಾವಾಗಲಿ ಗುರುಗಳಾಗಲಿ ನಿನಗೂ ಎಂಟೊ ದಿವಸಗಳ ವ್ರತವೆಂದು ಅಂದದ್ದಿಲ್ಲ. ಹೀಗಿರಲು ನಾನು ಆ ವ್ರತವನ್ನು ಜನ್ಮಾಂತರದ ವರೆಗೆಂದು ತಿಳಿದು ಸ್ವಿಕರಿಸಿರುವೆನು. ಆದುದರಿಂದ ನನ್ನ ವಿವಾಹದ ಯೋಚನೆಯನ್ನು ತಾವು ಮಾಡುವದು ಆಗತ್ಯವಿಲ್ಲವೆಂದಳು. ಈ ರೀತಿಯಾದ ಮಗಳ ಮಾತನ್ನು ಕೇಳಿ ಪ್ರಿಯದತ್ತನು ಅಶ್ಚರ್ಯಚಕಿತನಾದನು.

ಹೀಗಿರಲೊಂದು ದಿನ ಸುಂದರಿಯೂ ಯೌವ್ವನಭರಿತೆಯೂ ಆದ ಅನಂತಮತಿಯು ವಸಂತಮಾಸದಲ್ಲಿ ತಮ್ಮ ಉದ್ಯಾನವನದಲ್ಲಿ ಉಯ್ಯಾಲಿಯನ್ನಾಡುತ್ತಿರಲು, ಆಗ ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯಲ್ಲಿರುವ ಕಿನ್ನರವೆಂಬ ನಗರನಿವಾಸಿಯಾದ ಕುಂಡಲಮಂಡಿತನೆಂಬ ವಿಧ್ಯಾಧರನು ತನ್ನ ಪತ್ನಿಯಾದ ಸುಕೇಶಿಯೊಡನೆ ಗಗನಮಾರ್ಗದಲ್ಲಿ ಹೋಗುತ್ತಿರಲು ಅಕಸ್ಮಾತ್ತಾಗಿ ಆತನ ದೃಷ್ಟಿಯು ಆಕೆಯ ಕಡೆಗೆ ಹೋಯಿತು. ಆಗ ಆಕೆಯನ್ನು ನೋಡಿ ಬಹಳ ಕಾಮಾತುರನಾಗಿ, ತನ್ನ ಸ್ತ್ರೀಯನ್ನು ಬೇಗನೇ ಮನೆಯಲ್ಲಿ ಬಿಟ್ಟು ಬಂದು, ಸತಿಶಿರೋಮಣಿಯಾದ ಆ ಅನಂತಮತಿಯನ್ನು ಬಲಾತ್ಕಾರದಿಂದ ಎತ್ತಿಕೊಂಡು ಆಕಾಶಮಾರ್ಗದಿಂದ ಹೊರಟುಹೋದನು

ಪರಂತು, ಅದೇ ಮಾರ್ಗವಾಗಿ ಕ್ರೋಧಾಗ್ನಿಯಿಂದ ಸಂತಪ್ತಳಾದಈತನ ಪತ್ನಿಯು ತನ್ನೆದುರಿಗೆ ಬರುವದನ್ನು ನೋಡಿ ಭಯಭೀತನಾಗಿ ಈ ಸಾಧ್ವೀ ಮಣಿಯನ್ನು 'ಪರ್ಣಲಘು' ವೆಂಬ ವಿದ್ಯೆಯ ಸಹಾಯದಿಂದ ಅತಿಭಯಂಕ ರವಾದ ಅರಣ್ಯದಲ್ಲಿಳಿಸಿಬಿಟ್ಟನು. ಆಗ ಆಕೆಯು ತಂದೆತಾಯಿಗಳನ್ನು ಸ್ಮರಿಸಿ, ರೋದನಮಾಡುತ್ತಿದ್ದಳು. ಅಷ್ಟರಲ್ಲಿ ಭೀಮನೆಂಬ ಬೇಡರರಾಜನು ಅದನ್ನು ಕೇಳಿ ಅನಂತಮತಿಯಿದ್ದೆಡೆಗೆ ಬಂದು, ಆಕೆಯನ್ನು ಸವಿನುಡಿಗಳಿವ ಸಂತೈಸಿ, ತನ್ನ ಸ್ಥಾನಕ್ಕೆ ಕರೆದೊಯ್ದನು. ಆ ಮೇಲೆ ಪಾಪಿಯಾದ ಆ ರಾಜನು ಆಕೆಯನ್ನು ಕುರಿತು, "ನಾನು ನಿನ್ನನು ಪಟ್ಟ ರಾಣಿಯನ್ನಾಗಿ ಮಾಡುವೆನು. ನಿನಗೆ ಬೇಕಾದ ವಸ್ತ್ರಾಭರಣಗಳನ್ನು ಕೊಡುವೆನು. ನಿನ್ನ ಸೇವೆಗೆ ಹಲವು ಜನ ದಾಸದಾಸಿಯರು ತತ್ಪರರಾಗಿರುವರು. ನೀನು ನನ್ನಲ್ಲಿ ಪ್ರಸನ್ನ ಚಿತ್ತಳಾಗಬೇಕೆ" ಂದನು. ಪರಂತು, ಆಕೆ ಏನೊಂದೂ ಉತ್ತರವನ್ನೀ ಯಲಿಲ್ಲ. ಆಗ ಆ ಕಾಮಾಂಧನು ಅಷ್ಟರಲ್ಲೇ ತೃಪ್ತನಾಗದೆ, ಆಕೆಯೊಡನೆ ಬಲಾತ್ಕಾರ ಮಾಡುವಷ್ಟರಲ್ಲಿ ಆಕೆಯ ಶೀಲಮಹಿಮೆಯಿಂದ ವನದೇವ ತೆಯು ಪ್ರಕಟವಾಗಿ ಬಂದು ಆತನಿಗೆ ಬೇಕಾದ ಉಪಸರ್ಗವನ್ನು ಕೊಟ್ಟು ಅನಂತಮತಿಯನ್ನು ಸಂತೈಸಿ ಮಾಯವಾಯಿತು. ಆಗ ಆ ರಾಜನು ಈ ಚಮತ್ಕಾರವನ್ನು ನೋಡಿ, ಈಕೆ ಯಾರೋ ಒಬ್ಬದೇವಿಯಾಗಿರಬೇಕೆಂದು ಪರಿಭಾವಿಸಿ, ತನ್ನದುಷ್ಟವಿಚಾರವನ್ನು ಬಿಟ್ಟು, ಆಕೆಯನ್ನು 'ಪುಷ್ಪಕ' ನೆಂಬ ವ್ಯಾಪಾರಿಯ ಸ್ವಾಧೀನ ಕಳುಹಿಸಿದನು. ಇದಲ್ಲವೇ 'ಅಚಿಂತ್ಯಂ ಶಿಲಗುಪ್ತಾ ನಾಂ ಚರಿತಂ ಕುಲಯೋಷಿತಾಂ, ಎಂಬೀ ನೀತಿಯ ಸಾರ್ಥಕತ್ತೆಯು?

ಇತ್ತ ಆ ವರ್ತಕನೂ ಈಕೆಯ ಸೌಂದರ್ಯಕ್ಕೆ ಮೋಹಿತನಾಗಿ ಕಾಮಪರವಶನಾದನು. ಆಗ ಆಕೆಯು ಆತನ ದುರಾಚರಣೆಯನ್ನು ನೋಡಿ "ನೀನು ಆ ದುಷ್ಟರಾಜನಿಂದುಂಟಾದ ವಿಪತ್ತನ್ನು ಹೋಗಲಾಡಿಸಿದ್ದರಿಂದ ನನಗೆ ಪಿತೃಸಮಾನನಾಗಿದ್ದೀಯೇ! ಆದುದರಿಂದ ಎನ್ನಲ್ಲಿ ದುಷ್ಟಯೋಚನೆ ಯನ್ನು ಮಾಡಬೇಡ" ವೆಂದಳು. ಆಗ ವ್ಯಾಪಾರಿಯು ಆಕೆಯ ಯೋಚನೆ ಯನ್ನು ಬಿಟ್ಟು, ಅವಳನ್ನು ಅಯೋಧ್ಯಾನಗರದ ಕಾಮಸೇನೆಯೆಂಬ ವೇಶ್ಯೆಯ ಸ್ವಾಧೀನ ಮಾಡಿದನು.

ಪ್ರಿಯ ವಾಚಕರೇ ! ಈ ಸಾಧ್ವೀಮಣಿಯ ಶೀಲಪರೀಕ್ಷಾರ್ಥವಾಗಿಯೋ ಎಂಬಂತೆ, "ಏಕಸ್ಯ ದುಃಖಸ್ಯ ನ ಯಾವದಂತಂ । ತಾವದ್ದ್ವಿತೀಯಂ ಸಮುಪಸ್ಥಿತಂ ಮೇ" ಒಂದು ವಿಧವಾದ ದುಃಖ [ ಕಷ್ಟ ]ವು ಕೊನೆಗಾಣುವದರೊಳಗಾಗಿ ಮತ್ತೊಂದು ದುಃಖವು ಪ್ರಾಪ್ತವಾಯಿತು. ಆದರೂ ಆ ಸತಿಶಿರೋಮಣಿಯು ಎಂಥಾ ಸಂಕಟಪ್ರಸಂಗಗಳ ಬಂದೊದಗಿದರೂ ಧೈರ್ಯಗುಂದದೆ ತನ್ನ ಶೀಲರಕ್ಷಣೆಗೋಸ್ಕರ ತನ್ನ ಜೀವದಾಶೆಯನ್ನೂ ತೊರೆದು ಬಿಟ್ಟಳು. "ನ ಪ್ರಾಣಾಂತೇ ಪ್ರಕೃತಿವಿಕೃತಿರ್ಜಾಯತೇ ಚೋತ್ತಮಾನಾಂ" ಎಂಬೀ ನೀತಿಯಂತೆ ಪ್ರಾಣಹೋದರೂ ಉತ್ತಮರ ಸ್ವಭಾವವು ವಿಕಾರವನ್ನು ಹೊಂದಲಾರದು. ಆದರೂ, ಈ ಸಾಧ್ವೀಮಣಿಗೆ ಇನ್ನು ಮುಂದೊದಗುವ ಕಷ್ಟಪರಂಪರೆಗಳನ್ನೂ ಅವುಗಳಿಂದ ಪಾರಾಗಿ ತನ್ನ ಶೀಲವನ್ನು ಹ್ಯಾಗೆ ರಕ್ಷಿಸಿಕೊಂಡಳೆಂಬುದನ್ನೂ ಕೇಳುವವರಿಗೆ ಸಖೇದಾಶ್ಚರ್ಯವೆನಿಸದಿರದು. ಅದಂತಿರಲಿ.

ಆ ವೇಸೆಶ್ಯೆಯಾರೋ ಈಕೆಯನ್ನು ಕೆಡಿಸಬೇಕೆಂದು ಹಲವು ವಿಧವಾದ ಹಾವಭಾವವಿಲಾಸ ಮೊದಲಾದುವುಗಳನ್ನೂ ಶೃಂಗಾರಸಯುಕ್ತವಾದ ಮಾತುಗಳನ್ನೂ ಆಡಿ, ತೋರಿಸಿದಳು. ಆದರೆ, ಮೇರುಪರ್ವತ ತುಲ್ಯವಾದ ಆಕೆಯ ದೃಢವಾದ ಮನಸ್ಸು ರವಷ್ಟಾದರೂ ವಿಚಲಿತವಾಗಲಿಲ್ಲ. ಆಗ ಆ ಕಾಮಸೇನೆಯು ಈಕೆಯಿಂದ ನನಗೇನೂ ಪ್ರಯೋಜನವಾಗುವಂತಿಲ್ಲವೆಂದರಿತು, ಅದೇ ನಗರದರಸನಾದ ಸಿಂಹರಾಜನಿಗೆ ಕೊಂಡೊಯ್ದು ಒಪ್ಪಿಸಿದಳು. ಅವನೂ ಅವಳ ಸೌಂದರ್ಯಕ್ಕೆ ಮೋಹಿತನಾಗಿ ಅವಳನ್ನು ವಶಮಾಡಿಕೊಳ್ಳಬೇಕೆಂದು ನಾನಾತರದ ಉಪಾಯಳನ್ನು ಮಾಡಲಾರಂಭಿಸಿದನು. "ನೀನು ನನ್ನಾಭಿಷ್ಟದಂತೆ ನಡೆದರೆ ಸಕಲರಾಜ್ಯೈಶ್ವರ್ಯವೇ ನಿನ್ನದಾಗಿದೆ ನಿನನ್ನೇ ಪಟ್ಟಮಹಿಷಿಯನ್ನಾಗಿ ಮಾಡುವೆನೆ"ಂದನು. ಆದರೆ ಯಾವದಾದರೊಂದುಪಾಯದಿಂದಲೂ ಅನಂತಮತಿಯು ಆತನ ಸ್ವಾಧೀನಳಾಗದೆ ತನ್ನ ಶೀಲವನ್ನು ರಕ್ಷಿಸಿಕೊಳ್ಳುವದರಲ್ಲಿ ತತ್ಪರಳಾಗಿದ್ದಳು ಆ ಮಂದಮತಿಯಾದ ರಾಜನು ಒಂದು ದಿನ ರಾತ್ರಿ ಆಕೆಯೊಡನೆ ಬಲತ್ಕಾರ ಮಾಡಲಾರಂಭಿಸಿದನು. ಆ ಸಮಯದಲ್ಲಿಯೂ

ಪೂರ್ವದಂತೆ ಆಕೆಯ ಶೀಲಪ್ರಭಾವದಿಂದ ನಗರದೇವತೆಯು ಪ್ರತ್ಯಕ್ಷಳಾಗಿ ಅನಂತಮತಿಗೆ ಪ್ರಾಪ್ತವಾದ ಸಂಕಷ್ಟವನ್ನು ಪರಿಹರಿಸಿ, ಮಾಯವಾದಳು. ಆಗ ರಾಜನು ಭಯದಿಂದ ಆಕೆಯನ್ನು ಅರಮನೆಯಿಂದ ಹೊರಡಿಸಿ, ಅರಣ್ಯದಲ್ಲಿ ಬಿಟ್ಟುಬಿಡಿಸಿದನು. ಆಗ ಆಕೆಯು ಕೆಲವು ದಿವಸ ಕಾಡಿನಲ್ಲಿಯೇ ಇದ್ದು ಪಂಚನಮಸ್ಕಾರವನ್ನು ಜಪಿಸುತ್ತಾ, ಕಡೆಗೆ ಒಂದಾನೊಂದು ನಗರವನ್ನು ಸೇರಿದಳು. ಅಲ್ಲಿ ಇವಳ ದೈವಯೋಗದಿಂದ 'ಕಮಲಶ್ರೀ' ಎಂಬ ಅರ್ಜಿಕೆಯ ದರ್ಶನವಾಯಿತು. ಆಗ ಅರ್ಜಿಕೆಯು ಅನಂತಮತಿಯನ್ನು ನೋಡಿ, ಆಕೆಯ ಸಮಾಚಾರವನ್ನೆಲ್ಲಾ ಕೇಳಿ ಸಮಾಧಾನಪಡಿಸಿ, ತನ್ನ ಹತ್ತಿರ ಇಟ್ಟುಕೊಂಡಿದ್ದಳು.

ಪಾಠಕರೇ! ಇಲ್ಲಿಗೆ ಅನಂತಮತಿಯ ದುಃಖಪರಂಪರೆಯು ಪಸರಿಸ ಮಾಪ್ತಿಯಾಯಿತೆಂದರೆ ವಿರೋಧವಾಗಲಾರದು.

ಇತ್ತ ಚಂಪಾಪುರದಲ್ಲಿ ತನ್ನ ಪುತ್ರಿಯ ವಿಯೋಗದಿಂದ ಬಹಳ ದು:ಖಿತನಾದ ಪ್ರಿಯದತ್ತಶ್ರೇಷ್ಠಿಯು ತನ್ನ ಶೋಕನಿವಾರಣಾನಿಮಿತ್ತವಾಗಿ ತೀರ್ಥಯಾತ್ರೆಯನ್ನು ಮಾಡುತ್ತಾ ಅಯೋಧ್ಯಾನಗರಕ್ಕೆ ಬಂದು ತನ್ನ ಬಂಧುಮಿತ್ರನಾದ ಜಿನದತ್ತಶ್ರೇಷ್ಠಿಯ ಮನೆಯಲ್ಲಿ ಉಳುಕೊಂಡನು. ಅಲ್ಲಿ ಪ್ರಿಯದತ್ತಶ್ರೇಷ್ಠಿಗೆ ಯಥಾಯೋಗ್ಯವಾದ ಸತ್ಕಾರಗಳಾದನಂತರ ಜಿನದತ್ತಶ್ರೇಷ್ಠಿಯೊಡನೆ ತನ್ನ ಪುತ್ರಿಯ ವೃತ್ತಾಂತವನ್ನೆಲ್ಲಾ ಹೇಳಿದನು. ಅದನ್ನು ಕೇಳಿ ಜಿನದತ್ತ ಶ್ರೇಷ್ಠಿಗೆ ಕಡುಖೇದವಾಯಿತು ಆದರೂ ಅವನನ್ನು ಸಮಾಧಾನೋಕ್ತಿಗಳಿಂದ ಸಂತೈಸಿದನು.

ಹೀಗಿರುತ್ತಿರಲು ಆ ನಗರದಲ್ಲಿ ಅನಂತಮತಿಯು ರಂಗವಲಿಯನ್ನು ಬರೆಯುವದರಲ್ಲಿಯೂ, ಪಾಕ [ಅಡಿಗೆ]ವನ್ನು ಮಾಡುವದರಲ್ಲಿಯೂ ಬಹಳ ಪ್ರಸಿದ್ಧಿಯನ್ನು ಹೊಂದಿದ್ದಳು. ಆದುದರಿಂದ ಜಿನದತ್ತಶ್ರೇಷ್ಠಿಯು ಅನಂತಮತಿಯನ್ನು ಮಾರಣೇದಿವಸ ತನ್ನ ಮನೆಗೆ ಬರಹೇಳಿದ್ದನು. ಮರುದಿನ ಅವಳು ಬರುವಷ್ಟರಲ್ಲಿ ಪ್ರಿಯದತ್ತಶ್ರೇಷ್ಠಿಯು ಪ್ರಾತಃಕಾಲವಿಧಿಗಳನ್ನು ತೀರಿಸಿಕೊಂಡು, ಜಿನಪೂಜಾನಿಮಿತ್ತವಾಗಿ ಚೈತ್ಯಾಲಯಕ್ಕೆ ಹೋಗಿದ್ದನು. ಆಗ ಅನಂತಮತಿಯು ಬಂದು ಜಿನದತ್ತಶ್ರೇಷ್ಠಿಯ ಆಜ್ಞೆಯ ಮೇರೆಗೆ

ಅಂಗಣದಲ್ಲಿ ಚಿತ್ರವಿಚಿತ್ರವಾದ ರಂಗವಲಿಯನ್ನು ಹಾಕಿ ನಾನಾತರದ ಪಕ್ವಾನ್ನಗಳನ್ನೂ ಸಿದ್ಧ ಮಾಡಿ, ತನ್ನ ಸ್ಥಾನಕ್ಕೆ ಹೊರಟು ಹೋದಳು. ಪ್ರಿಯದತ್ತನು ತನ್ನ ಪೂಜಾವಿಧಿಗಳನ್ನು ತೀರಿಸಿಕೊಂಡು ಮನೆಗೆ ಬರುವಾಗ ಮನೆಯ ಮುಂದೆ ಬರೆದಿರುವ ರಂಗವಲಿಯನ್ನು ನೋಡಿ--ಇದು ನನ್ನ ಪುತ್ರಿಯೇ ಬರೆದಂತಿರುವದು. ಯದ್ಯಪಿ ನನ್ನ ಪೂರ್ವಸುಕೃತದಿಂದ ಅವಳೇಕೆ ಇಲ್ಲಿಗೆ ಬರಬಾರದು? ಎಂದಾಲೋಚಿಸಿ, ಈ ರಂಗವಲಿಯನ್ನು ಬರದವರ್ಯಾರೆಂದು ಅಲ್ಲಿರುವವರೊಡನೆ ಕೇಳಿದನು. ಆಗ ಅವರು ಅನಂತ ಮತಿಯೆಂದರು. ಅದನ್ನು ಕೇಳಿ ಹರ್ಷಚಿತ್ತನಾಗಿ ಆಕೆಯನ್ನು ಇಲ್ಲಿಯ ವರೆಗೆ ಬರಮಾಡಿದರೆ ಮಹದುಪಕಾರವಾಗುವದೆಂದನು. ಅಂತೆಯೇ ಆಕೆಯನ್ನು ಕೂಡಲೇ ಬರಮಾಡಿದರು. ಪ್ರಿಯದತ್ತನು ಆಕೆಯನ್ನು ನೋಡಿದೊಡನೆಯೇ ತನ್ನ ಮಗಳೆಂದು ತಿಳಿದು ಆನಂದಪರವಶನಾಗಿ ಅಪ್ಪಿಕೊಂಡು ಆನಂದಾಶ್ರುಪೂರಿತನಾದನು. ಅನಂತಮತಿಯು ದುಃಖೋದ್ರೇಕದಿಂದ ಕೆಲವು ಸಮಯದ ವರೆಗೆ ಏನೂ ಮಾತನಾಡಲಿಲ್ಲ. ಆ ಮೇಲೆ ಪ್ರೀಯದತ್ತನು ಪುತ್ರಿಯನ್ನು ಕುರಿತು, "ಮಗಳೇ! ನಿನ್ನನ್ನಾವ ದುಷ್ಟನು ಅಪಹರಿಸಿದನು? ನಿನಗಾವಾವ ಪ್ರಸಂಗಗಳು ಬಂದೊದಗಿದವು?" ಎಂದು ಪ್ರಶ್ನಿಸಿದನು. ಆಗ ಅನಂತಮತಿಯು ತನಗೆ ಬಂದ ವಿಪತ್ತುಗಳನೆಲ್ಲಾ ಸವಿಸ್ತಾರವಾಗಿಹೇಳಿದಳು. ಇದನ್ನು ಕೇಳಿ ಪ್ರೀಯದತ್ತನಿಗೂ ಇತರರಿಗೂ ಅತಿಖೇದವೆನಿಸಿತು. ಆದರೂ ಪುತ್ರಿಯ ಪುನ:ಪ್ರಾಪ್ತಿಗಾಗಿ ಎಲ್ಲರೂ ಆನಂದಭರಿತರಾದರು. ಆ ಮೇಲೆ ಪ್ರಿಯದತ್ತನು ಕೆಲವು ದಿವಸ ಅಲ್ಲಿಯೇ ವಿಶ್ರಾಂತಿಯನ್ನು ತೆಗೆದುಕೊಂಡು, ತನ್ನೂರಿಗೆ ಹೋಗಬೇಕೆಂದು ಯೋಚಿಸಿ, ಮಗಳಿಗೆ ಈ ಸಂಗತಿಯನ್ನು ತಿಳಿಸಿದನು. ಆಗ ಅನಂತಮತಿಯು, "ಪಿತಾಜಿಯವರೇ! ನನಗಂತೂ ಸಾಂಸಾರಿಕ ಸ್ಥಿತಿಯನ್ನು ನೋಡಿ ಅತೀವ ದು:ಖವೆನಿಸುತ್ತದೆ. ಇದೊಂದೇ ಜನ್ಮದಲ್ಲಿ ನಾನು ಹಲವು ವಿಧವಾದ ದುಃಖಗಳನ್ನು ಅನುಭವಿಸಿದೆನು. ಆದುದರಿಂದ ನನ್ನಾತ್ಮಕಲ್ಯಾಣಕ್ಕೆ ಜಿನದೀಕ್ಷೆವಿನಹ ಬೇರೊಂದುಪಾಯವಿಲ್ಲವು. ಆದ್ದರಿಂದ ನನಗೆ ಆಕ್ಷಯವೂ ನಿರ್ಬಾಧವೂ ಆ ಮೋಕ್ಷಸುಖವನ್ನು ಹೊಂದ

ಲರ್ಹವಾದ ಜಿನದೀಕ್ಷೆಯನ್ನು ಸ್ವೀಕರಿಸುವರೇ ಕೃಪೆದೋರಬೇಕೆಂದಳು. ಆಗ ಶ್ರೇಷ್ಠಿಯು, "ಮಗಳೇ! ನೀನು ಇನ್ನೂ ಚಿಕ್ಕವಳು; ನಿನ್ನ ದೃಢತರವಾದ ಪರಿಣಾಮವನ್ನು ನೋಡಿ ನನಗೆ ಅತೀವ ಸಂತೋಷವೆನಿಸುತ್ತದೆ. ಪರಂತು, ಈ ನಿನ್ನ ಕೋಮಲವಾದ ಶರೀರದಿಂದ ಅತಿಕಠಿಣವಾದ ತಪಸ್ಸನ್ನು ಹೇಗೆ ಮಾಡುವಿ? ಸಾಧ್ಯವಾಗಲಾರದು. ಆದುದರಿಂದ ಕೆಲವು ಕಾಲ ಧರ್ಮವ್ಯಾಸಂಗವನ್ನು ಮಾಡುತ್ತಾ ಮನೆಯಲ್ಲಿಯೇ ಇದ್ದು ತನ್ನಂತರ ನಿನ್ನಾಭೀಷ್ಟದಂತೆ ವರ್ತಿಸಬಹುದೇ"ಂದನು, ಅದನ್ನು ಕೇಳಿ ಅನಂತಮತಿಯು, "ಪೂಜ್ಯರೇ! ಶರೀರದ ಮೇಲಿನ ಮಮತೆಯೇ ಸುಖದುಃಖಗಳಿಗೆ ಕಾರಣವಾದುದು, ಈ ನಶ್ವರವಾದ ದೇಹವನ್ನು ಬಿಟ್ಟು ಆತ್ಮನು ಸ್ವತಂತ್ರನಾದವನು, ಹೀಗಿರುವಲ್ಲಿ ತಾವು ಚಿಂತಿಸುವದು ಅದೇಕೆ? ಆದುದರಿಂದ ನನ್ನ ದೃಢಸಂಕಲ್ಪಕ್ಕೆ ಯಾವತರದ ವಿಘ್ನವನ್ನುಂಟು ಮಾಡಬಾರದಾಗಿ ನನ್ನ ಪ್ರಾರ್ಥನೆಯೆ"ಂದಳು, ಈ ಪ್ರಕಾರವಾದ ವೈರಾಗ್ಯಯುಕ್ತವಾದ ತನ್ನ ಮಗಳ ಮಾತನ್ನು ಕೇಳಿ ಪ್ರಿಯದತ್ತಶ್ರೇಷ್ಠಿಯು ಅಪ್ಪಣೆಯನ್ನಿತ್ತನು, ತನ್ನಂತರ ಆತ್ಯಾನಂದಭರಿತೆಯಾಗಿ ಕಮಲಶ್ರೀಯೆಂಬ ಆರ್ಜಿಕೆಯ ಸಾನ್ನಿಧ್ಯದಲ್ಲಿ ಜಿನದೀಕ್ಷೆಯನ್ನು ಪರಿಗ್ರಹಿಸಿದಳು. ಆ ಮೇಲೆ ಪಕ್ಷೋಪವಾಸ ಮೊದಲಾದ ಘೋರತರವಾದ ತಪಶ್ಚರ್ಯವನ್ನು ಮಾಡಿ, ಮರಣಾಂತ್ಯದಲ್ಲಿ ಸಲ್ಲೇಖನಾವ್ರತವನ್ನು ಧರಿಸಿ, ಸನ್ಯಾಸವಿಧಿಯಿಂದ ಮರಣವನ್ನು ಹೊಂದಿ, ಅನಂತಮತಿಯ ಜೀವನು ಸ್ತ್ರೀಲಿಂಗಚ್ಛೇದನೆಯಿಂದ ಸಹಸ್ರಾರವೆಂಬ ೧೨ನೆ ಸ್ವರ್ಗದಲ್ಲಿ ಅಣಿಮಾದ್ಯಷ್ಟೈಶ್ವರ್ಯಸಂಪನ್ನನೂ ೧೮ ಸಾಗರೋಪಮಾಯುಃ ಪರಿಮಿತನೂ ಆದ ಮಹರ್ದಿದೇವನಾಗಿ ಜನಿಸಿದನು. ತನ್ನಂತರ ಕ್ರಮವಾಗಿ ಮೋಕ್ಷಸುಖವನ್ನೈದಿದನು.

ಈ ಕಥೆಯ ಸಾರಾಂಶವೇನೆಂದರೆ? ಅನಂತಮತಿಯು ಬಾಲ್ಯಾವಸ್ಥೆಯಲ್ಲಿಯೇ ಬ್ರಹ್ಮಚರ್ಯವ್ರತವನ್ನು ಗ್ರಹಣೆ ಮಾಡಿ ಅನೇಕ ಕಷ್ಟಪರಂಪರೆಗಳು ಬಂದೊದಗಿದರೂ ವಿಚಲಿತಳಾಗದೆ, ತನ್ನ ಶೀಲಮಹಿಮೆಯಿಂದ ದೈವಿಕಸಹಾಯವನ್ನೂ ಪಡೆದಳೆಂಬೀ ವಿಚಾರವನ್ನು ಸ್ತ್ರೀಪುರುಷರೆಲ್ಲರೂ ನೆನಪಿನಲ್ಲಿಡತಕ್ಕ ಸಂಗತಿಯಾಗಿದೆ. ಅದಲ್ಲದೆ ಆಕೆಗೆ ಬಾಲ್ಯದಲ್ಲಿ ದೊರೆತ

ಸುಶಿಕ್ಷಣದ ಫಲವಿದು ಆದುದರಿಂದ ಸ್ತ್ರೀಯರೆಲ್ಲರೂ "ನಾವು ವಿದ್ಯಾಭ್ಯಾಸವನ್ನು ಮಾಡಿ ಮಾಡುವದೇನು? ಪುರುಷರಂತೆ ಉದ್ಯೋಗವನ್ನು ಮಾಡಬೇಕೇ ? ಎಂಬಿತ್ಯಾದಿ ದುರಭಿಮಾನಕ್ಕೆಡೆಗೊಡದೆ ಯಥಾಸಾಧ್ಯವಾಗಿ ಧಾರ್ಮಿಕ ಮತ್ತು ನೈತಿಕ ಶಿಕ್ಷಣದೊಡನೆ ವಿದ್ಯಾಪಾರಂಗತರಾದರೆ ಅನಂತಮತಿಯಂತೆ ಕೀರ್ತಿಪಾತ್ರರಾಗುವದರಲ್ಲೇನೂ ಸಂದೇಹವಿರಲಾರದು,

### [೩] ನಿರ್ವಿಚಿಕಿತ್ಸಾ ಅಂಗ

**ಸ್ವಭಾವತೋಽಶುಚೌ ಕಾಯೇ। ರತ್ನತ್ರಯಪವಿತ್ರಿತೇ ॥**
**ನಿರ್ಜುಗುಪ್ಸಾ ಗುಣಪ್ರೀತಿಃ। ಮತಾ ನಿರ್ವಿಚಿಕಿತ್ಸಿತಾ ॥೧೩॥**

**ಅನ್ವಯಾರ್ಥಃ—** ಸ್ವಭಾವತಃ–ಸ್ವಭಾವದಿಂದ ಅಶುಚೌ–ಅಪವಿತ್ರವೂ ರತ್ನತ್ರಯಪವಿತ್ರಿತೇ—ಸಮ್ಯಗ್ದರ್ಶನಜ್ಞಾನಚಾರಿತ್ರಗಳಿಂದ ಪವಿತ್ರವೂ ಆದ ಕಾಯೇ—ಶರೀರದಲ್ಲಿ ನಿರ್ಜುಗುಪ್ಸಾ—ಹೇಸಿಕೆಯಿಲ್ಲದೆ, ಗುಣಪ್ರಿತಿಃ–ಗುಣಗಳಲ್ಲಿ ಪ್ರೀತಿಯನ್ನಿಡುವಿಕೆಯು 'ನಿರ್ವಿಚಿಕಿತ್ಸಿತಾ'—ನಿರ್ವಿಚಿಕಿತ್ಸಾ ಯೆಂಬ ಮೂರನೇ ಅಂಗವೆಂದು ಮತಾ—ಹೆಳಲ್ಪಟ್ಟದೆ.

**ತಾತ್ಪರ್ಯಃ—**ಮನುಷ್ಯ ಮತ್ತು ತಿರ್ಯಂಚ ಪ್ರಾಣಿಗಳ ಪುದ್ಗಲ ಮಯವಾದೀ ಶರೀರವು ಯಾವಾಗಲೂ ಅಪವಿತ್ರವಾದ ಸ್ವಭಾವವುಳ್ಳದ್ದೂ ರಕ್ತ ಮಾಂಸ ವೀರ್ಯ ಮೊದಲಾದ ಸಪ್ತಧಾತುಗಳಿಂದ ಕೂಡಿದುದ್ದೂ ಸದಾ ನವದ್ವಾರಗಳಿಂದಲೂ ಮಲಮೂತ್ರಗಳು ಸುರಿಯುತ್ತಿರುವುದೂ ರೋಗಮಯವೂ ಆದುದಾಗಿದೆಯಾದರೂ, ಸಮ್ಯಗ್ದೃಷ್ಟಿಯು ವಸ್ತುವಿನ ಸ್ವರೂಪವನ್ನರಿತವನಾದ್ದರಿಂದ "ಈ ಶರೀರದ ಸ್ವಭಾವವೇ ಈ ರೀತಿಯಾದುದು" ಎಂದು ಅದನ್ನು ನೊಡಿ ಹೇಸಿಕೆಪಡುವದಿಲ್ಲವು. ಈ ರೀತಿಯಾಗಿ ಆ ಶರೀರದಲ್ಲಿ ಜುಗುಪ್ಸೆ ಮಾಡದೆ ಇಂಥಾ ಅಪವಿತ್ರವಾದ ಶರೀರವೂ ಸಮ್ಯಗ್ದರ್ಶನಜ್ಞಾನಚಾರಿತ್ರ—ರೂಪವಾದ—ರತ್ನತ್ರಯಗಳಿಂದ ಪವಿತ್ರವಾಗುವುದೆಂದು ತಿಳಿದು, ಅವರಲ್ಲಿರುವ ಗುಣಗಳಲ್ಲಿ ಪ್ರೀತಿಯನ್ನಿಡುವದಕ್ಕೆ 'ನಿರ್ವಿಚಿಕಿತ್ಸಾ' ಅಂಗವೆಂದು ಹೆಸರು. ಈ ಅಂಗದಲ್ಲಿ ಉದಾಯನ ಮಹಾರಾಜನು ಪ್ರಸಿದ್ಧಿಯನ್ನು ಹೊಂದಿರುವನು. ॥೧೩॥

# ಉದ್ದಾಯನ ಮಹಾರಾಜನ ಕಥೆ.

ಪೂರ್ವದಲ್ಲಿ ನಮ್ಮ ಭಾರತವರ್ಷದಲ್ಲಿ ವತ್ಸದೇಶದಲ್ಲಿ 'ರೌರಕ'ವೆಂಬ ನಗರವಿತ್ತು. ಅಲ್ಲಿ ಉದ್ದಾಯನನೆಂಬ ರಾಜನು ರಾಜ್ಯವನ್ನಾಳುತ್ತಿದ್ದನು. ಆತನು ನ್ಯಾಯಶಾಲಿಯೂ ಪ್ರಜಾವತ್ಸಲನೂ ಧಾರ್ಮಿಕನೂ ಆಗಿದ್ದನು. ಆತನಿಗೆ ಧಾರ್ಮಿಕಳೂ ಪರಮಸುಂದರಿಯೂ ಪತಿವ್ರತೆಯೂ ಆದ 'ಪ್ರಭಾವತಿ' ಯೆಂಬ ಪತ್ನಿಯಿದ್ದಳು. ಈತನು ಯೋಗ್ಯರೀತಿಯಿಂದ ಪ್ರಜಾಪರಿಪಾಲನೆಯನ್ನು ಮಾಡುತ್ತಾ 'ನಿರ್ವಿಚಿಕಿತ್ಸಾ' ಎಂಬೀ ಅಂಗದಲ್ಲಿ ಪ್ರಸಿದ್ಧನಾಗಿದ್ದನು.

ಒಂದಾನೊಂದು ಸಮಯದಲ್ಲಿ ಸೌಧರ್ಮಸ್ವರ್ಗದ ಒಡೆಯನಾದ ಸೌಧರ್ಮೇಂದ್ರನು ತನ್ನ ದೇವಸಭೆಯಲ್ಲಿ ದೇವತೆಗಳನ್ನು ಕುರಿತು ಧರ್ಮೋಪದೇಶವನ್ನು ಮಾಡುತ್ತಿರುವಾಗ ಪ್ರಕರಣಾನುಸಾರವಾಗಿ 'ನಿರ್ವಿಚಿಕಿತ್ಸಾ' ಅಂಗದವರ್ಣನೆಯು ಬರಲು— "ಈ ಅಂಗದಲ್ಲಿ ಉದ್ದಾಯನ ಮಹಾರಾಜನನ್ನು ಹೋಲುವವರು. ಈ ಭೂಲೋಕದಲ್ಲಿ ಯಾರೂ ಇಲ್ಲವೆಂದು ಆತನನ್ನು ಬಹಳವಾಗಿ ಪ್ರಶಂಸಿಸಿದರು" ಇದನ್ನು ಕೇಳಿ ಸಹಿಸಲಾರದೆ ವಾಸವದೇವನೆಂಬ ದೇವನು ಈ ಉದ್ದಾಯನ ಮಹಾರಾಜನನ್ನು ಪರೀಕ್ಷಿಸಬೇಕೆಂದು ನಿಶ್ಚೈಸಿ, ತನ್ನಿಮಿತ್ತವಾಗಿ ಆ ದೇವನು ಉದುಂಬರಕುಷ್ಟದಿಂದ ಕೂಡಿದುದೂ ದುರ್ಗಂಧಮಯವೂ ಆದ ಶರಿರವನ್ನು ತನ್ನ ವಿಗುರ್ವಣೆಯಿಂದ ಧಾರಣೆ ಮಾಡಿಕೊಂಡು ದಿಗಂಬರ ಮುನಿಯ ವೇಷವನ್ನು ಧರಿಸಿ, ಮಧ್ಯಾಹ್ನಸಮಯದಲ್ಲಿ ನಗರಮಾರ್ಗವಾಗಿ ಹೊರಟು ಬರುವಲ್ಲಿ ಈ ಕುಷ್ಠರೋಗದ ದುರ್ಗಂಧವನ್ನು ಸಹಿಸಲಾರದೆ ನಗರವಾಸಿಗಳಾದ ಜನರೆಲ್ಲರೂ ಮೂಗುಬಾಯಿಗಳನ್ನು ಮುಚ್ಚಿಕೊಂಡು ದೂರವಾಗಿ ಹೋಗುತ್ತಿದ್ದರು. ಹೀಗಿರುತ್ತಾ ಮುನಿಯು ರಾಜದ್ವಾರದ ಸಮೀಪವನ್ನೈದಲು ಸ್ವಾಭಾವಿಕವಾಗಿ ಕೋಮಲ ಹೃದಯನೂ ಧಾರ್ಮಿಕನೂ ಆದ ಉದ್ದಾಯನಮಹಾರಾಜನು ಮುನಿಯನ್ನು ಕಂಡು ಸಮೀಪಕ್ಕೆ ಹೋಗಿ ತ್ರಿಃಪ್ರದಕ್ಷಿಣಾಪೂರ್ವಕವಾಗಿ ನಮಸ್ಕರಿಸಿ ಸರ್ವಾಂಗದಲ್ಲಿರುವ ವ್ರಣಗಳನ್ನು ಕಂಡು ಕಳವಳಗೊಂಡು, ಯಥಾ-

ವಿಧಿಯಾಗಿ ಮುನಿಯನ್ನು ಅರಮನೆಯೊಳಗೆ ಕರಕೊಂಡು ಹೋಗಿ, ಮೃದುವಾದ ಉಚ್ಚಾಸನದಲ್ಲಿ ಕುಳ್ಳಿರಿಸಿ ಶುದ್ಧವಾದ ಪ್ರಾಸುಕಜಲದಿಂದ ಸರ್ವಾಂಗವನ್ನೂ ತೊಳೆದು, ನವಧಾಭಕ್ತಿಯಿಂದ ಆಹಾರದಾನವನ್ನು ಮಾಡಿದನು ಆಗ ಆ ಮಾಯಾಮುನಿಯು ತನ್ನ ಮಾಯೆಯಿಂದ ಹೆಚ್ಚಾದ ಆಹಾರವನ್ನು ಭುಂಜಿಸಿ, ಕೂಡಲೇ ವಾಂತಿ ಮಾಡಿಕೊಂಡನು. ಆ ದುರ್ಗಂಧವನ್ನು ಸಹಿಸಲಾರದೆ ಅಲ್ಲಿರುವ ಸೇವಕರೆಲ್ಲರೂ ಹೊರಗೆ ಹೊರಟುಹೋದರು. ರಾಜನೂ ರಾಣಿಯೂ ಅಲ್ಲಿಯೇ ಅತಿಪಶ್ಚಾತ್ತಾಪ ದಿಂದಿರುತ್ತಿರಲು, ಪುನಃ ಅವರ ಮೇಲೆಯೂ ವಾಂತಿ ಮಾಡಿದನು. ಇದನ್ನು ನೋಡಿ ರಾಜನು ಬಹಳ ವ್ಯಸನಪಟ್ಟು ಅಯ್ಯೋ ! ಇದು ಏನಾ ಯಿತು ! ನಾನು ಮುನೀಶ್ವರರ ಪ್ರಕೃತಿಗೆ ವಿರುದ್ಧವಾದ ಆಹಾರವನ್ನು ಕೊಟ್ಟೆನೋ ! ಮೊದಲೇ ಮಹಾರೋಗದಿಂದ ಅಶಕ್ತರಾದವರು ! ಇವರನ್ನು ಇನ್ನೂ ಹೆಚ್ಚಿನ ಕಷ್ಟಕ್ಕೆ ಗುರಿಮಾಡಿದೆನು. ನನ್ನ ಪೂರ್ವಾರ್ಜಿತ ಪಾಪದ ಫಲದಿಂದ ಹೀಗಾಯಿತು ಎಂಬಿತ್ಯಾದಿ ವಿಚಾರಗಳಿಂದ ಪಶ್ಚಾ ತ್ತಾಪಪಟ್ಟು ತನ್ನನ್ನೇ ನಿಂದಿಸಿಕೊಳ್ಳುತ್ತಾ ಸ್ವಚ್ಛವಾದ ನೀರಿನಿಂದ ಅವರ ಮೈಯ್ಯನ್ನೆಲ್ಲಾ ತೊಳೆದು ಸ್ವಚ್ಛಮಾಡಿದನು. ಆಗ ದೇವನು ಇವನ ಭಕ್ತಿಯನ್ನೂ ನಿರ್ವಿಚಿಕಿತ್ಸಾಗುಣವನ್ನೂ ನೋಡಿ ಸಂತೋಷಪಟ್ಟು, ತನ್ನ ನಿಜರೂಪವನ್ನು ತೋರಿಸಿ, ಎಲೈ ! ರಾಜನೇ ! ನಾನು ನಿಜವಾಗಿಯೂ ಮುನಿಯಲ್ಲ. ನಿನ್ನ ಪರೀಕ್ಷಾರ್ಥವಾಗಿ ಸ್ವರ್ಗದಿಂದ ಬಂದಿರುವ ವಾಸವ ನೆಂಬ ದೇವನು. ನಿನ್ನ ಗುಣಮಹಿಮೆಯನ್ನು ಸೌಧರ್ಮೇಂದ್ರನು ಬಹಳ ವಾಗಿ ಪ್ರಶಂಸೆ ಮಾಡಿದನು. ಅದನ್ನು ಪರೀಕ್ಷಿಸುವದಕ್ಕಾಗಿಯೇ ನಾನು ಬಂದವನಾಗಿದ್ದೇನೆ. ಆದರೆ ಸೌಧರ್ಮೇಂದ್ರನು ಪ್ರಶಂಸಿದಂತೆ ನಿನ್ನಲ್ಲಿ ಸಮ್ಯಕ್ತ್ವ ನಿರ್ವಿಚಿಕಿತ್ಸಾ ಮೊದಲಾದ ಗುಣಗಳು ಸಂಪೂರ್ಣವಾಗಿವೆ. ನಾನು ನಿನಗೆ ಕೊಟ್ಟಿರುವ ಉಪದ್ರವವನ್ನು ಕ್ಷಮಿಸಬೇಕೆಂದು ಬಾರಿ ಬಾರಿಗೂ ಪ್ರಾರ್ಥಿಸಿ, ರಾಜನಿಗೆ ನಾನಾಪ್ರಕಾರವಾದ ವಸ್ತ್ರಾಭರಣಗಳನ್ನು ಕೊಟ್ಟು ಸ್ವ ಸ್ಥಾನಕ್ಕೆ ಹೊರಟುಹೋದನು.

ಈ ರೀತಿಯಾಗಿ ಉದ್ದಾಯನಮಹಾರಾಜನು ಸಮ್ಯಕ್ತ್ವಸಂಪನ್ನನಾಗಿ ಕೆಲವುಕಾಲ ರಾಜ್ಯಪರಿಪಾಲನೆಯನ್ನು ಮಾಡಿ, ಆ ಮೇಲೆ ಕಾರಣಾಂತರದಿಂದ ವೈರಾಗ್ಯಭಾವನೆಯಿಂದ ರಾಜ್ಯಭಾರವನ್ನು ಮಗನಿಗೊಪ್ಪಿಸಿ, ಮುನಿದೀಕ್ಷೆಯನ್ನು ಪರಿಗ್ರಹಿಸಿ, ಉತ್ತಮವಾದ ಧ್ಯಾನಾಗ್ನಿಯಿಂದ ಘಾತಿಕರ್ಮೇಂಧನವನ್ನು ನಾಶಮಾಡಿ ಕೇವಲಜ್ಞಾನಿಯಾಗಿ ಮುಕ್ತಿಯನ್ನು ಹೊಂದಿದನು. ಪ್ರಭಾವತಿಯೂ ಜಿನದೀಕ್ಷೆಯನ್ನು ಸ್ವೀಕರಿಸಿ, ಉತ್ತಮವಾದ ತಪಸ್ಸಿನ ಬಲದಿಂದ ಸನ್ಯಾಸಮರಣವನ್ನು ಹೊಂದಿ, ಬ್ರಹ್ಮಸ್ವರ್ಗವೆಂಬ ೫ ನೇ ಸ್ವರ್ಗದಲ್ಲಿ ದೇವನಾಗಿ ಹುಟ್ಟಿದಳು.

ಈ ಕಥೆಯ ಸಾರಾಂಶವೇನಂದರೆ ಸಮ್ಯಕ್ತ್ವವಂತರಾದ ಸ್ತ್ರೀಪುರುಷರು ಉದ್ದಾಯನಮಹಾರಾಜನಂತೆ ಸಮ್ಯಕ್ತ್ವ, ದಾತೃತ್ವ, ಮೊದಲಾದ ಗುಣಗಳಿಂದ ಭೂಷಿತರಾಗಿ ನಿಂದ್ಯಕರವೂ ಅಪವಿತ್ರವೂ ಆದ ವಸ್ತುಗಳನ್ನು ನೋಡಿ ಹೇಸಿಗೆ ಪಡದೆ ನಿರ್ವಿಚಿಕಿತ್ಸಾಗುಣಸಂಪನ್ನರಾಗಿ ಮೋಕ್ಷಸುಖಕ್ಕೆ ಪಾತ್ರರಾಗಬೇಕೆಂದು ಭಾವವು.

## [೪] ಅಮೂಢದೃಷ್ಟಿ ಅಂಗ.

**ಕಾಪಥೇ ಪಥಿ ದುಃಖಾನಾಂ | ಕಾಪಥಸ್ಥೇಽಪ್ಯಸಂಮತಿಃ ||**
**ಅಸಂಪೃಕ್ತಿರನುತ್ಕೀರ್ತಿ-ರಮೂಢಾದೃಷ್ಟಿರುಚ್ಯತೇ ||೧೪||**

**ಅನ್ವಯಾರ್ಥ:**—ದುಃಖಾನಾಂ-ದುಃಖಗಳಿಗೆ ಪಥಿ—ಮಾರ್ಗವಾದ ಕಾಪಥೇ-ಮಿಥ್ಯಾಮಾರ್ಗದಲ್ಲಿಯೂ ಅಪಿ-ಮತ್ತು ಕಾಪಥಸ್ಥೇ-ಕುಮಾರ್ಗದಲ್ಲಿರುವ—ಮಿಥ್ಯಾಧರ್ಮದವರಲ್ಲಿ ಅಸಂಮತಿಃ-ಸಮ್ಮತಿಯನ್ನು ಕೊಡದಿರುವಿಕೆಯು, ಅಸಂಪೃಕ್ತಿಃ—ಕಾಯದಿಂದ ಸಹಾಯವನ್ನು ಮಾಡದಿರುವಿಕೆಯು ಅನುತ್ಕೀರ್ತಿಃ-ವಚನದಿಂದ ಪ್ರಶಂಸಿಸದಿರುವಿಕೆಯು ಅಮೂಢಾದೃಷ್ಟಿಃ—ಅಮೂಢದೃಷ್ಟಿ ಎಂಬ ನಾಲ್ಕನೇ ಅಂಗವೆಂದು ಉಚ್ಯತೇ-ಹೇಳಲ್ಪಡುತ್ತದೆ.

**ತಾತ್ಪರ್ಯ:**— ಈ ಜೀವನು ಮಿಥ್ಯಾತ್ವನಾಮಕರ್ಮದ ಉದಯದಿಂದ ಅನಂತದು:ಖಗಳಿಗೆ ಕಾರಣವೂ ಚತುರ್ಗತಿಭ್ರಮಣರೂಪವೂ ಆದ ಸಂಸಾರದಲ್ಲಿ ತಿರುಗುತ್ತಾನೆ. ಯಥಾರ್ಥ [ಸತ್ಯ]ವೂ ಪೂರ್ವೋಕ್ತ

ವಾದಗುಣಗಳೂ ಇಲ್ಲದಿರುವ ದೇವಗುರುಶಾಸ್ತ್ರಗಳಲ್ಲಿ ಶ್ರದ್ಧೆಯನ್ನಿಡುವದಕ್ಕೆ ಮಿಥ್ಯಾತ್ವವೆಂದು ಹೆಸರು. ಈ ರೀತಿಯಾದ ಮಿಥ್ಯಾತ್ವವನ್ನೂ ಮನ-ವಚನ—ಕಾಯಗಳಿಂದ ಸಮ್ಮತಿ-ಪ್ರಶಂಸೆ-ಸಹಾಯಗಳನ್ನು ಮಾಡದಿರುವುದಕ್ಕೆ 'ಅಮೂಢದೃಷ್ಟಿ' ಅಂಗವೆಂದು ಹೆಸರು. ಈ ಅಂಗದಲ್ಲಿ ರೇವತೀ ಮಹಾರಾಣಿಯು ಪ್ರಸಿದ್ಧಿಯನ್ನು ಪಡೆದಿರುವಳು.

## ರೇವತೀರಾಣಿಯ ಕಥೆ.

ಪೂರ್ವದಲ್ಲಿ ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯಲ್ಲಿ ಮೇಘಕೂಟವೆಂಬ ನಗರವನ್ನು ಧಾರ್ಮಿಕನೂ ಪ್ರಜಾವತ್ಸಲನೂ ಆದ ಚಂದ್ರಪ್ರಭನೆಂಬ ಅರಸನು ಆಳುತ್ತಿದ್ದನು. ಆತನೊಂದು ದಿನ ತೀರ್ಥಯಾತ್ರೆಯನ್ನು ಮಾಡಬೇಕೆಂಬ ಲವಲವಿಕೆಯಿಂದ ರಾಜ್ಯಭಾರವನ್ನು ತನ್ನ ಮಗನಾದ ಚಂದ್ರಶೇಖರನ ಸ್ವಾಧೀನ ಒಪ್ಪಿಸಿ, ಯಾತ್ರೆಗೋಸ್ಕರ ಹೊರಟು ಕ್ರಮವಾಗಿ ತೀರ್ಥಯಾತ್ರೆಗಳನ್ನು ಮಾಡುತ್ತಾ ದಕ್ಷಿಣಮಥುರಾನಗರಕ್ಕೆ ಬಂದನು. ಚಂದ್ರಪ್ರಭರಾಜನು ಹಲವು ವಿಧದ ವಿದ್ಯಾಸಂಪನ್ನನಾದರೂ ಕ್ಷುಲ್ಲಕವೇಷದಿಂದ [ ನಿಗರ್ವಿಯಾಗಿ ] ಅಲ್ಲಿರುವ ಗುಪ್ತಾಚಾರ್ಯರೆಂಬ ಮುನಿಗಳ ದರ್ಶನ ಮಾಡಿ, ಕೆಲವು ದಿವಸ ಅವರ ನಿಕಟದಲ್ಲಿ ಧರ್ಮೋಪದೇಶವನ್ನು ಕೇಳಿಕೊಂಡು, ಆ ಮೇಲೆ ಉತ್ತರಮಥುರೆಗೆ ಹೋಗಬೇಕೆಂಬ ಇಚ್ಛೆಯುಳ್ಳವನಾಗಿ, ಗುರುಗಳಿಗೆ ನಮಸ್ಕರಿಸಿ ಅಪ್ಪಣೆಯನ್ನು ಕೇಳಿದನು. ಮತ್ತು ಯಾರಿಗಾದರೂ ತಮ್ಮ ನಿರೂಪವನ್ನು ತಿಳಿಸಬೇಕಿದ್ದರೆ ಹೇಳಬೇಕೆಂದನು. ಆಗ ಮುನಿಗಳು ಸುವ್ರತರೆಂಬ ಮುನಿಗಳಿಗೆ ಪ್ರಣಾಮವನ್ನೂ ಸಮ್ಯಕ್ತ್ವವತಿಯಾದ ರೇವತೀ ರಾಣಿಗೆ 'ಧರ್ಮವೃದ್ಧಿರಸ್ತು" ಎಂಬೀ ಆಶೀರ್ವಾದವನ್ನೂ ತಿಳಿಸಬೇಕೆಂದರು. ಪುನಃ ರಾಜನು ಇನ್ನಾರಿಗಾದರೂ ಹೇಳತಕ್ಕದ್ದಿದೆಯೇ ? ಎಂದು ಪ್ರಶ್ನೆ ಮಾಡಲು, ಪೂರ್ವದಂತೆಯೇ ಉತ್ತರವನ್ನಿತ್ತರು. ಇದನ್ನು ಕೇಳಿ ರಾಜನು ವಿಸ್ಮಿತಚಿತ್ತನಾಗಿ, ಏಕಾದಶಾಂಗಧಾರಿಗಳಾದ ಭವ್ಯಸೇನ ಮುನಿಗಳೂ ಪ್ರಸಿದ್ಧರಾದ ಇನ್ನು ಕೆಲವು ಮುನಿಗಳೂ ಇರೂವಲ್ಲಿ ಅವರಿಗೆ ಪ್ರಣಾಮವನ್ನು ಹೇಳದೆ, ಸುವ್ರತಮುನಿಗಳಿಗೆ ಮಾತ್ರ ಹೇಳಬೇಕಾದರೆ, ಇವರಲ್ಲೇನಾದರೂ ವಿಶೇಷವಿದ್ದಿರಬೇಕೆಂದು ಯೋಚಿಸಿ,

ಇದರ ಸತ್ಯಾಂಶವನ್ನು ಪ್ರತ್ಯಕ್ಷಾನುಭವದಿಂದ ನೋಡಬೇಕೆಂದು. ಅಲ್ಲಿಂದ ಹೊರಟು ಕೆಲವು ದಿವಸಗಳೊಳಗಾಗಿ ಉತ್ತರಮಥುರೆಗೆ ಬಂದು ಸೇರಿದನು, ಅಲ್ಲಿ ಸುವ್ರತಮುನಿಗಳ ಸಮೀಪಕ್ಕೆ ಬಂದು ಅವರಿಗೆ ಗುಪ್ತಾಚಾರ್ಯರ ನಿರೂಪವನ್ನು ತಿಳಿಸಿದನು.—

ಆಗ ಸುವ್ರತಮುನಿಗಳು ರಾಜನಿಗೆ 'ಧರ್ಮವೃದ್ಧಿರಸ್ತು' ಎಂದು ಆಶೀರ್ವದಿಸಿ, ಬಹಳ ಆದರಸತ್ಕಾರವನ್ನು ಮಾಡಿದರು. ಆಗ ರಾಜನು ಆ ಸುವ್ರತಮುನಿಗಳ ವಾತ್ಸಲ್ಯವನ್ನು ನೋಡಿ ಸಂತುಷ್ಟಚಿತ್ತನಾದನು. ಅದಲ್ಲದೆ ಇವರ ಉತ್ಕೃಷ್ಟವಾದ ಚಾರಿತ್ರವನ್ನು ನೋಡಿ, ಇವರ ಯೋಗ್ಯತೆಯು ಶ್ರೇಷ್ಠವಾದುದು. ಆದುದರಿಂದಲೇ ಗುಪ್ತಾಚಾರ್ಯರು ನಮಸ್ಕಾರವನ್ನು ಹೇಳಿರುವರು. ಎಂದನ್ನುತ್ತಾ ಇನ್ನು ಮೇಲೆ ಭವ್ಯಸೇನಮುನಿಗಳ ಪರೀಕ್ಷೆಯನ್ನು ಮಾಡುವ ಎಂದಾಲೋಚಿಸಿ, ಅವರಿದ್ದಲ್ಲಿಗೆ ಬಂದನು. ಅಲ್ಲಿ ನಾಮಧಾರಿಗಳಾದ ಮುನಿಗಳನ್ನು ಕಂಡು ನಮಸ್ಕಾರವನ್ನು ಮಾಡಿದನು— ಪರಂತು, ಅವರು ತನ್ನ ವಿದ್ಯಾಗರ್ವದಿಂದ ಆಶೀರ್ವದಿಸಲಿಲ್ಲ. ಹೀಗಾದ ಮೇಲೆ ಇನ್ನಿತರ ಉಪಚಾರನ್ನೇನು ಹೇಳಬೇಕು? ಯಾವಶಾಸ್ತ್ರಜ್ಞಾನವು ನಿರ್ದೋಷವಾಗಿರುವುದೋ ಅಂತಹ ಜ್ಞಾನವು ಭವ್ಯಸೇನ ಮುನಿಗಳ ಗರ್ವಕ್ಕೆ ಕಾರಣವಾದುದೆಂದರೆ, ವಾಚಕರಿಗೆ ಆಶ್ಚರ್ಯವೆನಿಸದಿರದು. ಪರಂತು ಇದರಲ್ಲೇನೂ ಆಶ್ಚರ್ಯಪಡಬೇಕಾದುದಿಲ್ಲವು. ಯಾಕಂದರೆ? ಪಾಪಿಗಳಿಗೆ ಅಮೃತವೂ ವಿಷವಾಗಿ ಪರಿಣಮಿಸುವುದು. ಆದರೆ ಅವರಿಗೆ ಅಂತಹ ಅಮೃತದ ನಿಜವಾದ ಯೋಗ್ಯತೆಯು ಗೊತ್ತಾಗುವುದಿಲ್ಲವೆಂದು ಅದರ ಯೋಗ್ಯತೆಯು ಎಂದೂ ಕಡಮೆಯಾಗಲಾರದು. ಅದರಂತೆ ಪವಿತ್ರವಾದ ಜಿನಶಾಸ್ತ್ರದ ಜ್ಞಾನವು ಸರ್ವರಿಗೂ ಹಿತಕಾರಿಯಾದುದಾದರೂ, ಅಭವ್ಯರು ಅದರ ಮಹತ್ವವನ್ನರಿಯದೆ ಅಹಂಕಾರಕ್ಕೆ ಅವಕಾಶವನ್ನು ಕೊಡುತ್ತಾರೆಂದು ಭಾವವು.

ಅನಂತರ ಭವ್ಯಸೇನಮುನಿಗಳು ಪ್ರಾತರ್ವಿಧಿಯ ನಿಮಿತ್ತವಾಗಿ ಕಮಂಡಲವನ್ನು ಹಿಡಿದು ಹೋಗಲು, ರಾಜನೂ ಅವರ ಪರೀಕ್ಷಾರ್ಥವಾಗಿ ತನ್ನ ಕೊಂಡು ಅವರ ಹಿಂದೆಯೇ ಹೊದನು. ಹೋಗುತ್ತಾ ರಾಜನು ತನ್ನ

ವಿದ್ಯಾಬಲದಿಂದ ಭೂಮಿಯ ಮೇಲೆ ಕೋಮಲವಾದ ಎಳೆ ಹುಲ್ಲನ್ನು ನಿರ್ಮಿಸಿದನು. ಇಂತಹ ಹುಲ್ಲಿನಲ್ಲಿ ಏಕೇಂದ್ರಿಯ ಪ್ರಾಣಿಗಳು ಇರುತ್ತವೆಂಬೀ ವಿಷಯವು ಆ ಮುನಿಗಳಿಗೆ ಗೊತ್ತಿದ್ದರೂ, ಅದನ್ನು ತುಳಿದುಕೊಂಡೇ ಹೋದರು. ಅದನ್ನು ನೋಡಿ ರಾಜನು ಇವರು ೧೧ ಅಂಗಗಳನ್ನು ಬಲ್ಲವರಾದರೂ ಇವರ ಚಾರಿತ್ರವು ಒಳ್ಳೆಯದಲ್ಲವು. ಆದರೂ ಪುನಃ ಇನ್ನೂ ಇವರ ಸ್ವಭಾವವನ್ನು ಪರೀಕ್ಷಿಸಿ ನೋಡುವೆನೆಂದು ಯೋಚಿಸಿ ತನ್ನ ಕೈಯಲ್ಲಿದ್ದ ಕಮಂಡಲದ ನೀರನ್ನು ಇಲ್ಲದಂತೆ ಮಾಡಿದನು. ಇತ್ತ ಭವ್ಯಸೇನಮುನಿಗಳು ಪ್ರತಿನಿತ್ಯದಂತೆ ಮಲವನ್ನು ವಿಸರ್ಜಿಸಿ, ಪ್ರಕ್ಷಾಲನೆಗೋಸ್ಕರ ನೀರನ್ನು ಕೇಳಲು, ರಾಜನು—ಸ್ವಾಮಿ! ಕಮಂಡಲದಲ್ಲಿದ್ದ ನೀರು ಅಕಸ್ಮಾತ್ತಾಗಿ ಚೆಲ್ಲಿಹೋಯಿತು. ಆದರೂ ಚಿಂತೆಯಿಲ್ಲ. ಸಮೀಪದಲ್ಲೊಂದು ಕೆರೆಯು ಕಾಣುತ್ತದೆ. ಅಲ್ಲಿಗೆ ಹೋಗಿ ಪ್ರಕ್ಷಾಲನೆಯನ್ನು ಮಾಡಿಕೊಳ್ಳಬಹುದು ಎಂದನು. ಆಗೆ ಮುನಿಗಳು ಅದೇ ಪ್ರಕಾರವಾಗಿ ಮಾಡಿದರು ಇದನ್ನೆಲ್ಲಾ ರಾಜನು ನೋಡಿ ಅಯ್ಯೋ! ಪಾಪ, ಮಿಥ್ಯಾಜ್ಞಾನಿಗಳು ಎಂತಹ ಅಕೃತ್ಯಗಳನ್ನಾದರೂ ಮಾಡಲು ಹಿಂಜರಿಯುವದಿಲ್ಲವು ಸೂರ್ಯನ ಪ್ರಕಾಶವು ಸರ್ವರಿಗೂ ಆನಂದದಾಯಕವಾಗಿದ್ದರೂ ಗೂಗೆಗಳಿಗೆ ದುಃಖಕರವಾಗಿರುವುದು ಸ್ವಾಭಾವಿಕವಾಗಿದೆ, ಅದರಂತೆಯೇ ಉತ್ತಮವಾದ ಜೈನಶಾಸ್ತ್ರವು ಮಿಥ್ಯಾಜ್ಞಾನಿಗಳ ಆಶ್ರಯದಿಂದ ಕುಮಾರ್ಗಪ್ರವರ್ತಕವಾಗುವುದು. ಎಂದು ರಾಜನು ಆಲೋಚಿಸಿ, ಇವರು ದುಷ್ಟವಾದ ಆಚರಣೆ ಉಳ್ಳವರಾಗಿರುವುದರಿಂದ ಇವರಿಗೆ ''ಭವ್ಯಸೇನ'' ರೆಂಬ ನಾಮಕ್ಕಿಂತಲೂ 'ಅಭವ್ಯಸೇನ' ರೆಂಬ ಹೆಸರೇ ಹೆಚ್ಚಾಗಿ ಶೋಭಿಸುವುದು ಎಂದು ಹೇಳಿ, ಅಲ್ಲಿಂದ ವರುಣನೆಂಬರಸನ ಪತ್ನಿಯಾದ ರೇವತಿರಾಣಿಯು ಇದ್ದಲ್ಲಿಗೆ ಬಂದು, ಅವಳ ಸಮ್ಯಕ್ತ್ವದ ಮಹಿಮೆಯನ್ನು ಪರೀಕ್ಷಿಸಬೇಕೆಂದು, ಮೊಟ್ಟಮೊದಲು ತನ್ನ ವಿದ್ಯಾಪ್ರಭಾವದಿಂದ ಪೂರ್ವದಿಕ್ಕಿನಲ್ಲಿ ಕಮಲಾಸನದಮೇಲೆ ಕುಳಿತವನೂ. ಯಜ್ಞೋಪವೀತಯುಕ್ತನೂ ಚತುರ್ಮುಖದಿಂದ ವೇದಘೋಷಣೆಯನ್ನುಮಾಡುವವನೂ ಸುರಾಸುರರಿಂದ ನಮಸ್ಕರಿಸಲ್ಪಟ್ಟವನೂ ಆದ ಬ್ರಹ್ಮದೇವನ ರೂಪವನ್ನು ಧಾರಣೆಮಾಡಿಕೊಂಡು ಕುಳಿತನು,

ಈ ವಾರ್ತೆಯು ಊರಲ್ಲೆಲ್ಲಾ ಕರ್ಣೋಪಕರ್ಣವಾಗಿ ಹಬ್ಬಿ, ಸಾಕ್ಷಾತ್ ಬ್ರಹ್ಮದೇವರೇ ನಮ್ಮ ಪಟ್ಟಣಕ್ಕೆ ಅವತೀರ್ಣರಾಗಿರುವರು. ಆದ್ದರಿಂದ ಅವರ ದರ್ಶನಕ್ಕೆ ಹೋಗಬೇಕೆಂದನ್ನುತ್ತಾ ನಗರವಾಸಿಗಳೆಲ್ಲರೂ ಉತ್ಸಾಹಚಿತ್ತರಾದರು. ಈ ವೃತಾಂತವು ರಾಜನಿಗೂ ತಿಳಿದು ಬ್ರಹ್ಮದೇವರ ದರ್ಶನವನ್ನು ಮಾಡಬೇಕೆಂದು ಬಹಳ ಕುತೂಹಲದಿಂದ ಭವ್ಯಸೇನಮುನಿಗಳನ್ನೂ ಇತರ ಪ್ರಮುಖರಾದ ನಗರವಾಸಿಗಳನ್ನೂ ಕೂಡಿಕೊಂಡು ಹೊರಡಲುದ್ಯುಕ್ತನಾಗಿ, ರಾಣಿಯಾದ ರೇವತಿಯನ್ನೂ ಬರ ಹೇಳಿದನು. ಆದರೆ, ರಾಣಿಯು ಈ ಮಾತಿಗೆ ಒಡಂಬಡಲಿಲ್ಲ. ಆಗ ರಾಜನೂ ಇತರ ಕೂಡಿದ ಜನರೂ ಹೇಳಿದ್ದೇನಂದರೆ, "ಇಂದು ಸಾಕ್ಷಾತ್ತಾಗಿ ಬ್ರಹ್ಮದೇವರೇ ನಮ್ಮೆಲ್ಲರ ಪೂರ್ವಪುಣ್ಯದಿಂದ ಈ ನಗರದಲ್ಲಿ ಅವತರಿಸಿದ್ದು ಇಂಥಹ ಸುಸಂಧಿಯನ್ನು ವ್ಯರ್ಥವಾಗಿ ಕಳಕೊಳ್ಳಬಾರದಾಗಿ ಬಹಳ ಆಗ್ರಹಪೂರ್ವಕವಾಗಿ ಹೇಳಿಕೊಂಡು, ಅನೇಕ ವಿಧದಿಂದ ರಾಣಿಯ ಮನಸ್ಸನ್ನು ತಿರುಗಿಸಲು ಪ್ರಯತ್ನಿಸಿದರು. ಪರಂತು. ಆ 'ದೃಢಸಮ್ಯಕ್ತ್ವವತಿಯ ಮುಂದೆ ಯಾವ ಪ್ರಯತ್ನವೂ ಫಲಕಾರಿಯಾಗಲಿಲ್ಲ, ಅವಳು ಖಂಡಿತವಾಗಿ ಹೇಳಿದ್ದೇನಂದರೆ, "ಇವರು ನಿಜವಾದ ಬ್ರಹ್ಮದೇವರಲ್ಲ, ಯಾವನೋ ಸುರ ಅಥವಾ ಅಸುರನು ವೆಷಧಾರಿಯಾಗಿ ಜನರನ್ನು ಮೋಸಗೊಳಿಸಲು ಬಂದಿರುತ್ತಾನೆ. ಇಂತಹ ಕಪಟ ದೇವರ ದರ್ಶನಕ್ಕೆ ನಾನು ಬರುವದಿಲ್ಲ" ವೆಂದಳು. ಆಗ ರಾಜನೇ ಮೊದಲಾದವರು ಹೆಚ್ಚಿಗೆ ಆಗ್ರಹ ಮಾಡದೆ ದೇವರದರ್ಶನಕ್ಕಾಗಿ ಹೋದರು. ಬ್ರಹ್ಮವೇಷಧಾರಿಯಾದ ರಾಜನು ತನ್ನ ದರ್ಶನಕ್ಕೆ ಯಾರ್ಯಾರು ಬರುತ್ತಾರೆಂದು ಲಕ್ಷ್ಯಪೂರ್ವಕವಾಗಿ ನೋಡುತ್ತಲೇ ಇದ್ದನು, ಆದರೆ, ಭವ್ಯಸೇನಮುನಿಗಳೂ ಬಂದಿದ್ದು, ರೇವತಿರಾಣಿಯು ಬರದಿದ್ದುದನ್ನು ಕಂಡು ಅತ್ಯಾಶ್ಚರ್ಯಪಟ್ಟು, ಏಕಾದಶಾಂಗಧಾರಿಗಳಾದ ಭವ್ಯಸೇನರೂ ತನ್ನ ಕಪಟತನಕ್ಕೆ ಮರುಳಾಗಿ ಸಮ್ಯಕ್ತ್ವವನ್ನು ಬಿಟ್ಟು ಬಂದಿರುವರು, ಇವಳಾದರೋ ಜಿನಾಗಮದ ವಿಶೇಷವಾದ ಜ್ಞಾನವಿಲ್ಲದವಳಾಗಿಯೂ ತನ್ನ ದೃಢಭಕ್ತಿಯಿಂದ ಇದೆಲ್ಲ ಕಪಟಜಾಲವೆಂದರಿದು ತನ್ನ ಸಮ್ಯಕ್ತ್ವದಿಂದ ಎಳ್ಳಷ್ಟಾ

ದರೂ ಚಂಚಲಳಾಗಲಿಲ್ಲವು. ಈಕೆಯೇ ಧನ್ಯಳು. ಆದರೂ ನಾನು ಇಷ್ಟ ರಿಂದಲೇ ಸಂತುಷ್ಟನಾಗುವುದುಚಿತವಲ್ಲವು. ಆ ರಾಣಿಯಲ್ಲಿ ಸಮ್ಯಕ್ತ್ವವು ಎಷ್ಟರ ಮಟ್ಟಿಗೆ ಇರುವುದೆಂಬುದನ್ನು ಆದಷ್ಟು ಕಪಟೋಪಾಯಗಳಿಂದ ಪರೀಕ್ಷಿಸಲೇ ಬೇಕೆಂದು ನಿಶ್ಚೈಸಿದನು.

ಮಾರಣೆಯ ದಿನ ಸರ್ಪವನ್ನು ಧಾರಣೆಮಾಡಿದ ಗರುಡವಾಹ ನನೂ ಶಂಖ, ಚಕ್ರ, ಗದೆ, ಮತ್ತು ಖಡ್ಗಗಳನ್ನು ಧರಿಸಿದವನೂ ಗೋಪಿಕಾ ಸ್ತ್ರೀಯರಿಂದ ಸುತ್ತುಗಟ್ಟಲ್ಪಟ್ಟವನೂ ಆದ ಶ್ರೀ ವಿಷ್ಣುವಿನ ರೂಪವನ್ನು ಧಾರಣೆ ಮಾಡಿಕೊಂಡು ನಗರದ ದಕ್ಷಿಣದಿಕ್ಕಿನಲ್ಲಿ ಕೂತುಕೊಂಡನು. ಪೂರ್ವದಂತೆ ಇಂದು ಸಹ ರಾಜನಾದ ವರೂಣನೂ ಭವ್ಯಸೇನಮುನಿಗಳೂ ನಾಗರಿಕರೂ ಬಂದು ಹೋದರು. ಪರಂತು ರೇವತಿರಾಣಿಯು ಮಾತ್ರ ಬರಲಿಲ್ಲ. ಅವಳು ಹೇಳಿದ್ದೆನಂದರೆ— "ಜಿನಶಾಸ್ತ್ರದಲ್ಲಿ ಪ್ರತಿಪಾದಿಸಲ್ಪಟ್ಟರುವ ನಾರಾಯಣ ಮತ್ತು ಪ್ರತಿನಾರಾಯಣರು ಹಿಂದೆಯೇ ಆಗಿ ಹೋಗಿರುವರು. ಹೀಗಿರುವಾಗ ಪುನಃ ಪ್ರಕಟವಾಗುವುದು ಹೇಗೆ? ಜಿನಶಾಸ್ತ್ರವು ಎಂದೂ ಅಸತ್ಯವಾಗಲಾರದು. ಆದ್ದರಿಂದ ನಿನ್ನೆಯಂತೆ ಯಾವನೋ ಮೋಸಗೊಳಿಸುವುದಕ್ಕಾಗಿ ವೇಷಾಂತರವನ್ನು ಮಾಡಿರ ಬಹುದು" ವೇಷಧಾರಿಯಾದ ರಾಜನು ಇಂದೂ ಸಹ ರೇವತಿರಾಣಿಯು ಬಾರದಿದ್ದುದನ್ನು ಕಂಡು ವಿಸ್ಮಯಚಿತ್ತನಾಗಿ ಮರುದಿವಸ ಶಂಕರನ ವೇಷ ವನ್ನು ಧರಿಸಬೇಕೆಂದು ನಿಶ್ಚೈಸಿದನು.

ಅನಂತರ ನಂದಿವಾಹನನೂ ವಾಮದಕ್ಷಿಣಾಂಕಗಳಲ್ಲಿ ಅನುಕ್ರಮ ವಾಗಿ ಪಾರ್ವತಿ ಗಣಪತಿಯರನ್ನು ಧಾರಣೆಮಾಡಿಕೊಂಡವನೂ ಜಟಾ ಧಾರಿಯೂ ಹಣೆಯಲ್ಲಿ ಚಂದ್ರನನ್ನು ಧರಿಸಿದವನೂ ಸದಾ ಮಸ್ತಕದಲ್ಲಿ ಗಂಗೆಯನ್ನು ಧರಿಸಿಕೊಂಡವನೂ ಭಕ್ತಿಪೂರ್ವಕವಾಗಿ ಸುರಾಸುರರಿಂದ ನಮುಸ್ಕರಿಸಲ್ಪಡುವವನೂ ಆದ ಮಹೇಶ್ವರನ ರೂಪವನ್ನು ಧರಿಸಿಕೊಂಡು ಪಟ್ಟಣದ ಪಶ್ಚಿಮದಿಕ್ಕಿನಲ್ಲಿ ವಿರಾಜಮಾನನಾದನು. ಈ ಸಾರಿಯೂ ರೇವತಿರಾಣಿಯನ್ನುಳಿದು ಇತರರೆಲ್ಲರೂ ಬಂದರು. ಆಗ ಅವಳು ಹೇಳಿ ದ್ದೇನಂದರೆ, "ಜಿನಶಾಸ್ತ್ರದಲ್ಲಿ ಏಕಾದಶರುದ್ರರಾಗುವರೆಂದು ಹೇಳಿರುತ್ತದೆ.

ಹೀಗಿರಲು ೧೨ ನೆಯ ರುದ್ರನೆಲ್ಲಿಂದ ಬರಬೇಕು? ಇದೆಲ್ಲಾ ಕಪಟತನ ವಲ್ಲದೆ ಇನ್ನೇನು?" ಇಂದೂ ರೇವತಿರಾಣಿಯು ಬಾರದಿರುವುದನ್ನು ನೋಡಿ, ವೇಷಧಾರಿಯಾದ ರಾಜನು ಸೋಜಿಗಪಟ್ಟು, ಈಕೆಯ ಮನಸ್ಸು ಅನ್ಯಮತಿಗಳಾದ ದೇವತೆಗಳ ಕಡೆಗೆ ಒಲಿಯದು, ಇನ್ನು ಪ್ರತ್ಯಕ್ಷವಾಗಿ ತೀರ್ಥಂಕರ ರೂಪವನ್ನೆ ಧರಿಸಿ, ಈಕೆಯನ್ನು ಪರೀಕ್ಷಿಸುವುದು ಲೇಸೆಂದು ಯೋಚಿಸಿ, ಮರುದಿವಸ ಅಷ್ಟಮಹಾಪ್ರಾತಿಹಾರ್ಯಗಳಿಂದ ಶೋಭಿಸು ವವನೂ ಮಿಥ್ಯಾಜ್ಞಾನಿಗಳ ಗರ್ವವನ್ನು ನಾಶಮಾಡುವ ನಾಲ್ಕು ಮಾನ ಸ್ತಂಭಗಳಿಂದ ಯುಕ್ತವಾದ ಸಮವಸರಣಸಭೆಯಲ್ಲಿ ವಿರಾಜಮಾನನೂ ದೇವೇಂದ್ರ, ಧರಣೇಂದ್ರ, ಚಕ್ರವರ್ತಿ ಮೊದಲಾದವರಿಂದ ನಮಸ್ಕರಿಸಲ್ಪ ಡುವವನೂ ಅನೇಕ ಪ್ರಕಾರವಾದ ಸ್ತುತಿಸಹಿತವಾಗಿ ಅಷ್ಟವಿಧದ್ರವ್ಯ ಗಳಿಂದ ಪೂಜಿಸಲ್ಪಡುವವನೂ ದಿವ್ಯಧ್ವನಿಯಿಂದ ಧರ್ಮೋಪದೇಶವನ್ನು ಮಾಡುತ್ತಿರುವವನೂ ಆದ ತೀರ್ಥಂಕರರ ರೂಪವನ್ನು ಧಾರಣೆ ಮಾಡಿ ಕೊಂಡು ಉತ್ತರದಿಕ್ಕಿನಲ್ಲಿ ವಿರಾಜಮಾನನಾದನು. ಈ ಸಾರಿಯಂತೂ ನಗರ ವಾಸಿಗಳಿಗೆಲ್ಲಾ ಹೆಚ್ಚಾದ ಉತ್ಸಾಹವುಂಟಾಗಿ, ಎಲ್ಲಿ ನೋಡಿದರೂ ಪ್ರತಿ ಯೊಬ್ಬರೂ ತೀರ್ಥಂಕರರ ದರ್ಶನಕ್ಕೆ ಹೋಗುವುದರಲ್ಲಿಯೇ ಮಗ್ನರಾಗಿ ದ್ದರು. ಇದೇ ರೀತಿಯಾಗಿ ನಮ್ಮ ರಾಜನೂ ಭವ್ಯಸೇನ ಮುನಿಗಳೂ ದರ್ಶ ನೋತ್ಸುಕರಾಗಿ ಹೊರಟರು. ಇಂದು ರಾಜನು ರಾಣಿಯನ್ನು ಕುರಿತು— ಇಷ್ಟು ದಿವಸಗಳ ಮಾತಂತಿರಲಿ. ಇಂದು ಸಾಕ್ಷಾತ್ತಾಗಿ ತೀರ್ಥಂಕರರೇ ಅವತರಿಸಿರುವರು. ಇಂತಹ ಅಮೂಲ್ಯ ಸಂಧಿಯನ್ನು ಕಳಕೊಳ್ಳದೆ ನಿನ್ನ ಮೂರ್ಖತನವನ್ನು ಬಿಟ್ಟು ಇಂದು ನಮ್ಮೊಡನೆ ಬರಲು ಸಿದ್ಧಳಾಗೆಂದು ಅತ್ಯಾಗ್ರಹದಿಂದ ಹೇಳಿದನು. ಆಗ ರಾಣಿಯು—ಜಿನಾಗಮದಲ್ಲಿ ೨೪ ತೀರ್ಥಂಕರರೇ ಎಂದು ಹೇಳಿರುತ್ತದೆ. ಅದರಂತೆ ೨೪ ತೀರ್ಥಂಕರರು ಮೊದಲು ಆಗಿ ಹೋಗಿರುವರು. ಇಂದು ಅದೆತ್ತ ೨೫ ನೆಯ ತೀರ್ಥಂಕ ರರು? ಶಾಸ್ತ್ರವು ಎಂದೂ ಸುಳ್ಳಾಗಲಾರದು. ೨೪ ಮಂದಿ ತೀರ್ಥಂಕರರು ಹೊರತು ೨೫ ನೆಯ ತೀರ್ಥಂಕರರಿಲ್ಲ, ಆದ್ದರಿಂದ ಈ ತೀರ್ಥಂಕರರನ್ನು ನಾನು ನಿಜವಾದ ತೀರ್ಥಂಕರರೆಂದು ತಿಳಿಯುವುದಿಲ್ಲ. ಆದ್ದರಿಂದ

ದರ್ಶನಕ್ಕೆ ಬರಲಾರೆನೆಂದಳು. ಎಷ್ಟು ಹೇಳಿದರೂ ರಾಣಿಯ ಮನಸ್ಸು ಚಂಚಲವಾಗದಿದ್ದುದನ್ನು ಕಂಡು, ರಾಜನು ಭವ್ಯಸೇನ ಮುನಿಗಳೊಡನೆ ದರ್ಶನಕ್ಕೆ ಹೊರಟು ಹೋದನು.

ವಾಚಕಮಹಾಶಯರೇ, ಭಯಂಕರವಾದ ಝುಂಝಾವಾತವು ಎಷ್ಟು ವೇಗದಿಂದ ಬೀಸಿದರೂ ಮೇರುಶಿಖರವು ಹ್ಯಾಗೆ ಚಲಿಸಲಾರದೋ, ಅಂತೆಯೇ ಸಮ್ಯಗ್ಜ್ಞಾನಿಗಳು ಎಂತಹ ಪ್ರಸಂಗ ಬಂದರೂ ಸಮ್ಯಕ್ತ್ವದಿಂದ ಚ್ಯುತರಾಗಲಿಕ್ಕಿಲ್ಲವು.

ನಮ್ಮ ಕಥಾನಾಯಿಕೆಯಾದ ರೇವತಿರಾಣಿಯೂ ಇದೇ ವರ್ಗಕ್ಕೆ ಸೇರಿವವಳೆನ್ನುವುದರಲ್ಲೇನೂ ಸಂದೇಹವಿರಲಾರದು. ಈ ಸಂಗತಿಗಳನ್ನೆಲ್ಲಾ ನೋಡಿ ಹನ್ನೊಂದು ಅಂಗಗಳನ್ನು ಬಲ್ಲಂತಹ ಭವ್ಯಸೇನಮುನಿಗಳೂ ಕೂಡ ವಿಚಲಿತರಾದರೂ ಅಂತಹ ಸಂಗತಿಗಳನ್ನು ತನ್ನ ಮನಸ್ಸಿಗೆ ಯಾವಳು ಬರಗೊಡಲಿಲ್ಲವೋ, ಅಂತವಳ ದರ್ಣನೆಯನ್ನು ಮಾಡಲು ಯಾರು ಸಮರ್ಥರು? ಈ ಜಡಲೇಖನಿಗಂತೂ ಅದೆತ್ತಣ ಶಕ್ತಿ? ಆದುದರಿಂದ ಸರ್ವಥಾ ಅಸದಳವು.

ಇತ್ತ ರಾಣಿಯು ಆಗಮನವನ್ನೇ ಬಯಸುತ್ತಿದ್ದ ವೇಷಧಾರಿಯಾದ ರಾಜನು ತನ್ನೆಡೆಗೆ ಬರುತ್ತಿದ್ದ ರಾಜನನ್ನೂ ಭವ್ಯಸೇನಮುನಿಗಳನ್ನೂ ಕಂಡು, ಆನಂದಭರಿತನಾಗಿ, ಗುಪ್ತಾಚಾರ್ಯರು ರೇವತಿರಾಣಿಗೆ ಮಾತ್ರ ಆಶೀರ್ವಾದವನ್ನು ಹೇಳಿದ ಕಾರಣವು ಗೊತ್ತಾಯಿತು. ಇವಳಲ್ಲಿ ಅಂತಹ ಯೋಗ್ಯತೆಯು ಇದೆ. ಇವಳು ನಿಜವಾಗಿಯೂ ಪ್ರಶಂಸೆಗೆ ಯೋಗ್ಯಳೆಂದು ಯೋಚಿಸಿ, ಇಷ್ಟರಿಂದಲೇ ಸಂತುಷ್ಟನಾಗದೆ ದಿಗಂಬರಮುನಿಯ ವೇಷವನ್ನೊಮ್ಮೆ ಧರಿಸಿ ನೋಡುವ! ಎಂದಾಲೋಚಿಸಿ, ರಾಜನು ಮಹಾಕುಷ್ಠವ್ಯಾಧಿಯಿಂದ ಪೀಡಿತನಾದ ಮುನಿಯ ವೇಷವನ್ನು ಧರಿಸಿ, ಆಹಾರನಿಮಿತ್ತವಾಗಿ ರಾಜಭವನದತ್ತ ಬರುತ್ತಾ ಮಹಾದ್ವಾರದ ಹತ್ತಿರ ಅಂಗಳದಲ್ಲಿ ಮೂರ್ಛಾಗತನಾಗಿ ಬಿದ್ದನು.. ಅದನ್ನು ನೋಡಿದೊಡನೆಯೇ ರೇವತಿರಾಣಿಯು ಹಾಹಾಕಾರವನ್ನು ಮಾಡುತ್ತಾ ಮುನಿಗಳ ಸಮೀಪಕ್ಕೆ ಹೋಗಿ ಶೈತ್ಯೋಪಚಾರದಿಂದ ಅವರನ್ನು ಎಚ್ಚರಿಸಿ, ಆಹಾರಕ್ಕೋಸ್ಕರ ಅರಮನೆಯೊಳಗೆ ಕರಕೊಂಡು ಹೋಗಿ ವಿಧಿಪೂರ್ವಕವಾಗಿ ಆಹಾರವನ್ನು ಇತ್ತಳು.

ಆಗ ಮಾಯಾಮುನಿಗಳು ತನ್ನ ಮಾಯಾನಿಮಿತ್ತದಿಂದ ಯಥೇಚ್ಛವಾಗಿ ಉಂಡು, ತಕ್ಷಣವೇ ಅತ್ಯಂತ ದುರ್ಗಂಧವಾದ ವಾಂತಿಯನ್ನು ಮಾಡಿ ಕೊಂಡರು. ಅದನ್ನು ಕಂಡ ಆಕೆಯು ಬಹಳ ದುಃಖಿತಳಾಗಿ ಆಕಟಕಟಾ! ಮಂದಭಾಗ್ಯಳಾದ ನಾನು ಮುನಿಗಳ ಪ್ರಕೃತಿಗೆ ವಿರುದ್ಧವಾದ ಆಹಾರ ವನ್ನು ಕೊಟ್ಟು ಅವರನ್ನು ತೊಂದರೆಗೊಳಪಡಿಸಿದೆನು. ನನ್ನಂತಹ ಪಾಪಿ ಷ್ಠಳಿಗೆ ಇಂತಹ ಮುನಿಗಳಿಗೆ ಆಹಾರದಾನ ಫಲವಾದರೂ ದೊರಕುವದು ಹೇಗೆ? ಈ ರೀತಿಯಾಗಿ ತನ್ನನ್ನು ನಿಂದಿಸಿಕೊಂಡು, ಆ ಮುನಿಗಳ ಮೈಯನ್ನು ಸ್ವಚ್ಛವಾದ ನೀರಿನಿಂದ ತೊಳೆದಳು. ಆಗ ವೇಷಧಾರಿಯಾದ ರಾಜನು ಆಕೆಯ ಭಕ್ತಿಯನ್ನು ನೋಡಿ ಅತ್ಯಾನಂದಭರಿತನಾಗಿ ತನ್ನ ನಿಜಸ್ವರೂಪವನ್ನು ಪ್ರಕಟಿಸಿ ರಾಣಿಯನ್ನು ಕುರಿತು-"ಎಲೈ ಮಹಾತ್ಮಳೇ! ಮಹಾಮುನಿಗಳಾದ ಗುಪ್ತಾಚಾರ್ಯರು ನಿನಗೆ "ಧರ್ಮವೃದ್ಧಿರಸ್ತು" ಎಂಬೀ ಆಶೀರ್ವಾದವನ್ನು ಹೇಳಿರುವರು. ನಾನು ನಿನ್ನಲ್ಲಿರುವ "ಅಮೂಢ ದೃಷ್ಟಿ" ಎಂಬ ಗುಣವು ಎಷ್ಟರಮಟ್ಟಿಗೆ ಸ್ಥಿರವಾಗಿರುವುದೆಂಬದನ್ನು ಪರೀಕ್ಷಿಸಲೋಸುಗ ಬಂದವನು. ನನ್ನ ಅಪರಾಧವನ್ನು ಕ್ಷಮಿಸಬೇಕು. ನಿನ್ನ ಸಮ್ಯಕ್ತ್ವದ ಮಹಿಮೆಯನ್ನು ಪರೀಕ್ಷಿಸಲು ಯಾರೂ ಸಮರ್ಥರಲ್ಲವು, ಇದರಂತೆಯೇ ನೀನು ಜಿನಶಾಸ್ತ್ರದಲ್ಲಿ ದೃಢವಾದ ವಿಶ್ವಾಸವನ್ನಿಟ್ಟು ಜಿನ ಪೂಜೆಯಲ್ಲಿಯೇ ಮಗ್ನಳಾಗಿರು" ಎಂದು ಆಕೆಯನ್ನು ನಾನಾವಿಧವಾಗಿ ಸ್ತುತಿಸಿ, ತನ್ನ ವೃತ್ತಾಂತವನ್ನು ಹೇಳಿ ಸ್ವಸ್ಥಾನಕ್ಕೆ ತೆರಳಿದನು.

ಅನಂತರ ಕೆಲವು ದಿವಸಗಳ ಮೇಲೆ ವರುಣಮಹಾರಾಜನು ಕಾರಣಾಂತರದಿಂದ ಸಂಸಾರದ ಅಸಾರತೆಯನ್ನು ತಿಳಿದು ತನ್ನ ಮಗನಿಗೆ ರಾಜ್ಯವನ್ನು ಕೊಟ್ಟು ಜಿನದೀಕ್ಷೆಯನ್ನು ಸ್ವೀಕರಿಸಿ ಘೋರವಾದ ತಪ ಸ್ಸನ್ನು ಮಾಡಿ, ಅಂತ್ಯದಲ್ಲಿ ಸಮಾಧಿಮರಣವನ್ನೈದಿ ಮಾಹೇಂದ್ರಸ್ವರ್ಗ ದಲ್ಲಿ ದೇವನಾಗಿ ಹುಟ್ಟಿದನು.

ಇತ್ತ ರೇವತೀರಾಣಿಯೂ ವೈರಾಗ್ಯಚಿತ್ತಳಾಗಿ ಓರ್ವ ಅರ್ಜಿಕೆಯ ಹತ್ತಿರ ದೀಕ್ಷೆಯನ್ನು ಸ್ವೀಕರಿಸಿ, ಘೋರವಾದ ತಪಸ್ಸನ್ನು ಮಾಡಿ ಸಮಾಧಿ ಮರಣದಿಂದ ೫ ನೆಯ ಬ್ರಹ್ಮಸ್ವರ್ಗದಲ್ಲಿ ದೇವನಾಗಿ ಜನಿಸಿದಳು.

ಈ ಕಥೆಯು ಸಾರಾಂಶವೇನಂದರೆ ಚಂದ್ರಪ್ರಭರಾಜನ ಮಾಡಿದ ಕಪಟನಾಟಕಕ್ಕೆ ಏಕಾದಶಾಂಗಧಾರಿಗಳಾದ ಭವ್ಯಸೇನಮುನಿಗಳು ಸಹ ತಮ್ಮ ಸಮ್ಯಕ್ತ್ವದಿಂದ ಚ್ಯುತರಾದರೂ ರೇವತಿರಾಣಿಯು ಬಿಂದು ಮಾತ್ರವೂ ಚಲಾಯಮಾನಳಾಗಲಿಲ್ಲವು. ಆದುದರಿಂದ ಏನಾದರೊಂದು ಕ್ಷುಲ್ಲಕ ಚಮತ್ಕಾರಗಳಿಗೆ ಮರುಳಾಗದೆ ನಮ್ಮ ಪೂರ್ವಸುಕೃತದಿಂದ ಪ್ರಾಪ್ತವಾದ ಜೈನಧರ್ಮದಲ್ಲಿ ದೃಢವಾದ ಶ್ರದ್ಧೆಯನ್ನಿಟ್ಟು ವರ್ತಿಸ ಬೇಕೆಂದಭಿಪ್ರಾಯವು.

## [೫] ಉಪಗೂಹನ ಅಂಗದ ವರ್ಣನೆ.

**ಸ್ವಯಂ ಶುದ್ಧಸ್ಯ ಮಾರ್ಗಸ್ಯ । ಬಾಲಾಶಕ್ತಜನಾಶ್ರಯಾಂ ॥**
**ವಾಚ್ಯತಾಂ ಯತ್ಪ್ರಮಾರ್ಜಂತಿ । ತದ್ವದಂತ್ಯುಪಗೂಹನಂ ॥೧೫॥**

**ಅನ್ವಯಾರ್ಥಃ**—ಸ್ವಯಂ—ತಾನಾಗಿ ಶುದ್ಧಸ್ಯ—ಪರಿಶುದ್ಧವಾದ ಮಾರ್ಗಸ್ಯ- ಜಿನಧರ್ಮಕ್ಕೆ ಬಾಲಾಶಕ್ತಜನಾಶ್ರಯಾಂ-ಅಜ್ಞಾನಿಗಳು ಮತ್ತು ಅಸಮರ್ಥರಾದವರಿಂದುಂಟಾದ ವಾಚ್ಯತಾಂ—ನಿಂದೆಯನ್ನು ಯತ್—ಯಾವದು ಪ್ರಮಾರ್ಜಂತಿ-ಹೋಗಲಾಡಿಸುತ್ತದೋ ತತ್—ಅದನ್ನು ಉಪಗೂಹನಂ- ಉಪಗೂಹನ ಅಂಗವೆಂದು, ವದಂತಿ—ಹೇಳುತ್ತಾರೆ.

**ತಾತ್ಪರ್ಯಃ**— ತೀರ್ಥಂಕರಪರಮದೇವರಿಂದ ಪ್ರತಿಪಾದಿತವೂ ರತ್ನತ್ರಯಸ್ವರೂಪವೂ ಹತ್ತುಭೇದಗಳುಳ್ಳದೂ ಅನಾದಿನಿಧನವೂ ಆದ ಧರ್ಮವು ಸಮಸ್ತಜೀವರುಗಳಿಗೆ ಹಿತಕರವೂ ನಿರ್ದೋಷವೂ ಬಾಧಾ ರಹಿತವೂ ಆದುದಾಗಿದೆ. ಇಂತಹ ಪವಿತ್ರವಾದ ಧರ್ಮಕ್ಕೆ ಅಜ್ಞಾನಿ ಗಳಾದ ಮಿಥ್ಯಾದೃಷ್ಟಿಗಳಿಂದುಂಟಾದ ನಿಂದೆ ಯಾ ದೂಷಣೆಗಳನ್ನೂ ಅಥವಾ ಅಸಮರ್ಥರಾದ ಜನಗಳಿಂದುಂಟಾದ ನಿಂದೆಯನ್ನೂ ದೂರ ಮಾಡಿ ತಾಯಿಯು ತನ್ನಮಗನು ನಿಂದ್ಯಕರವಾದ ಮಾರ್ಗದಲ್ಲಿ ಪ್ರವರ್ತಿ ಸುವವನಾದರೂ ಆತನನ್ನು ಪ್ರೀತಿಸುವಂತೆ ಧಾರ್ಮಿಕರೂ ತನ್ನ ಸಹ ಧರ್ಮಿಗಳಲ್ಲಿರುವ ದೋಷಗಳನ್ನು ಗುಪ್ತರೀತಿಯಿಂದ ಹೋಗಲಾಡಿಸಿ ಅವರಲ್ಲಿ ಪ್ರೀತಿಯನ್ನಿಡುವುದಕ್ಕೆ ಉಪಗೂಹನ ಅಂಗವೆಂದು ಹೆಸರು.

ಸಮ್ಯಗ್ದೃಷ್ಟಿಗಳು ಇತರರ ದೋಷಗಳನ್ನೂ ಅಪವಾದವನ್ನೂ ಮತ್ತೂ ತನ್ನ ಪ್ರಶಂಸೆಯನ್ನೂ ಮಾಡಿಕೊಳ್ಳಬಾರದು. ಯದ್ಯಪಿ ಪರದೋಷ ಗಳನ್ನು ನೋಡಿ, "ಈ ಸಂಸಾರಿಜೀವನು ಅನಾದಿಕಾಲೀನ ಮೋಹನೀಯ ಕರ್ಮಕ್ಕೆ ವಶೀಭೂತನಾಗಿ ರಾಗದ್ವೇಷಾದಿಗಳಿಂದ ಪರನಿಂದೆಯನ್ನು ಮಾಡುವನು. ಅದು ಯೋಗ್ಯವಲ್ಲವು" ಎಂಬೀತ್ಯಾದಿ ವಿಚಾರವನ್ನು ಮಾಡಿ ಇತರರ ದೋಷಗಳನ್ನು ಹೋಗಲಾಡಿಸಿ ಬುದ್ಧಿವಾದವನ್ನು ಹೇಳು ವಿಕೆಯೇ ಉಪಗೂಹನ ಅಂಗವೆಂದು ಭಾವವು. ಈ ಅಂಗದಲ್ಲಿ ಜಿನೇಂದ್ರ ಭಕ್ತಶ್ರೇಷ್ಠಿಯು ಪ್ರಸಿದ್ಧಿಯನ್ನು ಹೊಂದಿರುವನು.

## ಜಿನೇಂದ್ರಭಕ್ತಶ್ರೇಷ್ಠಿಯ ಕಥೆ.

ಪೂರ್ವಕಾಲದಲ್ಲಿ ಸೌರಾಷ್ಟ್ರದೇಶದಲ್ಲಿ ಪಾಟಲಿಪುತ್ರವೆಂಬ ಪಟ್ಟಣ ವಿತ್ತು. ಅಲ್ಲಿ ಶ್ರೀಮನ್ನೇಮಿಜಿನೇಶ್ವರರ ಅವತಾರವಾದ್ದರಿಂದ ಅದು ಪುಣ್ಯ ಭೂಮಿಯಾಗಿ ಪರಿಗಣಿಸ್ಪಡುತ್ತಿತ್ತು. ಅಲ್ಲಿಯ ಜನರು ಜೈನಧರ್ಮವನ್ನು ಪರಿಪಾಲಿಸುತ್ತಿದ್ಧರು. ಆ ದೇಶವನ್ನು ಯಶಧ್ವಜನೆಂಬ ರಾಜನು ತನ್ನ ಸುಸೀಮಾ ಎಂಬ ಪತ್ನಿಯೊಡನೆ ಆಳುತ್ತಿದ್ದನು. ಈ ದಂಪತಿಗಳು ಯಾವಾ ಗಲೂ ಪರಮಧಾರ್ಮಿಕರಾಗಿ ಜಿನಸೇವೆಯಲ್ಲಿ ಮಗ್ನರಾಗುತ್ತಿದ್ದರು. ಇವ ರಿಗೆ ಸುವೀರನೆಂಬೊಬ್ಬ ಮಗನಿದ್ದನು. ಆತನು ಸಪ್ತವ್ಯಸನಗಳಲ್ಲಿ ನಿಪುಣ ನಾಗಿ ದುಷ್ಟಜನರ ಸಹವಾಸದಲ್ಲಿಯೇ ಇರುತ್ತಿದ್ದನು. ಆ ಕಾರಣ ಅವನ ಆಚರಣೆಯು ಬಹಳ ನಿಂದ್ಯಕರವಾಗಿದ್ದಿತು.

ಬರಬರುತ್ತಾ ರಾಜಪುತ್ರನು ಬಹಳ ಕುಮಾರ್ಗಗಾಮಿಯಾಗಿ ಚೋರಾಗ್ರೇಸರನಾದನು. ಒಂದು ದಿವಸ ಆತನ ಮಿತ್ರರೊಡನೆ ಮಾತ ನಾಡುತ್ತಾ ಕುಳಿತಿರುವಾಗ ಅವರಲ್ಲೊಬ್ಬನು ಅಂದದ್ದೇನಂದರೆ, ನಮ್ಮೂರಿ ನಿಂದ ಇಂತಿಷ್ಟು ಗಾವುದ ದೂರವಿರುವ ಗೌಡದೇಶದಲ್ಲಿ ತಾಮ್ರಲಿಪ್ತವೆಂಬ ಪಟ್ಟಣವಿರುವುದು ಅಲ್ಲಿ ಬಹುಧನಾಢ್ಯನಾದ ಜಿನೇಂದ್ರಭಕ್ತನೆಂಬ ಶ್ರೇಷ್ಠಿ ಇರುವನು. ಆತನು ಪರಮಧಾರ್ಮಿಕನಾಗಿ ಶ್ರಾವಕರ ಷಟ್ಕರ್ಮಗಳನ್ನು ಪ್ರತಿನಿತ್ಯವೂ ಪಾಲಿಸುತ್ತಿರುವನು. ಮತ್ತು ತಾನು ನ್ಯಾಯಾರ್ಜಿತವಾದ

ಸಂಪತ್ತನ್ನು ಜಿನಶಾಸ್ತ್ರದಲ್ಲಿ ಹೇಳಿರುವ † ಕ್ಷೇತ್ರ ಸಪ್ತಕದಲ್ಲಿ ವ್ಯಯಮಾಡು ತ್ತಿರುವನು. ಜಿನಚೈತ್ಯಾಲಯವನ್ನು ಜೀರ್ಣೋದ್ಧಾರ ಮಾಡುವಿಕೆಯು ಜಿನಪ್ರತಿಮೆಯನ್ನು ಮಾಡಿಸುವಿಕೆಯು, ಶಾಸ್ತ್ರಗ್ರಂಥಗಳನ್ನು ಬರೆಯಿಸು ವಿಕೆಯು, ಋಷಿ, ಅರ್ಜಿಕಾ, ಶ್ರಾವಕ, ಶ್ರಾವಿಕಾ ಎಂಬೀ ಚತುರ್ವಿಧ ಸಂಘಕ್ಕೆ ಆಹಾರ ಮೊದಲಾದ ದಾನಗಳನ್ನು ಮಾಡುವಿಕೆಯು ಇವುಗಳಿಗೆ ಕ್ಷೇತ್ರಸಪ್ತಕವೆಂದು ಹೆಸರು. ಇಂತಹ ಕ್ಷೇತ್ರಸಪ್ತಕದಲ್ಲಿ ತನ್ನ ಸಂಪತ್ತನ್ನು ಗಳಿಸುತ್ತಿರುವ ಶ್ರೇಷ್ಠಿಯು ಏಳು ಅಂತಸ್ತಿನ ಉಪ್ಪರಿಗೆಯೊಂದನ್ನು ನಿರ್ಮಿಸಿ ಅದರ ಕೊನೆಯ ಅಂತಸ್ತಿನಲ್ಲೊಂದು ಜಿನಮಂದಿರವನ್ನು ಮಾಡಿಸಿರುವನು. ಅಲ್ಲಿ ಛತ್ರತ್ರಯಗಳಿಂದ ಕೂಡಿರುವುದೂ ವೈಡೂರ್ಯಮಯವೂ ಸುಂದ ರವೂ ಆದ ಶ್ರೀಪಾರ್ಶ್ವತೀರ್ಥಂಕರರ ಮೂರ್ತಿಯೂ ವಿರಾಜಮಾನವಾಗಿರು ವುದು. ಅದೊಂದು ನಮ್ಮ ಕೈವಶವಾದರೆ ನಮ್ಮ ಜನ್ಮಾವಧಿ ಸುಖದಿಂದ ಕಾಲವನ್ನು ಕಳೆಯಬಹುದೆಂದನು.

ಈ ವೃತ್ತಾಂತವನ್ನೆಲ್ಲಾ ಕೇಳುತಿದ್ದ ಚೋರಾಗ್ರೇಸರನಾದ ರಾಜ ಪುತ್ರನು ಹೇಗಾದರೂ ಈ ಅಮೂಲ್ಯವಾದ ವಜ್ರವನ್ನು ತರಿಸಲೇ ಬೇಕೆಂ ದಾಲೋಚಿಸಿ, ಚೋರಕರ್ಮನಿಪುಣರಾದ ಕೆಲವರನ್ನು ಬರಮಾಡಿ ನಿಮ್ಮಲ್ಲಿ ಯಾರಾದರೂ ಈ ವೈಡೂರ್ಯರತ್ನವನ್ನು ತರಲು ಸಮರ್ಥರಾಗಿರುವಿರೋ ? ಎಂದು ಕೇಳಿದನು. ಆಗ ಅವರಲ್ಲೆಲ್ಲಾ ಚತುರನಾದ ಸೂರ್ಯನೆಂಬ ಚೋರನ ಎದ್ದುನಿಂತು, "ಸ್ವಾಮೀ ! ಇದೇನು ? ಕ್ಷಣಾರ್ಧದಲ್ಲಿ ದೇವೇಂದ್ರನ ಕಿರೀಟವನ್ನೇ ತರುವ ಸಾಮರ್ಥ್ಯವುಳ್ಳ ನನಗೆ ಇದು ಯಾವ ದೊಡ್ಡ ಮಾತು ? ಅಪ್ಪಣೆಯಾದರೆ ಕೆಲವು ದಿವಸಗಳಲ್ಲಿಯೇ ಆ ರತ್ನ ವನ್ನು ತಂದು ತಮ್ಮ ಚರಣಕ್ಕರ್ಪಿಸುವೆನು." ಎಂದು ಹೇಳಿದನು. ಇದನ್ನು ಕೇಳಿ ರಾಜಪುತ್ರನು ಆನಂದಭರಿತನಾಗಿ, ಆತನನ್ನು ಪ್ರಶಂಸಿಸಿ, "ನೀನೇ ಈ ಕಾರ್ಯವನ್ನು ಮಾಡಿಕೊಂಡು ಬಾ" ಎಂದಾಜ್ಞಾಪಿಸಿದನು. ಇಂತಹ

---

† ಜಿನೇಂದ್ರಭವನೊದ್ಧಾರಃ । ಪ್ರತಿಮಾ ಪುಸ್ತಕಂ ತಥಾ ॥
ಸಂಘಶ್ಚತುರ್ವಿಧಶ್ಚೇತಿ । ಸಂಪ್ರೋಕ್ತಂಕ್ಷೇತ್ರಸಪ್ತಕಂ ॥೧॥

ಮಹತ್ವವಾದ ಕಾರ್ಯವು ತನ್ನ ಪಾಲಿಗೆ ಬಂತೆಂದು ಮನದೊಳಗೆ ಹಿಗ್ಗಿ ಈ ಕಾರ್ಯವನ್ನು ಕೊನೆಗಾಣಿಸುವ ಉದ್ದೇಶದಿಂದ ಹೊರಟು, ದಾರಿಯಲ್ಲಿ ಹೋಗುವಾಗ ಆತನ ಮನೋರಂಗದಲ್ಲಿ ಹಲವು ವಿಧವಾದ ವಿಚಾರತರಂಗ ಗಳು ಉಂಟಾದುವು. ಹೀಗಿರುವಾಗ ಅವನಿಗೆ ಕೊನೆಗೊಂದು ಯುಕ್ತಿಯು ತೋರಿತು. ಅವನ ಮುಖಮುದ್ರೆಯು ಸತೇಜವಾಯಿತು. ಆನಂದೋದ್ರೇ ಕವನ್ನು ಮನಸ್ಸಿನಲ್ಲಿ ತಾಳಲಾರದೆ, "ಹೌದು ! ಹೌದು ! ಈದೇ ವೇಷದಿಂದ ಹೋದರೆ ಮಾತ್ರ ನನ್ನ ಕಾರ್ಯವು ಕೈಗೂಡುವದು. ಅಲ್ಲದೆ ಇತರ ಪ್ರಯ ತ್ನಗಳಿಂದಾಗಲಾರದು. ಆದ್ದರಿಂದ ಎಲ್ಲರಿಗೂ ನಂಬಿಕೆಯನ್ನುಂಟುಮಾಡುವ ಬ್ರಹ್ಮಚರ್ಯವೇಷವನ್ನೇ ಧರಿಸಬೇಕು." ಎಂದು ಹೇಳಿ, ಕೂಡಲೇ ತನ್ನ ಮಾಯಾಸಾಮರ್ಥ್ಯದಿಂದ ಘೋರವಾದ ತಪಸ್ಸಿನಿಂದ ಕೃಶವಾದ ದೇಹವುಳ್ಳ ಬ್ರಹ್ಮಚಾರಿಯ ವೇಷವನ್ನು ಧರಿಸಿ ಮಾರ್ಗಾಕ್ರಮಣೆಯನ್ನು ಮಾಡುತ್ತಾ ಕೆಲವು ದಿವಸಗಳಲ್ಲಿಯೇ ತನ್ನ ಇಚ್ಛಿತ ಸ್ಥಾನವಾದ ತಾಮ್ರಲಿಪ್ತನಗರಕ್ಕೆ ಬಂದು ಸೇರಿದನು. ಮುಂದೆ ಕೆಲವು ದಿವಸಗಳಲ್ಲಿಯೇ ತನ್ನ ಚಾತುರ್ಯ ದಿಂದ ನಾಗರಿಕರಿಗೆ ತನ್ನಲ್ಲಿ ಪೂಜ್ಯಬುದ್ಧಿಯುಂಟಾಗುವಂತೆ ಮಾಡಿಕೊಂ- ಡನು. ಪ್ರತಿಯೊಬ್ಬರೂ "ಈ ಬ್ರಹ್ಮಚಾರಿಗಳ ವಿದ್ವತ್ತೆಯೇನು ? ಇವರ ಶುಭಾಚರಣವೇನು ? ಎಂಬೀತ್ಯಾದಿ ಪ್ರಶಂಸಿಸಲಾರಂಭಿಸಿದರು. ಮತ್ತು ಇವರ ದರ್ಶನಕ್ಕೋಸ್ಕರ ಮೇಲಿಂದ ಮೇಲೆ ಬರಲಾರಂಭಿಸಿದರು ಈ ವಾರ್ತೆಯು ಜಿನೇಂದ್ರಭಕ್ತಶ್ರೇಷ್ಠಿಗೂ ತಿಳಿಯಿತು. ಆತನೂ ತನ್ನ ಪರಿ ವಾರ ಸಹಿತನಾಗಿ ಬ್ರಹ್ಮಚಾರಿಗಳ ದರ್ಶನಕ್ಕೆ ಹೊರಟನು. ಮಹಾತಪಸ್ವಿ ಗಳೂ ಕೃಶಾಂಗರೂ ಆದ ಬ್ರಹ್ಮಚಾರಿಗಳನ್ನು ನೋಡಿ ಸಂತೋಷಭರಿತ ನಾಗಿ ನಮಸ್ಕರಿಸಿ ಮನಸಿನಲ್ಲಿ ಪೂರ್ವಸಂಚಿತವಾದ ಪುಣ್ಯದಿಂದಲೇ ಇಂತಹ ಮಹಾತ್ಮರ ದರ್ಶನವಾಯಿತು. ಎಂದು ಸ್ತುತಿಸಿ, ಆ ಕಪಟಬ್ರಹ್ಮ ಚಾರಿಯನ್ನು ಕುರಿತು, ಸ್ವಾಮಿ ! ತಾವು ನಮ್ಮಲ್ಲಿರುವ ಜಿನಮಂದಿರವನ್ನು ನೋಡುವುದಕ್ಕಾಗಿ ದಯಮಾಡಿಸಬೇಕು. ಎಂದು ಹೇಳಿಕೊಂಡನು. ಅದೇ ಸಮಯವನ್ನು ನೋಡುತ್ತಿದ್ದ ಬ್ರಹ್ಮಚಾರಿಯು ಶ್ರೇಷ್ಠಿಯ ವಿನಂತಿಗೆ ಅವನೊಡನೆ ಹೋದನು. ಆಗ ಶ್ರೇಷ್ಠಿಯು ಯೋಗ್ಯವಾದ ಸತ್ಕಾರವನ್ನು

ಮಾಡಿ, ಜಿನಮಂದಿರದ ದರ್ಶನವನ್ನು ಮಾಡಿಸಿದನು. ಆಗ ಬ್ರಹ್ಮಚಾರಿಯು ಆ ಅಪೂರ್ವವಾದ ಮಂದಿರವನ್ನೂ ಅದರಲ್ಲಿರುವ ಪ್ರತಿಯೊಂದು ವಸ್ತುಗಳನ್ನೂ ಲಕ್ಷ್ಯಪೂರ್ವಕವಾಗಿ ನೋಡುತ್ತಿದ್ದನು. ಆಗ ಅವನ ಇಚ್ಛಿತವಾದ ವೈಡೂರ್ಯರತ್ನವನ್ನು ಕಂಡು, ದರಿದ್ರನಿಗೆ ಬಂಗಾರದ ನಿಧಿಯೇ ಪ್ರಾಪ್ತವಾದಂತೆ, ಅತ್ಯಾನಂದಪರವಶನಾದನು. ಪರಂತು, ಅಷ್ಟರಲ್ಲಿ ಅತನ ಮನದಲ್ಲಿ ಮತ್ತೊಂದು ವಿಚಾರವು ಉಂಟಾದ ಕಾರಣ ಅವನಿಗಾದ ಆನಂದವು ಇಲ್ಲದಂತಾಗಿ ಚಿಂತೆಯುಂಟಾಯಿತು.

ವಾಚಕರೇ ! ಕ್ಷಣಾರ್ಧದಲ್ಲಿ ಬ್ರಹ್ಮಚಾರಿಯ ಪರಿಣಾಮವು ಹೀಗಾಗಲು ಕಾರಣವೇನಿರಬಹುದು ? ಎಂಬೀ ಪ್ರಶ್ನೆಯ ಉತ್ತರವು ನಿಮಗೆ ಗೊತ್ತಾಗದಿರದು. ಆದರೆ, ಆ ರತ್ನವನ್ನು ಹೇಗೆ ಅಪಹರಿಸುವದೆಂಬುದೇ ಆತನ ಚಿಂತೆಯ ಕಾರಣವು. ಅತ್ಯುನ್ನತವಾಗಿ ಕಟ್ಟಿಸಿರುವ ಆ ಮಂದಿರದ ವ್ಯವಸ್ಥೆಯನ್ನೂ ಅಲ್ಲಿರುವ ಜಿನಚೈತ್ಯಾಲಯವನ್ನೂ ಆ ರತ್ನದ ನಿಮಿತ್ತವಾಗಿ ಮಾಡಿರುವ ಭದ್ರತೆಯನ್ನೂ ಹಗಲಿರುಳು ಬಲುಜಾಗ್ರತೆಯಿಂದ ಕಾಯುವ ಕಾವಲುಗಾರರನ್ನೂ ನೋಡಿ, ಮನದಲ್ಲಿ ನಾನಂತೂ ಪಂಥ ಕಟ್ಟಿಕೊಂಡು ಇಲ್ಲಿಗೆ ಬಂದಿರುವೆನು, ಇಲ್ಲಿಯ ಸ್ಥಿತಿಯಂತೂ ನಿರಾಶ ಜನಕವಾಗಿರುವುದು. ಆದ್ದರಿಂದ ನನ್ನ ಶಪಥವು ಈಡೇರುವ ಬಗೆ ಹೇಗೆ ? ಎಂದು ಯೋಚಿಸುತ್ತಿರುವಷ್ಟರಲ್ಲಿ ಅಕಸ್ಮಾತಾಗಿ ಬ್ರಹ್ಮಚಾರಿಯ ಮನಸ್ಸಿನಲ್ಲಿ ಒಂದು ವಿಚಾರವುಂಟಾಗಿ ಸಂತೋಷವು ಹೆಚ್ಚಾಯಿತು. ಅದೇನೆಂದು ಮುಂದಿನ ಕಥೆಯಿಂದ ವಾಚಕರಿಗೆ ತಿಳಿಯದಿರದು.

ಬ್ರಹ್ಮಚಾರಿಯ ಬಾಹ್ಯವರ್ತನಕ್ಕೆ ಬೆರಗಾದ ಜಿನೇಂದ್ರಭಕ್ತ ಶ್ರೇಷ್ಠಿಯು ತನ್ನ ಮನದಲ್ಲಿ ಯೋಚಿಸಿದ್ದೇನಂದರೆ "ಬ್ರಹ್ಮಚಾರಿಗಳಂತೂ ನಿಸ್ಪೃಹರೂ ನಿರ್ಮಲಚಿತ್ತರೂ ಆಗಿ ಕಾಣುತ್ತಾರೆ. ಇಂಥವರನ್ನು ನಮ್ಮ ಜಿನಮಂದಿರದಲ್ಲಿ ಇರಗೊಡಿಸಿದರೆ ಅನಾಯಾಸವಾಗಿ ವೈಡೂರ್ಯರತ್ನದ ಸಂರಕ್ಷಣೆಯಾಗುವುದು. ಈಗ ಕಾವಲುಗಾರರೂ ಕಡಿಮೆಯಾಗಿರುವರು. ಆದರೆ ಅವರ ಮನಸ್ಸಿನಲ್ಲಿಯಾದರೂ ಈ ರತ್ನವನ್ನು ಅಪಹರಿಸಬೇಕೆಂಬ ತುಚ್ಛಬುದ್ಧಿಯು ಉಂಟಾದೀತು. ಇವರು ಸತ್ಪುರುಷರು. ಇವರಲ್ಲಿ ಅಂತಹ

ವಿಚಾರವು ಎಂದೂ ಉಂಟಾಗಲಾರದು. ಆ ಕಾರಣ ಇವರನ್ನು ನಮ್ಮ ಜಿನಮಂದಿರದಲ್ಲಿ ಇರುವಂತೆ ಆಗ್ರಹ ಮಾಡಿದರೆ ಈ ಕಾರ್ಯಗಳೆಲ್ಲಾ ಕೈಗೂಡುವುದು'' ಎಂದಾಲೋಚಿಸಿ ಅವರನ್ನು ಕುರಿತು—ಸ್ವಾಮಿ! ತಾವು ಯಾವ ಪ್ರಕಾರದ ಸಂದೇಹವನ್ನು ಮಾಡದೇ ನಮ್ಮಲ್ಲಿರಬೇಕು. ಇಲ್ಲಿ ತಮಗೆ ಯಾವ ತೊಂದರೆಯೂ ಉಂಟಾಗಲಾರದೆಂದು ಬಿನ್ನವಿಸಿದನು. ತನಗೆ ಅನುಕೂಲವಾದ ಸಂಗತಿಯು ತಾನಾಗಿ ಒದಗಿ ಬಂದುದನ್ನು ಕಂಡು ತನ ಗುಂಟಾದ ಆನಂದಾತಿಶಯವನ್ನು ವ್ಯಕ್ತಪಡಿಸದೆ, ಕಪಟತನದಿಂದ 'ಛೇ! ಛೇ! ಈ ವಿಷಯವಾಗಿ ತಾವು ನನ್ನನ್ನು ಆಗ್ರಹಿಸಬಾರದು. ನಮ್ಮಂಥವರು ಗೃಹಸ್ಥಾಶ್ರಮಿಗಳಲ್ಲಿ ಇರುವದುಚಿತವಲ್ಲವು. ಆದ್ದರಿಂದ ತಮ್ಮ ವಿನಂತಿ ಯನ್ನು ನಾನು ಮನ್ನಿಸಲಾರೆನು'' ಎಂದು ಖಂಡಿತವಾಗಿ ಹೇಳಿದನು. ಆಗ ಶ್ರೇಷ್ಠಿಯು ಈ ಮಾಯಾವಿಯ ಭಾಷಣದ ಮರ್ಮವನ್ನರಿಯದೆ ನಿಜವೆಂದು ನಂಬಿ ಮತ್ತಷ್ಟು ಅಗ್ರಹವನ್ನು ದೂಡಿದನು. ಶ್ರೇಷ್ಠಿಯ ಆಗ್ರಹವು ಹೆಚ್ಚಾದಂತೆ ಈತನ ವಿರಕ್ತಿಯೂ ಅಧಿಕವಾಗಿ, ಕೊನೆಗೆ ತಮ್ಮ ಆಗ್ರಹಕ್ಕೆ ನಾನು ಇರಬೇಕಾಗುತ್ತದಲ್ಲದೆ, ವಸ್ತುತಃ ನಾನಿರುವುದುಚಿತವ ಲ್ಲವೆಂದು ವ್ಯಕ್ತಪಡಿಸಿ, ಕಡೆಗೆ ಇರುವುದಕ್ಕೆ ಒಪ್ಪಿಕೊಂಡನು. ಆ ಮೇಲೆ ಶ್ರೇಷ್ಠಿಯು ಸಂತುಷ್ಟನಾಗಿ, ಇನ್ನು ಆ ರತ್ನದ ವಿಷಯವಾಗಿ ನನಗೇತರ ಚಿಂತೆ? ಯಾವ ಯೋಚನೆಯನ್ನೂ ಮಾಡಬೇಕಾದುದಿಲ್ಲವು. ಎಂದು ಮನದಲ್ಲಿ ಭಾವಿಸಿದನು.

ಮುಂದೆ ಕೆಲವು ದಿವಸಗಳಲ್ಲಿಯೇ ವ್ಯಾಪಾರನಿಮಿತ್ತವಾಗಿ ಜಲ ಮಾರ್ಗದಿಂದ ದ್ವೀಪಾಂತರಕ್ಕೆ ಹೋಗುವ ಪ್ರಸಂಗ ಬಂದದ್ದರಿಂದ ಬ್ರಹ್ಮ ಚಾರಿಗಳ ಅಪ್ಪಣೆಯನ್ನು ಪಡೆದು ಶ್ರೇಷ್ಠಿಯು ಶುಭಮೂಹೂರ್ತದಲ್ಲಿ ಪ್ರಯಾಣವನ್ನು ಬೆಳಿಸಿ, ಪುರದ ಬಹಿರ್ಭಾಗದಲ್ಲಿರುವ ತನ್ನ ವಸತಿಗೃಹ ದಲ್ಲಿ ಇಳಕೊಂಡನು. ಈ ಸುಸಂದರ್ಭವನ್ನೇ ನಿರೀಕ್ಷಿಸುತ್ತಿದ್ದ ಆ ಬ್ರಹ್ಮ ಚಾರಿಯು ಮನದಲ್ಲ "ಎಲ್ಲಾ ವಿಧದಿಂದಲೂ ಕಾಲವು ಅನುಕೂಲವಾ ಯಿತು. ಇನ್ನು ಮೇಲೆ ವಿಲಂಬ ಮಾಡಿ ಪ್ರಯೋಜನವಿಲ್ಲ. ಇಂದಿನ ರಾತ್ರೆ ಯೇ ಇಲ್ಲಿಂದ ವೈಡೂರ್ಯರತ್ನವನ್ನು ತೆಗೆದುಕೊಂಡು ಪಲಾಯನವನ್ನು

ಮಾಡತಕ್ಕದ್ದು'' ಎಂದಾಲೋಚಿಸಿ, ಅಂದೇ ಮಧ್ಯರಾತ್ರಿಯ ಸಮಯಕ್ಕೆ ಎದ್ದು, ಸುತ್ತುಮುತ್ತು ನೋಡುವಲ್ಲಿ ಸೇವಕರೆಲ್ಲರೂ ನಿದ್ರಾಪರವಶರಾಗಿದ್ದರು. ಎತ್ತನೋಡಿದರತ್ತ ಶಾಂತಿಸಾಮ್ರಾಜ್ಯವು ನೆಲೆಗೊಂಡಿತ್ತು. ಆಗ ಆತನು ಮೆಲ್ಲಗೆ ಜಿನಮಂದಿರಕ್ಕೆ ಹೋಗಿ, ಆ ವೈಡೂರ್ಯರತ್ನವನ್ನು ತೆಗೆದು ಕೊಂಡು, ''ನನ್ನ ಕೆಲಸವಾಯಿತು. ಇನ್ನು ಇಲ್ಲಿರಲಾಗದು.'' ಎಂದು ಯೋಚಿಸಿ, ಮೆಲ್ಲನೆ ಕೆಳಕ್ಕಿಳಿದು ಮನೆಯ ಹೊರಭಾಗಕ್ಕೆ ಬಂದು ನೋಡು ವಷ್ಟರಲ್ಲಿ ತನ್ನ ಸುತ್ತಮುತ್ತಲು ರತ್ನದ ಪ್ರಕಾಶ ಹಬ್ಬಿದ್ದನ್ನು ಕಂಡು, ಇನ್ನು ಮೇಲೆ ನಾನು ಮಂದಗತಿಯಿಂದ ಹೋದರೆ ಯಾರಾದರೂ ನೋಡ ಬಹುದೆಂದು ಓಡಲಾರಂಭಿಸಿದನು. ಆದರೆ ಜಿನೇಂದ್ರಭಕ್ತ ಶ್ರೇಷ್ಠಿಯ ಪುಣ್ಯಪ್ರಭಾವದಿಂದಲೂ ಬ್ರಹ್ಮಚಾರಿಯ ದುರ್ದೈವದಿಂದಲೂ ಆತನು ನಗರರಕ್ಷಕನಾದ ಕೋತವಾಲನ ಕಣ್ಣಿಗೆ ಬಿದ್ದನು. ಇಂತಹ ರಾತ್ರಿಯಲ್ಲಿ ಪ್ರಕಾಶಸಹಿತವಾಗಿ ಓಡುವವನು ಯಾರಿರಬಹುದು ? ನಗರವಾಸಿಗಳಾಗಿ ದ್ದರೆ ಮೆಲ್ಲಗೆ ಹೋಗುತ್ತಿದ್ದರು. ಈತನ ಕಳ್ಳನೇ ಆಗಿರಬಹುದು. ಎಂದು ಯೋಚಿಸಿ, ಅವನನ್ನು ಹಿಡಿಯುವುದಕ್ಕೋಸ್ಕರ ಹಿಂಬಾಲಿಸಿದನು. ತನ್ನನ್ನು ಹಿಡಿಯಲು ನಗರರಕ್ಷಕರು ಬರುತ್ತಾರೆಂದು ತಿಳಿದಕೂಡಲೇ ಇನ್ನಷ್ಟು ಓಡಲಾರಂಭಿಸಿದನು. ಆದರೆ ಮುಂದೆ ಸ್ವಲ್ಪ ಸಮಯದಲ್ಲಿಯೇ ದಣಿದು ಓಡಲಾರದೆ ಮುಂದುಗಡೆಯಲ್ಲಿ ಶ್ರೇಷ್ಠಿಯ ಪರಿವಾರವು ಉಳಕೊಂಡದ್ದನ್ನು ಕಂಡು, ಅವನೇ ಅಲ್ಲಿಗೆ ಓಡುತ್ತ ಓಡುತ್ತ ಹೋಗಿ ಜಿನೇಂದ್ರಭಕ್ತಶ್ರೇಷ್ಠಿ ಯನ್ನು ಕುರಿತು, ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ''ಸ್ವಾಮಿ ! ನನ್ನನ್ನು ರಕ್ಷಿಸಿರಿ !! ರಕ್ಷಿಸಿರಿ !!!'' ಎಂದು ದೈನ್ಯಸ್ವರದಿಂದ ಬೇಡಿಕೊಂ ಡನು. ಆಗ ಶ್ರೇಷ್ಠಿಯು ಏನೊಂದು ತಿಳಿಯದೆ, ನಡೆದ ಸಂಗತಿಯೇನು ? ಎಂದು ಸೇವಕರನ್ನು ಕೇಳಲು, ಆಗ ಅವರು ಓರ್ವ ಕಳ್ಳನು ತಮ್ಮ ಮಂದಿ ರದಿಂದ ರತ್ನವನ್ನು ಅಪಹರಿಸಿಕೊಂಡು ಬಂದಿರುವನೆಂದರು. ಇಷ್ಟರಲ್ಲಿ ಶ್ರೇಷ್ಠಿಯು ಎದ್ದು ಕಳ್ಳನನ್ನು ನೋಡುವಷ್ಟರಲ್ಲಿ ಈತನು ತನ್ನ ಮನೆಯ ಲ್ಲಿದ್ದ ಬ್ರಹ್ಮಚಾರಿಯೇ! ಆಗ ಶ್ರೇಷ್ಠಿಯು ಮನಸ್ಸಿನಲ್ಲಿ ಆಶ್ಚರ್ಯಗೊಂಡು ''ನಾನು ಈ ಪ್ರಸಂಗದಲ್ಲಿ ನಿಜವಾದ ಸಂಗತಿಯನ್ನು ನಗರರಕ್ಷಕರ ಮುಂದೆ

ಹೇಳಿದರೆ ಬ್ರಹ್ಮಚಾರಿಗೆ ಶಿಕ್ಷೆಯೂ ಅವಮಾನವೂ ಆಗುವದಲ್ಲದೆ, ನನ್ನ ಸಮ್ಯಕ್ತ್ವಕ್ಕೆ ಅತಿಚಾರವೂ ಉಂಟಾಗುವುದು. ಇದಕ್ಕಿಂತ ಬ್ರಹ್ಮಚಾರಿಯನ್ನು ಉಳಿಸಿ ನನ್ನ ಸಮ್ಯಕ್ತ್ವವನ್ನು ಕಾಪಾಡಿಕೊಳ್ಳುವುದು ಲೇಸೆ''ಂದು ಯೋಚಿಸಿ, ರಾಜಸೇವಕರನ್ನು ಕುರಿತು, ಎಲ್ಲೋ! ಮೂಢತನದಿಂದ ಇವರನ್ನು ಹಿಂಬಾಲಿಸಿ ಬರುವುದಕ್ಕೆ ಕಾರಣವೇನು? ಇಂತಹ ತಪಸ್ವಿಗಳು ಎಂದಾದರೂ ರತ್ನವನ್ನು ಕದಿಯುವರೇ? ಯಾರು ತಮ್ಮ ದೇಹವನ್ನು ಚಾರಿತ್ರವೆಂಬ ರತ್ನದಿಂದಲಂಕರಿಸಿರುವರೋ ಅಂಥವರಿಗೆ ಈ ಕಲ್ಲಿನಿಂದೇನು ಪ್ರಯೋಜನ? ನನ್ನಾಜ್ಞೆಯಂತೆ ಈ ರತ್ನವನ್ನು ತರಲಿಕ್ಕೆ ಹೋಗಿದ್ದರು. ಇತರರನ್ನು ಕಳುಹಿಸಿದರೆ ನಿಮಗೆ ಸಂಶಯವುಂಟಾದೀತೆಂದು ಇವರನ್ನೇ ನಾನು ಕಳುಹಿಸಿದ್ದೆನು ಮಂದಮತಿಗಳಾದ ನೀವು ಇವರಿಗೆ ವ್ಯರ್ಥವಾಗಿ ಉಪದ್ರವವನ್ನುಂಟು ಮಾಡಿದಿರಿ'' ಎಂದು ಹೇಳಿದನು. ಆಗ ರಾಜಸೇವಕರು ಶ್ರೇಷ್ಠಿಯ ಮಾತಿಗೆ ಒಪ್ಪಿಕೊಂಡು ಬ್ರಹ್ಮಚಾರಿಯು ನಿರ್ದೋಷಿಯೆಂದು ತಿಳಿದು, ಆ ಗುಣಶಾಲಿಯಾದ ಜಿನೇಂದ್ರಭಕ್ತನಿಗೆ ನಮಸ್ಕಾರ ಮಾಡಿ ಹೊರಟುಹೋದರು. ಆಗ ಶ್ರೇಷ್ಠಿಯು ಬ್ರಹ್ಮಚಾರಿಯನ್ನು ಒಂದೆಡೆ ಕರಕೊಂಡು ಹೋಗಿ, ಆ ರತ್ನವನ್ನು ತನ್ನ ಕೈಯಲ್ಲಿ ತೆಗೆದುಕೊಂಡು, "ಎಲೈ! ನೀಚ! ನೀನು ಇಂತಹ ಪಾಪಿಯೂ ದುಷ್ಟನೂ ಆಗಿರುವಿಯೆಂದು ಮೊದಲೇ ಗೊತ್ತಿದ್ದರೆ ನಿನ್ನನ್ನು ಮನೆಗೆ ಪ್ರವೇಶಗೊಡುತ್ತಿರಲಿಲ್ಲವು. ನಿನ್ನ ಬಾಹ್ಯಾಡಂಬರಕ್ಕೆ ಮರುಳಾಗಿ ನಾನು ಮೋಸಹೋದೆನು. ಇಂದಿನವರೆಗೆ ನೀನೆಷ್ಟು ಜನರನ್ನು ವಂಚಿಸಿರಬಹುದು! ಇಹಪರಗಳಲ್ಲಿ ದುಃಖದಾಯಕವಾದ ಚೌರ್ಯಕರ್ಮದಿಂದ ಜೀವಿಸುವ ನಿನ್ನ ಜನ್ಮಕ್ಕೆ ಧಿಃಕಾರವಿರಲಿ! ಯಾವಾಗಲೂ ದುರ್ಮಾರ್ಗದಲ್ಲಿ ನಡೆಯುವ ನಿನಗೆ ಸದ್ಗತಿಯಾಗುವುದು ಹೇಗೆ? ನಿನ್ನಂತಹ ಪಾಪಿಗಳು ಸದಾ ಅನಂತಕಾಲಗಳ ವರೆಗೆ ನರಕಯಾತನೆಯನ್ನು ಅನುಭವಿಸುವುದು ನಿನಗೆ ಗೊತ್ತಿಲ್ಲವೋ? ನಿನ್ನಂತಹ ಪಾಪಿಷ್ಠರೂ ಲೋಭಿಗಳೂ ದುರಾಚಾರಿಗಳೂ ಈ ಲೋಕದಲ್ಲಿ ಬಹುದಿವಸ ಬದುಕಲಾರರು. ಈಗಲಾದರೋ ನಿನ್ನನ್ನು ಕ್ಷಮಿಸಿ ನಾನು ಬಿಟ್ಟಿರುತ್ತೇನೆ. ಇನ್ನುಮುಂದಾದರೂ ಈ ನೀಚಕರ್ಮವನ್ನು ಬಿಟ್ಟು ನ್ಯಾಯ

ಮಾರ್ಗದಿಂದ ಪ್ರಭಾವನೆಯನ್ನು ಮಾಡಿ ಜೈನಧರ್ಮದ ಮೇಲೆ ಭಕ್ತಿಯನ್ನಿಟ್ಟು ಸದಾ ಜಿನಪೂಜೆಯಲ್ಲಿ ತತ್ಪರನಾಗಿರು" ಎಂದು ಈ ರೀತಿಯಾಗಿ ಪ್ರೇಮಪೂರ್ವಕ ಉಪದೇಶವನ್ನಿತ್ತು ಆತನನ್ನು ಅಲ್ಲಿಂದ ಕಳುಹಿಸಿ ಕೊಟ್ಟನು.

ಈ ಕಥೆಯ ಸಾರಾಂಶವೇನೆಂದರೆ, ಈ ಜೈನಧರ್ಮಕ್ಕೆ ಅಜ್ಞಾನಿಗಳಿಂದುಂಟಾದ ದೋಷ ಅಥವಾ ನಿಂದೆಯನ್ನು ಗುಪ್ತರೀತಿಯಿಂದ ಹೋಗಲಾಡಿಸಿ ಅವರಿಗೆ ಸದುಪದೇಶವನ್ನು ಮಾಡಿ, ಈ ಸಮ್ಯಗ್ದೃಷ್ಟಿಯಾದ ಜಿನೇಂದ್ರಭಕ್ತಶ್ರೇಷ್ಠಿಯಂತೆ ಉಪಗೂಹನಾಂಗದಲ್ಲಿ ಪ್ರಸಿದ್ಧಿಯನ್ನು ಪಡೆಯಬೇಕೆಂಬುದೇ ಇದರಭಿಪ್ರಾಯವು.

**[೬] ಸ್ಥಿತೀಕರಣ ಅಂಗದ ವರ್ಣನೆ.**

**ದರ್ಶನಾಚ್ಚರಣಾದ್ವಾಪಿ । ಚಲತಾಂ ಧರ್ಮವತ್ಸಲೈಃ ॥**
**ಪ್ರತ್ಯವಸ್ಥಾಪನಂ ಪ್ರಾಜ್ಞೈಃ । ಸ್ಥಿತೀಕರಣಮುಚ್ಯತೇ ॥೬॥**

**ಅನ್ವಯಾರ್ಥ:**—ದರ್ಶನಾತ್–ಸಮ್ಯಗ್ದರ್ಶನದಿಂದ ವಾ-ಅಥವಾ ಚರಣಾದಪಿ–ಸಮ್ಯಕ್ಚಾರಿತ್ರದಿಂದಲೂ ಕೂಡ ಚಲತಾಂ–ಚಂಚಲರಾದವರನ್ನು, ಧರ್ಮವತ್ಸಲೈಃ-ಧರ್ಮದಲ್ಲಿ ಪ್ರೀತಿಯುಳ್ಳವರಿಂದ ಯತ್-ಯಾವದು ಪ್ರತ್ಯವಸ್ಥಾಪನಂ–ಪುನಃ ಅದರಲ್ಲಿಯೇ ಸ್ಥಿರಪಡಿಸುವಿಕೆಯು, ಯಾವದಿದೆಯೋ ತತ್-ಅದು ಪ್ರಾಜ್ಞೈಃ—ಬುದ್ಧಿಶಾಲಿಗಳಿಂದ ಸ್ಥಿತೀಕರಣಂ-ಸ್ಥಿತೀಕರಣ ಅಂಗವೆಂದು, ಉಚ್ಯತೇ–ಹೇಳಲ್ಪಡುತ್ತದೆ.

**ತಾತ್ಪರ್ಯ:**—ದೇವಗುರುಶಾಸ್ತ್ರಗಳಲ್ಲಿ ದೃಢವಾದ ನಂಬಿಕೆಯನ್ನುಳ್ಳ ಸಮ್ಯಗ್ದೃಷ್ಟಿಯೂ ಅಥವಾ ವ್ರತ–ಸಂಯಮ ಮೊದಲಾದುವುಗಳನ್ನು ಪಾಲಿಸುವ ಸಮ್ಯಕ್ಚಾರಿತ್ರವಂತನೂ ತಮ್ಮ ತಮ್ಮ ದರ್ಶನ–ಚಾರಿತ್ರಗಳಿಂದ ಪ್ರಬಲವಾದ ಕಷಾಯಗಳ ಉದಯದಿಂದಾಗಲಿ ದುರ್ಜನರ ಸಹವಾಸದಿಂದಾಗಲಿ ರೋಗ ಮೊದಲಾದ ತೀವ್ರವಾದ ವೇದನೆಗಳಿಂದಾಗಲಿ ದರಿದ್ರಾವಸ್ಥೆಯಿಂದಾಗಲಿ ಮಿಥ್ಯೋಪದೇಶದಿಂದಾಗಲಿ ಅಥವಾ ಮಿಥ್ಯಾದೃಷ್ಟಿಗಳ ಮಂತ್ರತಂತ್ರ ಮೊದಲಾದ ಚಮತ್ಕಾರಗಳನ್ನು ನೋಡಿಯಾಗಲಿ

ಚಲಾಯಮಾನರಾಗತಕ್ಕವರನ್ನು ಧರ್ಮಾತ್ಮರು ಅಂಥವರಿಗೆ ಯಥಾರ್ಥ ವಾದ ಉಪದೇಶವನ್ನು ಮಾಡಿ ಪುನಃ ಅದೇ ಸಮ್ಯಗ್ದರ್ಶನಚಾರಿತ್ರಗಳಲ್ಲಿ ಅವರನ್ನು ಸ್ಥಿರಪಡಿಸುವುದಕ್ಕೆ ಸ್ಥಿತೀಕರಣ—ಅಂಗವೆಂದು ಹೆಸರು. ಈ ಗುಣ ದಲ್ಲಿ ವಾರಿಷೇಣಕುಮಾರನು ಪ್ರಸಿದ್ಧಿಯನ್ನು ಹೊಂದಿರುವನು.

## ೬ ವಾರಿಷೇಣಕುಮಾರನ ಕಥೆ.

ಪ್ರಾಚೀನ ಕಾಲದಲ್ಲಿ ಮಗಧದೇಶದೊಳಗೆ ಸಂಪತ್ತಿಗೆ ತವರುಮನೆ ಯಾದ ರಾಜಗೃಹವೆಂಬ ಪಟ್ಟಣವಿತ್ತು. ಅಲ್ಲಿ ಸಮ್ಯಗ್ದೃಷ್ಟಿಯಾದ ಶ್ರೇಣಿಕ ಮಹಾರಾಜನು ತನ್ನ ಸಮ್ಯಕ್ತ್ವವಂತೆಯಾದ ಚೇಲನಾಮಹಾದೇವಿ ಯೆಂಬ ಪತ್ನಿಯೊಡನೆ ರಾಜ್ಯವನ್ನಾಳುತ್ತಿದ್ದನು. ಈ ದಂಪತಿಗಳ ಗುಣಕ್ಕ ರ್ಹನಾದ ಶುದ್ಧಾಚರಣೆಯೂ ಜೈನಧರ್ಮಾಸಕ್ತನೂ ಆದ ವಾರಿಷೇಣ ನೆಂಬ ಪುತ್ರನು ಜನಿಸಿದನು. ಆತನು ಪ್ರತಿಯೊಂದು ಚತುರ್ದಶಿಯ ದಿವಸ ಉಪವಾಸವನ್ನು ಮಾಡಿ ರಾತ್ರಿಯಲ್ಲಿ ಕಾಯೋತ್ಸರ್ಗದಿಂದ ಧ್ಯಾನವನ್ನು ಮಾಡುವುದಕ್ಕೆ ಸ್ಮಶಾನಕ್ಕೆ ಹೋಗುತ್ತಿದ್ದನು. ಆ ತನ್ನ ನಿಯಮಕ್ಕನುಸಾ ರವಾಗಿ ಒಂದು ದಿನ ಚತುರ್ದಶಿಯ ರಾತ್ರೆಯಲ್ಲಿ ಆ ನಿರ್ಜನವೂ ಘೋರವೂ ಆದ ಸ್ಮಶಾನಭೂಮಿಯಲ್ಲಿ ಕಾಯೋತ್ಸರ್ಗಧ್ಯಾನವನ್ನು ಮಾಡುತ್ತಾ ನಿಂತುಕೊಂಡಿದ್ದನು.

ಅದೇ ದಿವಸ ಪ್ರಾತಃಕಾಲದಲ್ಲಿ ತತ್ಪುರವಾಸಿನಿಯಾದ ಮಗಧಸುಂದ ರಿಯೆಂಬ ವೇಶ್ಯೆಯೋರ್ವಳು ನಗರದ ಬಾಹ್ಯೋಪವನದಲ್ಲಿ ವಿಹರಿಸುವುದಕ್ಕೆ ಹೋಗುತ್ತಿದ್ದಳು. ಅದೇ ವನದಲ್ಲಿ ಆ ನಗರದ ಶ್ರೀಕೀರ್ತಿಯೆಂಬ ಧನಿಕ ನೊಬ್ಬನು ವಿಹರಿಸುವುದಕ್ಕೆ ಬಂದಿದ್ದನು. ಆತನ ಕೊರಳಲ್ಲಿರುವ ಪ್ರಕಾಶ ಮಾನವಾದ ರತ್ನಹಾರವನ್ನು ಆಕೆಯು ನೋಡಿ ಮೋಹಿತಳಾಗಿ ಈ ಹಾರವು ನನಗೆ ಸಿಕ್ಕುವ ಬಗೆ ಹೇಗೆ? ಯದಿ, ಈ ಹಾರವು ದೈವಯೋಗದಿಂದ ಎನಗೆ ದೊರೆತರೆ ನನ್ನ ಭಾಗ್ಯಕ್ಕೆ ಎಣೆಯಿಲ್ಲವೆಂದು ಭಾವಿಸುತ್ತೇನೆ. ಇಂತಹ ಸುಂದರವಾದ ಪದಾರ್ಥವು ಯಾರಲ್ಲಿದೆಯೋ ಅವರ ಜನ್ಮವು ಸಫಲವಾ ದುದು. ನನಗಂತೂ ಈ ಹಾರವು ಖಪುಷ್ಪದಂತೆ ಅಲಭ್ಯವಾದುದೇ ಸರಿ, ಎಂದು ಶೋಕಾಕುಲಚಿತ್ತಳಾಗಿ ಮನೆಗೆ ಬಂದು ತಳಮಳಿಸುತ್ತಾ ಹಾಸಿಗೆ

ಯಲ್ಲಿ ಬಿದ್ದುಕೊಂಡಳು. ಆಕೆಯು ಈ ಹಾರದ ಚಿಂತೆಯಿಂದ ಆಹಾರವ ನ್ನೂ ಸಹ ಮರೆತವಳಾಗಿ ದುಃಖಿತಾಂತಃಕರಣದಿಂದ ಇರುತ್ತಿರುವಷ್ಟರಲ್ಲಿ ರಾತ್ರಿಯಾಯಿತು. ಆಗ ಆಕೆಯಲ್ಲಿ ಆಸಕ್ತನಾದ ವಿದ್ಯುಚ್ಚೋರನೆಂಬ ಕಳ್ಳನು ಅಲ್ಲಿಗೆ ಬಂದನು. ಆತನು ತನ್ನ ಪ್ರಿಯಳ ಶೋಕವಿಹ್ವಲತೆಯನ್ನು ನೋಡಿ, ಪ್ರಿಯೇ ! ನಿನ್ನ ಸ್ಥಿತಿಯು ಈ ರೀತಿಯಾಗಲು ಕಾರಣವೇನು ? ಯಾವ ದುಷ್ಟನಿಂದ ನಿನಗೆ ಇಂತಹ ಕಷ್ಟವು ಬಂದೊದಗಿತು.? ಆತನ ಹೆಸರಾದರೂ ಹೇಳು. ಈ ಕ್ಷಣದಲ್ಲಿ ಆತನಿಗೆ ತಕ್ಕ ಶಾಸನವನ್ನು ಮಾಡಿ ನಿನಗಾನಂದವನ್ನುಂಟು ಮಾಡುವೆನು. ಮಲ್ಲಿಗೆಯ ಹೂವಿನಂತೆ ಕೋಮಲ ವಾದ ನಿನ್ನ ಶರೀರವು ದುಃಖಾಗ್ನಿಯಿಂದ ಎಷ್ಟು ಬಾಡಿ ಹೋಗಿರುವುದು? ಪ್ರಿಯೇ ! ಹೇಳು ! ಹೇಳು ! ನಾನಿರುವಾಗ ನೀನು ಶೋಕಪಡುವುದು ಉಚಿತವಲ್ಲವು ಎಂದನು. ಈ ಮಾತನ್ನು ಕೇಳಿ ಆಕೆಗೆ ಸ್ವಲ್ಪ ಸಮಾಧಾನ ವಾಯಿತು. ಆಗ ಅವಳು "ಪ್ರಾಣಪ್ರಿಯರೇ ! ತಮಗೆ ನನ್ನಲ್ಲಿರುವ ನಿಷ್ಕಪಟ ವಾದ ಪ್ರೇಮವನ್ನು ಕಂಡು ನನಗೆ ಪರಮಾನಂದವಾಯಿತು. ಮತ್ತು ತಮ್ಮಂ ತಹ ಯಜಮಾನರು ನನಗೆ ದೊರೆತಿರುವುದಕ್ಕಾಗಿ ಆ ದಯಾಳುವಾದ ಪರ ಮಾತ್ಮನನ್ನು ಮನಃಪೂರ್ವಕವಾಗಿ ಸ್ಮರಿಸುತ್ತೇನೆ. ನನ್ನ ದುಃಖಕ್ಕೆ ಕಾರ ಣವೇನೆಂದರೆ ಇಂದು ನಾನು ನಗರದ ಬಹಿರ್ಭಾಗದಲ್ಲಿರುವ ಉದ್ಯಾನಕ್ಕೆ ವನಕ್ರಿಡಾರ್ಥವಾಗಿ ಹೋಗಿರಲು, ಅಲ್ಲಿ ಇದೇ ನಗರದ ಶ್ರೀಕೀರ್ತಿಯೆಂಬ ಧನಿಕನೂ ಬಂದಿದ್ದನು. ಆತನ ಕಂಠದಲ್ಲಿ ಪ್ರಕಾಶಮಾನವೂ ಅಮೂಲ್ಯವೂ ಆದ ರತ್ನಹಾರವು ಕಂಗೊಳಿಸುತ್ತಿತ್ತು. ಆದನ್ನು ನೋಡಿ ಈ ಹಾರವು ಎನಗೆ ಹೇಗೆ ದೊರೆಯಬಹುದೆಂಬ ಚಿಂತೆಯಿಂದ ನನ್ನ ಅವಸ್ಥೆಯು ಹೀಗಾಗಿರು ವುದೆಂದಳು. ತಮಗೆ ನಿಜವಾದ ಪ್ರೇಮವು ಎನ್ನಲ್ಲಿರುವುದಾದರೆ ಆ ಹಾರ ವನ್ನು ನನಗೆ ತಂದುಕೊಡಬೇಕು. ಆ ಹಾರವಿಲ್ಲದೆ ಬೇರೆ ಆಹಾರವಿಹಾರ ಗಳೇನೂ ಸಂತೋಷವನ್ನುಂಟು ಮಾಡಲಾರವು" ಎಂದಳು. ಈ ಪ್ರಕಾರ ವಾದ ಆ ಪಣ್ಯಾಂಗನೆಯ ಮೋಹಕವಾದ ಭಾಷಣಗಳನ್ನು ಕೇಳಿ, "ಇಷ್ಟೇ ಅಲ್ಲವೇ ! ಛೀ ! ಇದೇತರ ಚಿಂತೇ ? ಈ ಕಾರ್ಯವನ್ನು ಕ್ಷಣಾರ್ಧದಲ್ಲಿ ಮಾಡಿ ಬಿಡುವೆನು. ನೀನು ನಿಶ್ಚಿಂತಳಾಗಿರು. ಇನ್ನು ಅಲ್ಪಕಾಲದಲ್ಲಿಯೋ

ಆ ಹಾರವು ನಿನ್ನ ಕಂಠದಲ್ಲಿ ಶೋಭಿಸುತ್ತಿರುವುದನ್ನು ನೋಡುವಿ" ಎಂದು ಆಕೆಯನ್ನು, ಸಂತೈಸಿ ಹೊರಟು ಹೋದನು.

ವಾಚಕರೇ ! ನೋಡಿರಿ. ಈ ಸಂಸಾರವು ಎಷ್ಟು ವಿಚಿತ್ರವಾಗಿರುವುದು! ಶರೀರವನ್ನು ವಿಕ್ರಯಿಸುವ ಮತ್ತು ಚಂಚಲ ಮನಸ್ಸಿನ ಒಬ್ಬ ವೇಶ್ಯೆಯ ಪ್ರೇಮವು ತನ್ನ ಮೇಲೆ ದೃಢವಾಗಿ ಉಳಿಯಬೇಕೆಂಬ ಹೇತುವಿನಿಂದ ಆ ಚೋರನು ಇಂತಹ ಕಠಿಣವಾದ ಕಾರ್ಯಕ್ಕೆ ಕೈಹಾಕಿದನು. ಪರಂತು ಹಲವು ವಿಧದ ತೊಂದರೆಗಳನ್ನು ಸಹಿಸಿಯೂ ಹಾರವನ್ನು ಅವಳಿಗೆ ತಂದುಕೊಟ್ಟರೂ ವೇಶ್ಯಾಸ್ತ್ರೀಯರ ಪ್ರೇಮವು ನಿಜವಾಗಿ ಉಳಿಯುವುದು ಅಸಾಧ್ಯವೇ ಸರಿ. ಅವರ ಪ್ರೇಮವು ಕೇವಲ ದ್ರವ್ಯವಶವಾದುದು. ಹೆಚ್ಚು ದ್ರವ್ಯವನ್ನು ಕೊಟ್ಟವನೇ ಅವರ ಪ್ರೀತಿಪಾತ್ರನು. ತನ್ನ ಬಲೆಯಲ್ಲಿ ಸಿಕ್ಕಿದ ಪ್ರತಿಯೊಬ್ಬ ಪುರುಷನನ್ನೂ ಮೋಹಜನಕವಾದ ಭಾಷಣಗಳಿಂದಲೂ ನಾನಾತರದ ಹಾವಭಾವಗಳಿಂದಲೂ ಪ್ರಸನ್ನೀಕರಿಸಿ ದ್ರವ್ಯಶೋಷಣ ಮಾಡುವುದೊಂದೇ ಅವರ ಧ್ಯೇಯವಾಗಿರುವುದು. ಅಂತಹ ಸ್ತ್ರೀಯರ ವಿಷಯವಾಗಿ ಮಂದಮತಿಗಳಾದ ಪುರುಷರು ತಮ್ಮ ಸರ್ವಸ್ವವನ್ನೂ ಅವರಿಗೆ ಒಪ್ಪಿಸಿದರೂ ಮತ್ತೊಬ್ಬ ಪುರುಷನು ಬಂದ ಕೂಡಲೇ ಮೊದಲನೆಯವನನ್ನು ಮರೆತುಬಿಡುವರು. ಈ ಕ್ರಮವು ಅನಾದಿಕಾಲದಿಂದ ನಡೆದು ಬಂದಿದ್ದರೂ ಕಾಮುಕರು ವೇಶ್ಯಾಸ್ತ್ರೀಯರ ಆ ಕಪಟಪ್ರೇಮಕ್ಕೆ ವಶೀಭೂತರಾಗಿ ತಮ್ಮ ಶಾರೀರಿಕ ಮತ್ತು ಆರ್ಥಿಕ ನಾಶವನ್ನಂತೂ ಮಾಡಿಕೊಳ್ಳುವುದಲ್ಲದೆ, ತಮ್ಮ ಪತ್ನೀಪುತ್ರರ ಸುಖವನ್ನೂ ಹಾಳುಮಾಡುತ್ತಾರೆ. ಇಷ್ಟಾದರೂ ಕಾಮಾಸಕ್ತರಿಗೆ ನಾಚಿಕೆಯಾಗುವುದಿಲ್ಲ. ಯಾವಳು ತಿರಸ್ಕಾರದಿಂದ ತನ್ನ ಮನಸ್ಸನ್ನು ನೋಯಿಸುವಳೋ, ಅಂತವಳ ದುಷ್ಟಭಾಷಣವನ್ನು ಸ್ವಲ್ಪವೂ ಮನಸ್ಸಿಗೆ ತಾಕದೆ ನಿರ್ಲಜ್ಜೆಯಿಂದ ಅವಳ ಸಮಿಪಕ್ಕೆ ಹೋಗಿ ಅವಳ ಪಾದತಾಡನವನ್ನೂ ಪ್ರೇಮದಿಂದ ಸಹಿಸುವರು. ಅವಳಿಂದುಂಟಾದ ತಿರಸ್ಕಾರವನ್ನೆಲ್ಲಾ ಭೂಷಣವೆಂದೇ ಭಾವಿಸುವರು. ಇಂತಹ ವೇಶ್ಯಾಸಕ್ತರ ಬಾಳುವಿಕೆಗೆ ಧಿಃಕ್ಕಾರವಿರಲಿ.

ವೇಶ್ಯೆಯ ಮನೆಯಿಂದ ಹೊರಟು ಹೋದ ಆ ವಿದ್ಯುಚ್ಚೋರನು

ಬೇಗನೇ ಶ್ರೀಕೀರ್ತಿಶ್ರೇಷ್ಠಿಯ ಮನೆಯನ್ನು ಪ್ರವೇಶಿಸಿ, ಅವನಕೊರಳಲ್ಲಿರುವ ಹಾರವನ್ನು ತೆಗೆದುಕೊಂಡು "ಓಹೋ! ಈ ಹಾರವನ್ನು ಕೊಂಡು ಹೋಗಿ ಕೊಟ್ಟಕೂಡಲೆ ಮಗಧಸುಂದರಿಯು ಎನ್ನಲ್ಲಿ ಅತುಲವಾದ ಪ್ರೇಮವನ್ನು ಮಾಡುವಳು. ಆಮರಣದವರೆಗೆ ನನ್ನ ಉಪಕಾರವನ್ನು ಮರೆಯಳು. ನಾನು ಹೋದ ಕೂಡಲೇ ಹಾರವು ದೊರೆಯಲಿಲ್ಲವೆಂದು ನಟಿಸಬೇಕು. ಆ ಮೇಲೆ ಪ್ರೇಮಕಲಹದಿಂದ ಆಕೆಯ ಕಂಠದಲ್ಲಿ ಈ ಹಾರನ್ನು ಅರ್ಪಿಸಬೇಕ" ಎಂಬಿತ್ಯಾದಿ ಮನೋರಾಜ್ಯದಲ್ಲಿ ಸಂಕಲ್ಪವಿಕಲ್ಪಗಳನ್ನು ಮಾಡುತ್ತ ಬೇಗನೇ ಓಡಲಾರಂಭಿಸಿದನು. ಆದರೆ ಅವನ ಮನೋರಾಜ್ಯವು ನಾಶವಾಗುವಂಥ ಒಂದು ಸಂಕಟವು ಬಂದೊದಗಿತು. ಚೋರನು ಹಾರವನ್ನು ಒಯ್ಯುವಾಗ ಅದರ ಪ್ರಕಾಶವು ನಗರರಕ್ಷಕರ ಮತ್ತು ಶ್ರೇಷ್ಠಿಯ ದ್ವಾರಪಾಲಕರ ಕಣ್ಣಿಗೆ ಬಿದ್ದು, ಕೂಡಲೇ ಅವರು ಈ ಚೋರನನ್ನು ಹಿಂಬಾಲಿಸಿದರು. ಇತ್ತ ಮನೋರಾಜ್ಯವೆಂಬ ಸುಖದ ಮೇರುಗಿರಿಯ ಮೇಲೆ ಕುಳಿತಿದ್ದ ಆ ವಿದ್ಯುಚ್ಚೋರನು ಯಾರೋ ನನ್ನನ್ನು ಬೆನ್ನಟ್ಟಿ ಬರುತ್ತಾರೆಂದರಿದು ಕಲ್ಲುಮುಳ್ಳು ತಗ್ಗು ದಿಣ್ಣೆಯೆಂದನ್ನದೆ ಓಡುತ್ತಾ ಸ್ವಲ್ಪ ಸಮಯದಲ್ಲಿ ಆಯಾಸದಿಂದ ಶಕ್ತಿಹೀನನಾಗಿ ಇನ್ನು ಇವರ ಕೈಗೆ ಸಿಕ್ಕುತ್ತೇನೆಂಬ ಭಯದಿಂದ ಅತ್ತಿತ್ತ ನೋಡುವಷ್ಟರಲ್ಲಿ ಸ್ಮಶಾನದಲ್ಲಿ ಧ್ಯಾನಸ್ಥನಾದ ವಾರಿಷೇಣಕುಮಾರನನ್ನು ನೋಡಿ ಕೂಡಲೇ ಈ ಹಾರವನ್ನು ಆತನೆದುರಿಗೆ ಬೀಸಾಡಿ ಅಲ್ಲಿಯೇ ಸ್ವಲ್ಪದೂರದಲ್ಲಿ ಅಡಗಿಕೊಂಡನು. ಇಷ್ಟರಲ್ಲಿ ಪ್ರಕಾಶಾನುಗಾಮಿಗಳಾದ ನಗರರಕ್ಷಕರು ಅಲ್ಲಿಗೆ ಬಂದರು. ಅವರು ಧ್ಯಾನಸ್ಥನಾದ ರಾಜಪುತ್ರನನ್ನು ನೋಡಿ, ಈತನೇ ಈ ಹಾರವನ್ನು ಅಪಹರಿಸಿರಬಹುದು. ತನ್ನ ಕಳ್ಳತನವು ಪ್ರಕಟವಾಗುವದೆಂದು ಏನೂ ತಿಳಿಯದವನಂತೆ ಧ್ಯಾನದಲ್ಲಿ ಮಗ್ನನಾಗಿರುವವನಂತೆ ನಟಿಸಿರುವನು. ಈ ವಿಷಯವನ್ನು ನಾವು ಶ್ರೇಣಿಕಮಹಾರಾಜನಿಗೆ ನಿರೂಪಿಸಬೇಕೆಂದು ಹೋಗಿ ನಡೆದ ಸಂಗತಿಗಳನ್ನೆಲ್ಲಾ ಇತ್ಥಂಭೂತವಾಗಿ ಹೇಳಿದರು. ಅದನ್ನು ಕೇಳಿ ರಾಜನು ಕುಪಿತನಾಗಿ ಆಸ್ಥಾನದೊಳಗಿನ ಜನರನ್ನು ಕುರಿತು—"ಮಾನ್ಯರೇ! ನನ್ನ ಮಗನ ಧ್ಯಾನ ಮೊದಲಾದ ಬಾಹ್ಯಾಚರಣೆಗಳಿಂದ ಆತನ ಚಾರಿತ್ರವು ನಿರ್ಮಲವಾದು—

ದೆಂದು ಭಾವಿಸಿದ್ದೆನು. ಆದರೆ ಇಂದಿನ ವಿಷಯವನ್ನು ಕೇಳಿ ನನಗೆ ಅವನ ಲ್ಲಿದ್ದ ಪೂಜ್ಯಬುದ್ಧಿಯು ತೀರ ನಾಶವಾಯಿತು. ಧಾರ್ಮಿಕತನದ ವೇಷದಿಂದ ಜನರನ್ನು ಈ ರೀತಿಯಾಗಿ ಮೋಸಗೊಳಿಸುವನೆಂಬ ವಿಚಾರವು ಸ್ವಲ್ಪವೂ ಬಂದಿರಲಿಲ್ಲ. ಈ ಸಂಗತಿಯನ್ನು ಬೇರೆ ಯಾರಾದರೂ ಹೇಳುತ್ತಿದ್ದರೆ ನಂಬು ತ್ತಿರಲಿಲ್ಲ. ಆದರೆ ನನ್ನ ಪರಮವಿಶ್ವಾಸಿಗಳಾದ ನೀವು ಹೇಳುವುದರಿಂದ ನಂಬತಕ್ಕದ್ದಾಗಿದೆ. ನಿಜವಾಗಿ ಪರಿಣಾಮದಲ್ಲಿ ಹಿತವನ್ನುಂಟು ಮಾಡುವ ಧ್ಯಾನವೆತ್ತ ? ಕೊನೆಗೆ ದುಃಖದಾಯಕವಾದ ಮೋಸಗಾರಿಕೆ ಎತ್ತ ? ಎಲೈ ಪ್ರಜೆಗಳಿರಾ! ಈತನು ನನ್ನ ರಾಜ್ಯಕ್ಕೆ ಯೋಗ್ಯನೆಂದು ಭಾವಿಸಿ ದ್ದೆನು. ಮತ್ತು ನನ್ನ ಎಲ್ಲಾಮಕ್ಕಳಿಗಿಂತ ಇವನಲ್ಲಿ ಹೆಚ್ಚಾದ ಪೂಜ್ಯ ಬುದ್ಧಿಯು ಇತ್ತು. ಅಂತಹ ನನ್ನಮಗನಾದ ವಾರಿಷೇಣಕುಮಾರನಿಂದ ನನ್ನ ವಿಶಾಲವಾದ ಕೀರ್ತಿಗೆ ಕಲಂಕವನ್ನುಂಟುಮಾಡುವ ಈ ಕಾರ್ಯವು ಸಂಘಟ ಸಿತೆಂದರೆ ಬಹಳ ವ್ಯಸನವಾಗುವುದು. ಇಂತಹ ರತ್ನಹಾರವು ನಮ್ಮಲ್ಲಿ ಕಡಿಮೆ ಯೇ ? ಮಾಡುವುದೇನು? ದುಷ್ಟರು ಸನ್ಮಾರ್ಗಿಗಳಾಗಿರುವುದು ಅಸಂಭ ವವು. ಈ ನನ್ನ ಪುತ್ರನ ನಿಂದ್ಯಾಚರಣೆಗೆ ಶತಶಃ ಧಿಃಕ್ಕಾರವಿರಲಿ. ನನ್ನ ಮಗನಾದರೇನು ? ಆತನ ಅಪರಾಧಕ್ಕೆ ಸರಿಯಾದ ಶಿಕ್ಷೆಯನ್ನು ಕೊಡುವುದು ನನ್ನ ಧರ್ಮವಾಗಿದೆ ಎಂದು ಏನೂ ವಿಚಾರಮಾಡದೆ ಅವನ ಶಿರಚ್ಛೇದನ ವನ್ನು ಮಾಡುವಂತೆ ಆಜ್ಞಾಪಿಸಿದನು'' ಅದರಂತೆ ಚಾಂಡಾಲರು ಶಸ್ತ್ರ ಧಾರಿಗಳಾಗಿ ಸ್ಮಶಾನಕ್ಕೆ ಹೋದರು. ಈ ಚಮತ್ಕಾರವನ್ನು ನೋಡುವುದ ಕ್ಕೋಸ್ಕರ ಬಹಳಜನ ನಗರವಾಸಿಗಳು ನೆರೆದಿದ್ದರು. ಆ ಮೇಲೆ ಚಾಂಡಾ ಲರಲ್ಲೊಬ್ಬನು ಧ್ಯಾನಸ್ಥನಾದ ವಾರಿಷೇಣಕುಮಾರನ ಮಸ್ತಕದ ಮೇಲೆ ಖಡ್ಗಪ್ರಹಾರವನ್ನು ಮಾಡಿದನು. ಪರಂತು ಆಗ ಆ ರಾಜಪುತ್ರನ ಪುಣ್ಯ ಪ್ರಭಾವದಿಂದ ಚಾಂಡಾಲರ ಕೈಯಲ್ಲಿದ್ದ ಖಡ್ಗವು ಇಲ್ಲದಂತಾಗಿ ಅವನ ಕಂಠದಲ್ಲಿ ಪುಷ್ಪಮಾಲೆಯು ಕಂಗೊಳಿಸುತ್ತಿತ್ತು. ವಿಚಾರಮಾಡಿ ನೋಡಿ ದರೆ, ಇಂತಹ ಪುಣ್ಯಾತ್ಮರ ಪ್ರಭಾವದಿಂದ ಭಯಂಕರವಾದ ಬೆಂಕಿಯೂ ತಣ್ಣಗಾಗುವುದು. ಮಹಾಸಾಗರವು ಭೂಮಿಯಾಗುವುದು. ಕಾಲಕೂಟ ವಿಷವು ಅಮೃತವಾಗುವುದು. ದರಿದ್ರನು ಧನಿಕನಾಗುವನು. ಶತ್ರುವು ಮಿತ್ರ

ನಾಗುವನು. ಇದನ್ನೆಷ್ಟು ವರ್ಣಿಸಲಿ? ಆದುದರಿಂದ ಸುಖಾಭಿಲಾಷಿಗಳಾದ ಭವ್ಯರು ಜಿನಪೂಜೆ, ಸತ್ಪಾತ್ರದಾನ, ವ್ರತೋಪವಾಸ ಮೊದಲಾದ ಧರ್ಮ ಕಾರ್ಯಗಳಿಂದ ಪುಣ್ಯಸಂಪಾದನೆಯನ್ನು ಮಾಡಿಕೊಳ್ಳಿರಿ.

ಆ ಸಮಯದಲ್ಲಿ ಈ ಚಮತ್ಕಾರವನ್ನು ಸ್ವರ್ಗದ ದೇವತೆಗಳು ನೋಡಿ ಸಂತುಷ್ಟರಾಗಿ ರಾಜಪುತ್ರನನ್ನು ಹೊಗಳುತ್ತ ಪುಷ್ಪವೃಷ್ಟಿಯನ್ನು ಮಾಡಿದರು. ಈ ಸೋಜಿಗವನ್ನು ಕಂಡು ನಗರವಾಸಿಗಳೆಲ್ಲರೂ ಆನಂದಿತ ರಾಗಿ ರಾಜಪುತ್ರನನ್ನು ಕುರಿತು, "ಎಲೈ! ನೃಪತನಯನೇ! ನೀನು ನಿಜ ವಾಗಿಯೂ ಸಾಧುವಾಗಿರುವಿ. ನಿನ್ನ ಚಾರಿತ್ರವು ರಮಣೀಯವಾದುದು. ನಿನಗೆ ಜೈನಧರ್ಮದಲ್ಲಿ ದೃಢವಾದ ನಂಬಿಕೆಯಿರುವುದು. ನಿನ್ನ ನಿರ್ಮಲ ವಾದ ಚಾರಿತ್ರಕ್ಕೆ ಕಲಂಕವನ್ನುಂಟುಮಾಡುವ ಸಮಯವು ಬಂದೊದಗಿ ದರೂ ನಿನ್ನ ಪುಣ್ಯದ ಮಹಿಮೆಯಿಂದ ದೂರವಾದ ಅಗ್ನಿಯ ಸಂಯೋಗ ದಿಂದ ಸುವರ್ಣವು ಉಜ್ವಲವಾಗುವಂತೆ ನೀನು ಪ್ರಕಾಶಮಾನನಾಗಿರುವಿ, ಇಂತೆಂದು ಹಲವು ವಿಧವಾಗಿ ರಾಜಪುತ್ರನನ್ನು ಪ್ರಶಂಸಿಸಿದರು.

ಇತ್ತ ಶ್ರೇಣಿಕಮಹಾರಾಜನು ಈ ವಿಷಯಗಳನ್ನೆಲ್ಲಾ ಕೇಳಿ ಮನ ಸಿನಲ್ಲಿ—ಬಹಳ ಪಶ್ಚಾತ್ತಾಪವನ್ನು ಪಟ್ಟು "ಅಯ್ಯೋ! ಪಾಪಿಯಾದ ನನ್ನಿಂದ ವಿಚಾರಮಾಡದೆ ಎಂತಹ ಅನರ್ಥವಾಯಿತು. ನಾನು ಏನೊಂದೂ ವಿಚಾರಿಸದೆ ಸೇವಕರ ಮಾತಿನಲ್ಲಿ ವಿಶ್ವಾಸವನ್ನಿಟ್ಟು ಅತ್ಯಂತ ಉಜ್ವಲ ವಾದ ಚಾರಿತ್ರವಂತನಾದ ನನ್ನ ಮಗನ ಶಿರಚ್ಛೇದನೆಯನ್ನು ಮಾಡಲು ಅಪ್ಪಣೆ ಕೊಟ್ಟೆನು. ಆದರೂ ಅವನ ಪುಣ್ಯಪ್ರಭಾವದಿಂದ ಅದೇನೂ ಫಲ ಕಾರಿಯಾಗದೆ ನಾನು ಮಾತ್ರ ಪಾಪಕ್ಕೆ ಭಾಗಿಯಾದೆನು, ಎಂದು ತನ್ನನ್ನು ನಿಂದಿಸಿಕೊಳ್ಳುತ್ತಾ ರಾಜಪುತ್ರನಿದ್ದಲ್ಲಿಗೆ ಬಂದು—"ವಾರಿಷೇಣಕುಮಾರಾ! ನೀನು ಕ್ಷಮಾಸಾಗರನಾಗಿರುತ್ತೀ. ಆದ್ದರಿಂದ ನನ್ನಿಂದಾದ ಅಪರಾಧವನ್ನು ಕ್ಷಮಿಸು." ಎಂದು ಹೆಚ್ಚಿಗೆ ಮಾತನಾಡಲಾರದವನಾಗಿ ಸುಮ್ಮನೇ ಕುಳಿ ತನು. ಆದರೆ, ನೇತ್ರಗಳಿಂದ ಪ್ರವಾಹರೂಪವಾಗಿ ದು:ಖಾಶ್ರುಗಳು ಸುರಿ ಯುತ್ತಿದ್ದುವು. ರಾಜನ ಈ ಸ್ಥಿತಿಯನ್ನು ನೋಡಿ ವಾರಿಷೇಣಕುಮಾರನು ಸ್ತಬ್ಧನಾಗಿದ್ದನು. ಏಕೆಂದರೆ, ಆತನ ಮನಸ್ಸು ಸಂಸಾರ ವಿಷಯಗಳಿಂದ

ನಿವೃತ್ತವಾಗಿತ್ತು. ಈಗಲಂತೂ ಮತ್ತಷ್ಟು ವೈರಾಗ್ಯವನ್ನು ಹೊಂದಿತು. ಚಂದನವನ್ನು ತೇಯುವುದರಿಂದ ಅದರಲ್ಲಿ ಮತ್ತಷ್ಟು ಸುಗಂಧವು ಹೆಚ್ಚಾಗುವಂತೆ, ಈತನ ಕ್ಷಮಾಗುಣವು ಅತ್ಯಧಿಕವಾಯಿತು. ಇರಲಿ.

ಇತ್ತ ಮರದ ಮರೆಯಲ್ಲಿ ಅಡಗಿಕೊಂಡಿದ್ದ ವಿದ್ಯುಚ್ಚೋರನು ಈ ಸಂಗತಿಯನ್ನೆಲ್ಲಾ ಕಣ್ಣಾರೆ ಕಂಡು, ಬಹಳ ದುಃಖಿತನಾಗಿ—ನಿಜವಾದ ಸಂಗತಿಯನ್ನು— ಶ್ರೇಣಿಕಮಹಾರಾಜನ ಹತ್ತಿರ ಹೇಳಿ ನನ್ನಾಪರಾಧವನ್ನು ಒಪ್ಪಿಕೊಳ್ಳುವುದು ಲೇಸೆಂದು ಯೋಚಿಸಿ, ಕೂಡಲೇ ರಾಜನ ಸಮೀಪಕ್ಕೆ ಬಂದು ವಿನಯದಿಂದ ನಮಸ್ಕರಿಸಿ ನೃಪವರ್ಯರೇ! ತಾವು ಅಭಯವನ್ನಿತ್ತರೆ ಇವರ ಎಲ್ಲಾ ಸಂಗತಿಯನ್ನು ನಿವೇದಿಸಿಕೊಳ್ಳುವೆನೆಂದು ಕೈಜೋಡಿಸಿಕೊಂಡು ನಿಂತುಕೊಂಡನು. ಆಕಸ್ಮಿಕವಾಗಿ ಈತನ ಬರುವಿಕೆಯನ್ನೂ ಅಭಯವಚನದ ಬೇಡುವಿಕೆಯನ್ನೂ ರಾಜನೂ ಸೇರಿದ ಜನರೆಲ್ಲರೂ ನೋಡಿ ಆಶ್ಚರ್ಯಚಕಿತರಾಗಿ ನೋಡುತ್ತಿದ್ದರು. ಕೊನೆಗೆ ರಾಜನು ಇವನು ಯಾರು? ಇಲ್ಲಿಗೆ ಬರಲು ಕಾರಣವೇನು.? ಅಭಯವಚನವನ್ನೇಕೆ ಕೇಳುತ್ತಾನೆ? ಎಂದಾಲೋಚಿಸಿ, ನೋಡುವಾ, ಎಂದು ಅಭಯವಚನವನ್ನಿತ್ತನು. ಆಗ ವಿದ್ಯುಚ್ಚೋರನು ಸಮಾಧಾನದಿಂದ ತನ್ನ ವೃತ್ತಾಂತವನ್ನೆಲ್ಲಾ ಹೇಳಲಾರಂಭಿಸಿದನು. "ರಾಜೇಂದ್ರನೇ! ಪಾಪಿಯಾದ ನಾನು ಮಗಧಸುಂದರಿಯೆಂಬ ವೇಶ್ಯೆಯಲ್ಲಾಸಕ್ತನಾಗಿ ಅವಳ ಇಚ್ಛೆಯನ್ನು ಪೂರ್ತಿ ಮಾಡುವುದಕ್ಕೋಸ್ಕರ ಈ ರತ್ನಹಾರವನ್ನು ಅಪಹರಿಸಿ ನಾನು ತಂದಿರುವೆನು. ಇದರಲ್ಲಿ ವಾರಿಷೇಣನಿಗೆ ಏನೂ ಸಂಬಂಧವಿರುವುದಿಲ್ಲವು, ನನ್ನನ್ನು ಕಾವಲುಗಾರರು ಹಿಂಬಾಲಿಸಿ ಬಂದಾಗ ಇನ್ನು ನಾನವರ ಕೈವಶನಾಗುತ್ತೇನಂದರಿದು, ಅದನ್ನು ರಾಜಪುತ್ರನ ಸಮೀಪದಲ್ಲಿ ಬೀಸಾಡಿ, ಈ ಮರದ ಕೆಳಗೆ ಅಡಗಿಕೊಂಡಿದ್ದೆನು, ನಿಜವಾಗಿಯೂ ನಾನೇ ಅಪರಾಧಿಯಾಗಿರುವೆನಲ್ಲದೆ ರಾಜಪುತ್ರನು ಸರ್ವಪ್ರಕಾರದಿಂದಲೂ ನಿರ್ದೋಷಿಯಾಗಿರುವನು, ಆದ್ದರಿಂದ ನನ್ನ ತಪ್ಪಿಗಾಗಿ ತಾವು ವಿಧಿಸುವ ಶಿಕ್ಷೆಯನ್ನು ಅನುಭವಿಸುವುದಕ್ಕೆ ಸಿದ್ಧನಾಗಿರುವೆನೆಂದನು,

ಈ ರೀತಿಯಾದ ವಿದ್ಯುಚ್ಚೋರನ ಮಾತುಗಳನ್ನು ಕೇಳಿ ಎಲ್ಲರೂ

ಆಶ್ಚರ್ಯದಿಂದ ಚಕಿತರಾದರು ಅವನು ಎಲ್ಲಾ ವಿಷಯಗಳನ್ನು ಮರೆ ಮಾಚದೆ ಹೇಳಿದ್ದರಿಂದ ರಾಜನು ಅವನ ಅಪರಾಧಗಳನ್ನೆಲ್ಲಾ ಕ್ಷಮಿಸಿ, ಇನ್ನು ಮುಂದೆ ಇಂತಹ ಕೆಟ್ಟ ಕೆಲಸಗಳನ್ನು ಮಾಡಬೇಡೆಂದು ಅಪ್ಪಣೆ ಕೊಟ್ಟನು. ಅನಂತರ ಶ್ರೇಣಿಕರಾಜನು ತನ್ನ ಮಗನನ್ನ ಅರಮನೆಗೆ ಬರಬೇಕೆಂದು ಹೇಳಿದನು. ಆಗ ಅವನು ಹೇಳಿದ್ದೇನಂದರೆ—"ತಾತನೇ! ಈ ಸಂಸಾರದಲ್ಲಿ ಸುಖವು ಇಷ್ಟೇ ಇದೆಯೆಂಬ ಕಲ್ಪನೆಯು ಇವತ್ತಿನ ಪ್ರಸಂಗದಿಂದ ಸಂಪೂರ್ಣವಾಗಿ ತಿಳಿಯಿತು, ಈ ಜೀವನು ಪಂಚೇಂದ್ರಿಯ ಜನ್ಯವಾದ ಸುಖಕ್ಕೆ ಮೋಹಿಸಿ ಅವುಗಳಲ್ಲಿ ಮಗ್ನನಾಗಿರುತ್ತಾನೆ. ಆದರೆ ಈ ಸುಖವು ನಿಜವಾದುದಲ್ಲ. ಮೃಗಜಲವಂತೆ ಸುಖಾಭಾಸವಾಗಿರುತ್ತದೆ. ಆತ್ಮನು ಜನನಮರಣರೂಪವಾದ ಸಂಸಾರಚಕ್ರದಿಂದ ಮುಕ್ತನಾಗುವುದೇ ನಿಜವಾದ ಸುಖವು. ಈ ಜೀವನು ಅನಾದಿಕಾಲದಿಂದ ಹಲವು ವಿಧವಾದ ಯೋನಿಗಳಲ್ಲಿ ಜನ್ಮವೆತ್ತಿ ನಾನಾಪ್ರಕಾರವಾದ ದು:ಖಗಳನ್ನು ಅನುಭವಿ ಸುತ್ತಿರುವನು, ಆದ್ದರಿಂದ ಈ ದು:ಖಪರಂಪರೆಯಿಂದ ಬಿಡುಗಡೆಯನ್ನು ಹೊಂದುವುದುಕ್ಕೆ ಪ್ರಯತ್ನಿಸುವುದು ನನ್ನ ಆದ್ಯ ಕರ್ತವ್ಯವಾಗಿದೆ, ಸಂಸಾರವನ್ನು ಪರಿತ್ಯಜಿಸಿ ಜಿನದೀಕ್ಷೆಯನ್ನು ಸ್ವೀಕರಿಸಿ ತಪಸ್ಸನ್ನು ಮಾಡಿ ಕರ್ಮಕ್ಷಯವನ್ನು ಮಾಡಿಕೊಳ್ಳದಿದ್ದರೆ ಮೋಕ್ಷವು ದೊರೆಯಲಾರದು, ಆದ ಕಾರಣ ನಾನು ಜಿನದೀಕ್ಷೆಯನ್ನು ಸ್ವೀಕರಿಸಬೇಕೆಂದು ನಿಶ್ಚೈಸಿರುವೆನು, ತಾವು ಈ ವಿಷಯದಲ್ಲಿ ಸ್ವಲ್ಪವೂ ವಿಘ್ನವನ್ನುಂಟು ಮಾಡಬಾರದು, ನನಗೆ ದೀಕ್ಷೆಯನ್ನು ಸ್ವೀಕರಿಸುವುದಕ್ಕೆ ಅಪ್ಪಣೆಯನ್ನೀಯಬೇಕು" ಎಂದು ಪ್ರಾರ್ಥಿಸಿಕೊಂಡನು, ಶ್ರೇಣಿಕರಾಜನು ತನ್ನ ಪುತ್ರನ ವೈರಾಗ್ಯಪೂರ್ಣವಾದ ದೃಢನಿಶ್ಚಯದ ಮಾತುಗಳನ್ನು ಕೇಳಿ ಯಾವವಿಧದ ಅಡ್ಡಿಯನ್ನೂ ಮಾಡದೆ ಜಿನದೀಕ್ಷೆಗೆ ಅಪ್ಪಣೆಯನ್ನಿತ್ತನು, ಕೂಡಲೇ ಸಂಸಾರಭೋಗದಿಂದ ವಿರಕ್ತನಾದ ವಾರಿಷೇಣಕುಮಾರನು ಸೂರದೇವಕರೆಂಬ ಮುನಿಗಳ ಸಮೀಪದಲ್ಲಿ ದೀಕ್ಷೆಯನ್ನು ಸ್ವೀಕರಿಸಿ ಯಥಾಖ್ಯಾತಚಾರಿತ್ರವನ್ನು ಪರಿಪಾಲಿಸುತ್ತಾ ಅಲ್ಲಲ್ಲಿ ಭವ್ಯಜೀವರಿಗೆ ಉಪದೇಶವನ್ನು ಮಾಡುತ್ತಾ ಆ ವಾರಿಷೇಣ ಮುನಿಯು ಪಲಾಶಕೂಟವೆಂಬ ಗ್ರಾಮಕ್ಕೆ ಬಂದನು.

ಅಲ್ಲಿ ಶ್ರೇಣಿಕರಾಜನ ಮಂತ್ರಿಗಳಲ್ಲೊಬ್ಬನಾದ ಅಗ್ನಿಭೂತಿಯೆಂಬ ವನು ಇರುತ್ತಿದ್ದನು, ಆತನಿಗೆ ಪುಷ್ಪಡಾಳನೆಂಬ ಮಗನಿದ್ದು ಆತನು ಸಮ್ಯಗ್ದೃಷ್ಟಿಯಾಗಿದ್ದನು, ಆತನು ದಾನಪೂಜಾದಿಗಳಲ್ಲಿ ತನ್ನ ಸಮಯವನ್ನು ಕಳೆಯುತ್ತಿದ್ದನು, ಹೀಗಿರಲೊಂದು ದಿನ ತನ್ನ ಮನೆಯಮುಂದೆ ಆಹಾರಾರ್ಥಿಯಾಗಿ ಬರುತ್ತಿದ್ದ ವಾರಿಷೇಣಮುನಿಗಳನ್ನು ಕಂಡು ಬೇಗನೆ ಹೊರಗೆ ಬಂದು ಬಹುವಿನಯದಿಂದ ನಮಸ್ಕರಿಸಿ, "ಭೋ ಮುನಿವರ್ಯ! ಭ್ರಾಮರೀಶುದ್ಧಿ ಕಾರಣಂ ಭವತು. ಅತ್ರ ತಿಷ್ಠ ತಿಷ್ಠ ತಿಷ್ಠ" ಎಂದು ಹೇಳಿ ತ್ರಿಃ ಪ್ರದಕ್ಷಿಣೆಯನ್ನು ಮಾಡಿ ಅವರನ್ನು ಕರಕೊಂಡುಹೋಗಿ ನವಧಾಭಕ್ತಿಯಿಂದ ಪ್ರಾಸುಕವಾದ ಆಹಾರವನ್ನಿತ್ತನು. ಅಷ್ಟರಲ್ಲಿ ಇವರು ತನ್ನ ಬಾಲಮಿತ್ರರಾದ ವಾರಿಷೇಣಕುಮಾರರೆಂದು ತಿಳಿದು ಅವರಲ್ಲಿ ಇನ್ನಷ್ಟು ಪ್ರೇಮವು ಹೆಚ್ಚಾಯಿತು. ಅನಂತರ ಅವರಿಗೆ ಆಹಾರವಾದ ಮೇಲೆ ಅವರನ್ನು ಕಳುಹಿಸಿ ಬರುವುದಕ್ಕೆ ಏಕಾಕ್ಷಿಯಾದ ಸೋಮಿಲೆಯೆಂಬ ನೂತನ ಪತ್ನಿಯನ್ನು ವಿಚಾರಿಸಿ ಅಪ್ಪಣೆಯನ್ನು ಪಡೆದ, ಕಮಂಡಲವನ್ನು ತಕ್ಕೊಂಡು ಅವರ ಹಿಂದೆಯೇ ಹೋದನು, ಆದರೆ ಬಹುದೂರ ಹೋದರೂ ಇವರು ನನ್ನನ್ನು ತಿರುಗಿ ಹೋಗುವುದಕ್ಕೆ ಅಪ್ಪಣೆಯನ್ನೀಯುವುದಿಲ್ಲ, ಎಂದು ಭೀತನಾಗಿ ನನ್ನನ್ನೂ ಇವರ ಸಂಗಡ ಕರಕೊಂಡು ಹೋಗುವರೋ ಏನೋ ತಿಳಿಯದು ನಾನು ಇನ್ನೆಷ್ಟು ದೂರ ಹೋಗಲಿ. ಇದಕ್ಕೊಂದು ಉಪಾಯವನ್ನು ಮಾಡಬೇಕೆಂದು ಯೋಚಿಸಿ, ಮಂತ್ರಿ ಪುತ್ರನಾದ ಪುಷ್ಪಡಾಳನು ಬಾಲ್ಯಕಾಲದ ನೆನಪನ್ನುಂಟು ಮಾಡುವ ಉದ್ದೇಶದಿಂದ ಅವರನ್ನು ಕುರಿತು—"ಸ್ವಾಮಿ! ನಾವಿಬ್ಬರು ಚಿಕ್ಕಂದಿನಲ್ಲಿ ಮಿತ್ರರಾಗಿದ್ದಾಗ ಆಟವಾಡಿದ ಕೆರೆಯಿದು, ಫಲಭರಿತವಾದ ಮಾವಿನ ಮರಗಳನ್ನು ನೋಡಿರಿ. ಈ ಭೂಭಾಗವು ಎಷ್ಟು ರಮಣೀಯವಾಗಿದೆ." ಇದು ಮೊದಲಾದ ಪೂರ್ವಪರಿಚಿತವಾದ ವಿಷಯಗಳನ್ನು ಹೇಳಿದರೂ ಅವರು ಏನೂ ಮಾತನಾಡದೆ, ಸುಮ್ಮನೆ ಹೋಗುತ್ತಿದ್ದರು. ಆಗ ಮಂತ್ರಿಕುಮಾರನು ಭಯಭೀತನಾಗಿ, ಇವರ ಮನದಲ್ಲಿ ಏನೋ ಬೇರೊಂದು ಯೋಚನೆಯಿರಬಹುದು, ಇನ್ನು ಇವರ ಎದುರಿಗೆ ಹೋಗಿ ನಿಲ್ಲುವುದೇ ಕೊನೆಯ ಉಪಾಯವು ಎಂದಾಲೋಚಿಸಿ, ಅವರೆದು

ರಿಗೆ ಹೋಗಿ ನಿಂತನು. ಮತ್ತು ಸಾಷ್ಟಾಂಗಪ್ರಣಾಮವನ್ನು ಮಾಡಿದನು ಆಗ ಮುನಿಗಳಿಗೆ ಈತನ ಮನಸ್ಸಿನಲ್ಲಿರುವ ವಿಷಯವು ಜ್ಞಾನದೃಷ್ಟಿಯಿಂದ ಗೊತ್ತಾಗಿದ್ದರೂ ತನ್ನ ಪೂರ್ವದ ಮಿತ್ರನನ್ನು ತನ್ನಂತೆ ಸಂಸಾರದಿಂದ ವಿರಕ್ತನನ್ನಾಗಿ ಮಾಡಬೇಕೆಂಬೀ ಉದ್ದೇಶದಿಂದ ಇಷ್ಟರವರೆಗೆ ಮೌನಸ್ಥರಾಗಿದ್ದರು. ಈಗಲಂತೂ ಮಾತನಾಡುವ ಪ್ರಸಂಗಬಂದೊದಗಿದ್ದರಿಂದ ಈಗ ಅವರು ಸಾಷ್ಟಾಂರವೆರಗಿದ ಪುಷ್ಪಡಾಳನನ್ನು ಆದರದಿಂದ ಎಬ್ಬಿಸಿ, ಸಂಸಾರದ ಆಸ್ಥಿರತೆಯನ್ನು ಚೆನ್ನಾಗಿ ಅವನಿಗೆ ವೈರಾಗ್ಯವುಂಟಾಗುವಂತೆ ಬೋಧಿಸಿದರು. ಆಗ ಆತನಿಗೆ ವೈರಾಗ್ಯಭಾವನೆಯು ಉಂಟಾಯಿತೆಂದು ತಿಳಿದು ಜಿನದೀಕ್ಷೆಯನ್ನು ಕೊಟ್ಟರು. ಆತನು ಮುಂದೆ ಕೆಲವು ದಿವಸಗಳ ವರೆಗೆ ಅವರ ಸಮೀಪದಲ್ಲಿದ್ದು ಶಾಸ್ತ್ರಾಭ್ಯಾಸವನ್ನು ಮಾಡಿ ಸಂಯಮವನ್ನು ಉತ್ತಮ ರೀತಿಯಿಂದ ಪರಿಪಾಲಿಸುತ್ತಿದ್ದನು. ಪರಂತು ಆತನ ಪ್ರೀಯಪತ್ನಿಯಾದ ಏಕಾಕ್ಷೀ ಸೋಮಿಲೆಯ ಸ್ಮರಣೆಯು ಮಾತ್ರ ಆಗಾಗ್ಗೆ ಉಂಟಾಗುತ್ತಿತ್ತು. ಅವಳ ಮೂರ್ತಿಯು ಪದೇ ಪದೇ ಅವನ ಕಣ್ಣೆದುರಿಗೆ ತೋರುತ್ತಿತ್ತು. ವಾಚಕರೇ! ಪುಷ್ಪಡಾಳನು ಸಂಯಮಿಯಾಗಿದ್ದರೂ ಆತನ ಮನಸ್ಸು ಯಾವಾಗಲೂ ತನ್ನ ಪತ್ನಿಯ ಕಡೆಗೆ ಎಳೆಯುತ್ತಿತ್ತೆಂದರೆ, ಆ ಹಿತಾಹಿತಗಳನ್ನು ತಿಳಿಯದಂತೆ ಮಾಡುವ ಮನೋಭವನಿಗೂ ಮೋಹಕ್ಕೂಪಂಚೇಂದ್ರಿಯ ವಿಷಯಭೋಗಗಳಿಗೂ ಧಿಃಕ್ಕಾರವಿರಲಿ!

ಅನಂತರ ಹನ್ನೆರಡು ವರ್ಷಗಳ ವರೆಗೆ ಅವರಿಬ್ಬರೂ ತಪಸ್ಸನ್ನು ಮಾಡಿದರು. ಆ ಮೇಲೆ ವಾರಿಷೇಣಮುನೀಶ್ವರರು ಪುಷ್ಪಡಾಳನನ್ನು ಸಂಗಡ ಕರಕೊಂಡು ತೀರ್ಥಯಾತ್ರೆಗೆ ಹೊರಟು ಹೋದರು. ಒಂದು ದಿನ ಗುರುಶಿಷ್ಯರೀರ್ವರೂ ವಿಹಾರಮಾಡುತ್ತಾ ಶ್ರೀ ವರ್ಧಮಾನಸ್ವಾಮಿಯ ಸಮವಸರಣಸಭೆಗೆ ಬಂದರು. ಅಲ್ಲಿ ಜಿನೇಶ್ವರನನ್ನು ನಾನಾವಿಧವಾಗಿ ಸ್ತುತಿಸಿ ನಮಸ್ಕಾರವನ್ನು ಮಾಡಿದರು. ಇಷ್ಟರಲ್ಲಿ ಒಬ್ಬ ಗಂಧರ್ವನು ಮಹಾವೀರ ಸ್ವಾಮಿಯನ್ನು ಕುರಿತು—"ಪ್ರಭುಗಳೇ! ತಾವು ಮೂವತ್ತು ವರ್ಷಗಳ ವರೆಗೆ ಈ ಭೂದೇವಿಯೆಂಬ ಸ್ತ್ರೀಯೊಡನೆ ಸುಖವನ್ನು ಅನುಭೋಗಿಸಿ, ಆಕಸ್ಮಾತ್ತಾಗಿ ತ್ಯಜಿಸಿದ ಕಾರಣ ಅವಳು ಅತ್ಯಂತ ವಿರಹಾಕುಲಳಾಗಿ

ತನಗಾದ ದುಃಖವನ್ನು ನದಿಯಪ್ರವಾಹದ ಗರ್ಜನೆಯರೂಪದಿಂದ ವ್ಯಕ್ತ ಪಡಿಸುತ್ತಿರುವಳು" ಎಂದು ಉತ್ಪ್ರೇಕ್ಷಾಲಂಕಾರದಿಂದ ಸ್ತುತಿಸಿದನು. ಇದನ್ನು ಕೇಳಿದ ಪುಷ್ಪಡಾಳನೆಂಬ ಲಘುವೃತ್ತಿಯು ಈ ಗಂಧರ್ವನ ವ್ಯಂಗ ರೂಪವಾದ ಸ್ತುತಿಯು ನನಗೆ ಸಂಬಂಧಿಸುತ್ತದೆ. ನಾನು ನಿಜವಾಗಿಯೂ ನನ್ನ ಪತ್ನಿಯನ್ನು ಬಿಟ್ಟು ದೀಕ್ಷಾಬದ್ಧನಾದ್ದರಿಂದ ಆಕೆಯು ವಿರಹಾಗ್ನಿ ಯಿಂದ ತಪಿಸುತ್ತಿರುವಳು. ಎಲ್ಲಿ ವ್ರತ! ಎತ್ತಣ ಮನಿದೀಕ್ಷೆ! ಇವುಗಳಿಂ ದೇನೂ ಪ್ರಯೋಜನವಿಲ್ಲ. ಆಕೆಯ ಮುಖಾವಲೋಕನೆಯನ್ನು ಮಾಡಿ ಇಂದಿಗೆ ೧೨ ವರ್ಷಗಳಾದುವು. ಆದಕಾರಣ ನಾನು ಪುನಃ ಗೃಹಸ್ಥಾಶ್ರಮಿಯಾಗಿ ಆಕೆಯನ್ನು ಸಂತೈಸಿ ಕೆಲವುಕಾಲ ಆಕೆಯೊಡನೆ ಸುಖವನ್ನನುಭವಿಸಿ ಆ ಮೇಲೆ ಮುನಿದೀಕ್ಷೆಯನ್ನು ಸ್ವೀಕರಿಸುವುದು ಯೋಗ್ಯವು, ಎಂದು ತನ್ನ ಮನೆಗೆ ಹೋಗಲು–ಸನ್ನದ್ಧನಾದನು. ಆಗ ವಾರಿಷೇಣಮುನಿಯು ಈತನ ಪರಿಣಾಮದ ಸ್ಥಿತ್ಯಂತರವನ್ನು ತಕ್ಷಣವೇ ತಿಳಿದು, ಸ್ವಲ್ಪ ತಾಳು! ನಿನಗೆ ಮನೆಗೆ ಹೋಗಲು ನಾನೇ ಅಪ್ಪಣೆಯನ್ನು ಕೊಡುತ್ತೇನೆ." ಎಂದು ಹೇಳಿ ಆತನನ್ನು ಸಂತೈಸಿ, ವಾರಿಷೇಣಮುನಿಯು ವಿಚಾರ ಮಾಡಿದ್ದೇನಂದರೆ, ಈತನ ಪರಿಣಾಮ ಸ್ಥಿರಪಡಿಸಬೇಕೆಂದು ಮುನಿದೀಕ್ಷೆಯನ್ನು ಕೊಟ್ಟೆನು. ಆದರೆ ಈತನ ಮನಸ್ಸು ದಿನದಿನಕ್ಕೆ ಚಂಚಲವಾಗುತ್ತಿದೆ. ಯಾವಾಗಲೂ ಈತನ ಪತ್ನಿಯ ಯೋಚನೆಯೇ. ಇವನನ್ನು ದಾರಿಗೆ ತರುವ ಉಪಾಯವು ಯಾವದು? ಎಂದಾಲೋಚಿಸಿ, ವಾರಿಷೇಣಮುನಿಯು ಮಂತ್ರಿಕುವರನನ್ನು ಕರಕೊಂಡು ತನ್ನಪಟ್ಟಣದತ್ತಕಡೆ ಹೋದನು. ಅಲ್ಲಿಗೆ ಹೋದ ಮೇಲೆ ಒಂದು ದಿನ ತನ್ನ ಮನೆಗೆ ಹೋಗುವ ಉದ್ದೇಶದಿಂದ ಪುಷ್ಪಡಾಳನನ್ನು ಸಂಗಡ ಕರಕೊಂಡು ಹೋಗುತ್ತಿರಲು ವಾರಿಷೇಣಮುನಿಯ ತಾಯಿಯಾದ ಚೇಳಿನೀದೇವಿಯು ಅಕಸ್ಮಾತ್ತಾಗಿ ತಮ್ಮಲ್ಲಿಗೆ ಬರುವ ಗುರುಶಿಷ್ಯರನ್ನು ಕಂಡು ಚಕಿತಳಾಗಿ ಇದೇನು ವಾರಿಷೇಣನು ಚಾರಿತ್ರಭ್ರಷ್ಟನಾಗಲಿಲ್ಲವಷ್ಟೇ? ಒಳ್ಳಿದು ಪರೀಕ್ಷಿಸುವೇನೆಂದು, ಅವರು ಬರುವುದಕ್ಕೆ ಮೊದಲೇ ಅವರಿಗೆ ಕೂತುಕೊಳ್ಳುವುದಕ್ಕಾಗಿ ಒಂದು ಬಂಗಾರದ ಒಂದು ಮರದ, ಈ ರೀತಿಯಾಗಿ ಎರಡು ಮಣೆಗಳನ್ನಿರಿಸಿದಳು. ಅಷ್ಟರಲ್ಲಿ ಗುರುಶಿಷ್ಯರೀರ್ವರೂ

ಮನೆಗೆ ಬಂದು ವಾರಿಷೇಣಮುನಿಯು ಮರದ ಮಣೆಯ ಮೇಲೆಯೂ ಪುಷ್ಪಡಾಳಮುನಿಯು ಬಂಗಾರದ ಮಣೆಯ ಮೇಲೆಯೂ ಕೂತುಕೊಂಡರು. ಇದನ್ನು ನೋಡಿದ ಕೂಡಲೇ ಚೇಲನಾದೇವಿಯ ಸಂಶಯವು ಪರಿಹಾರವಾಯಿತು. ಪರಂತು ಈ ಸುವರ್ಣಾಸನದಲ್ಲಿ ಕುಳಿತಿರುವ ಮುನಿಗಳ ಆಚರಣೆಯು ವಿರುದ್ಧವಾದುದು. ಇವರು ಬಾಹ್ಯದಲ್ಲಿ ಮುನಿಗಳಂತೆ ತೋರಿದರೂ ಇವರ ಪರಿಣಾಮವು ನಿರ್ಮಲವಾಗಿಲ್ಲವು, ಎಂದು ಆಲೋಚಿಸುವಷ್ಟರಲ್ಲಿ ವಾರಿಷೇಣಮುನಿಯು ತನ್ನ ಮಧುರವೂ ಮನೋಹರವೂ ಆದ ವಚನಗಳಿಂದ ಆ ಸಾಧ್ವಿಯನ್ನು ಸಂತೈಸಿದನು. ಮತ್ತು ತನ್ನ ಎಲ್ಲಾ ಸ್ತ್ರೀಯರನ್ನು ಉತ್ತಮವಾದ ವಸ್ತ್ರಾಭರಣಗಳಿಂದಲಂಕರಿಸಿ ತನ್ನೆದುರಿಗೆ ಕರೆತರುವಂತೆ ಹೇಳಿದನು. ಈ ಮಾತನ್ನು ಕೇಳಿದೊಡನೆಯೇ ಚೇಲನಾರಾಣಿಯು ಆಶ್ಚರ್ಯಭರಿತಳಾಗಿ, “ಮುನಿಗಳು ಹೀಗೆ ಹೇಳಲು ಕಾರಣವೇನು ? ಹೇಗಾದರೂ ಇರಲಿ ಮುನಿಗಳ ಆಜ್ಞೆಯಂತೆ ವರ್ತಿಸಲೇಬೇಕು” ಎಂದು ಯೋಚಿಸಿ, ಅತ್ಯಂತ ಸುಂದರಿಯರೂ ಶೀಲವಿಭೂಷಿತರೂ ಸರ್ವಾಭರಣಭೂಷಿತರೂ ಆದ ತನ್ನ ಮೂವತ್ತೆರಡು ಮಂದಿ ಸ್ತ್ರೀಯರನ್ನು ಚೆನ್ನಾಗಿ ಅಲಂಕರಿಸಿ, ವಾರಿಷೇಣಮುನಿಗಳ ಎದುರಿಗೆ ತಂದು ನಿಲ್ಲಿಸಿದಳು. ಆಗ ಅವರೆಲ್ಲರೂ ಮುನಿಗಳಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಸಾಲಾಗಿ ಕುಳಿತುಕೊಂಡರು. ಆ ಮೇಲೆ ದೃಢಚಿತ್ತರಾದ ಆ ವಾರಿಷೇಣಮುನಿಗಳು ತಮ್ಮ ನಾಮಧಾರಿಯಾದ ಶಿಷ್ಯರನ್ನು ಕುರಿತು “ಎಲೈ ಮುನಿಯೇ ! ತಾವು ಚಂಚಲಚಿತ್ತರಾಗಿ ಮುನಿಧರ್ಮವನ್ನೂ ಪರಿತ್ಯಜಿಸಿ ಯಾವ ಸಂಸಾರ ಭೋಗಕ್ಕೋಸ್ಕರ ಮನೆಗೆ ಹೋಗಲು ಸಿದ್ಧರಾಗಿರುವಿರೋ, ಅದಕ್ಕಿಂತಲೂ ಎಷ್ಟೋ ಪಾಲು ಹೆಚ್ಚಾದ ನನ್ನ ಈ ಯುವರಾಜಪದವಿಯನ್ನೂ ವಿಸ್ತಾರವಾದ ರಾಜ್ಯವನ್ನೂ, ನಿಮ್ಮ ಏಕಾಕ್ಷಿಯಾದ ಸೋಮಿಲೆಗಿಂತ ಸುಂದರಿಯರಾದ ಮೂವತ್ತೆರಡು ಮಂದಿ ಸ್ತ್ರೀಯರನ್ನೂ ನೀವು ಸ್ವೀಕರಿಸಬೇಕು. ಆಗ ನಿಮಗೆ ಈ ಸಂಸಾರದಲ್ಲೆಷ್ಟು ಸುಖವಿದೆಯೆಂದು ಗೊತ್ತಾಗುವುದು. ಆಗ ನನ್ನ ಪದವಿ ಶ್ರೇಷ್ಠವೋ ? ಅಥವಾ ತಮ್ಮ ಮಾರ್ಗವು ಶ್ರೇಷ್ಠವೋ ಎಂದು ತಮಗೆ ತಿಳಿಯದಿರದು. ಇಷ್ಟೇ ನನ್ನ ವಿನಂತಿ ಮತ್ತೊಂದಿಲ್ಲ”

ಎಂದು ಹೇಳಿದ ವಾರಿಷೇಣ ಮುನಿಗಳ ಮಾತನ್ನು ಕೇಳಿ ಪುಷ್ಪಡಾಳಮು ನಿಯು ಬಹಳ ಲಜ್ಜಿತರಾಗಿ ಪಶ್ಚಾತ್ತಾಪದಿಂದ "ಭೋ! ಸ್ವಾಮಿನ್ ತಮ್ಮನ್ನು ಎಷ್ಟು ಹೊಗಳಿದರೂ ತೀರದು. ತಾವು ಜಿನಶಾಸ್ತ್ರದ ಮರ್ಮ ವನ್ನು ತಿಳಿದವರಾಗಿದ್ದೀರಿ. ತಮ್ಮ ಅಮೃತಮಯವಾದ ಉಪದೇಶದಿಂದ ನನ್ನ ಮೋಹವೆಲ್ಲ ನಾಶವಾಯಿತು. ನನ್ನ ಭ್ರಮೆಯು ದೂರವಾಯಿತು. ಇಂತಹ ಅಗಣಿತವಾದ ವೈಭವವನ್ನು ತಾವು ತೃಣೀಕರಿಸಿ, ಉತ್ತ ಮವಾದ ತಪಶ್ಚರ್ಯೆಯನ್ನು ಮಾಡುವ ತಮ್ಮಂತಹ ಸತ್ಪುರುಷರಿಗೆ ಯಾವದು ತಾನೇ ಅಸಾಧ್ಯವು. ನಾನು ಮಾತ್ರ ಜನ್ಮಾಂಧನು. ನಾನು ಒಮ್ಮೆ ತಪೋರತ್ನವನ್ನು ಗ್ರಹಣ ಮಾಡಿಯೂ ನನ್ನ ಏಕಾಕ್ಷಿಯಾದ ಸೋಮಿಲೆಯು ಚಿತ್ತದಿಂದ ದೂರವಾಗಲಿಲ್ಲ. ನಾನು ಹನ್ನೆರಡು ವರ್ಷ ತಪಸ್ಸುಮಾಡಿಯೂ ನಿಷ್ಫಲವೇ ಸರಿ. ತಾವು ದಯಾಳುಗಳು. ನನ್ನ ಎಲ್ಲಾ ಅಪರಾಧವು ದೂರ ವಾಗುವ ಪ್ರಾಯಶ್ಚಿತ್ತವು ತಮ್ಮಿಂದ ದೊರೆಯಬೇಕೆಂದು ಸವಿನಯ ಪ್ರಾ ರ್ಥನೆಯಾಗಿದೆ." ಎಂದು ಹೇಳಿದನು. ಈ ಪ್ರಕಾರವಾದ ಪುಷ್ಪಡಾಳಮು ನಿಯ ಮಾತುಗಳನ್ನು ಕೇಳಿ ಮಹಾಬುದ್ಧಿಶಾಲಿಯೂ ನಿಶ್ಚಲವೃತ್ತಿಯೂ ಆದ ವಾರಿಷೇಣಮುನಿಗಳು ತಾವು ಮಾಡಿದ ಪ್ರಯತ್ನವು ಸಾರ್ಥಕವಾ ಯಿತೆಂದು ಮನದಲ್ಲಿ ಆನಂದಪಟ್ಟು, ಎಲೈ ಮುನಿಯೇ! ಸ್ವಲ್ಪ ಧೈರ್ಯ ವಂತರಾಗಿರಿ. ಈ ರೀತಿಯಾಗಿ ಶೋಕವನ್ನು ಮಾಡಬೇಡಿರಿ. ಈ ಸಂಸಾರಿ ಪ್ರಾಣಿಯು ಮೋಹನೀಯ ಕರ್ಮಕ್ಕೆ ವಶೀಭೂತನಾಗಿ ಎಷ್ಟು ಬುದ್ಧಿವಂ ತನೂ ವಿದ್ವಾಂಸನೂ ಆದರೂ ಸಂಸಾರವಿಷಯಗಳಲ್ಲಿ ಮೋಹಗೊಳ್ಳುತ್ತಾನೆ. ತಮ್ಮ ಪರಿಣಾಮದಲ್ಲಿ ಸ್ಥಿತ್ಯಂತರವಾದುದನ್ನು ನೋಡಿ ನನಗೆ ಸಂತೋಷ ವೆನಿಸುತ್ತದೆ. ಆದುದರಿಂದ ಯೋಗ್ಯವಾದ ಪ್ರಾಯಶ್ಚಿತ್ತವಿಧಿಯಿಂದ ಪುನಃ ಶುದ್ಧೀಕರಿಸಿಕೊಳ್ಳಬಹುದು." ಎಂದು ಹೇಳಿ ಸಮಯೋಚಿತವಾದ ಭಾಷಣ ಗಳಿಂದ ಆತನಿಗೆ ಧೈರ್ಯವನ್ನು ಕೊಟ್ಟು, ಆ ವೇಳೆ ಶಾಸ್ತ್ರಾನುಸಾರವಾಗಿ ಪ್ರಾಯಶ್ಚಿತ್ತವಿಧಿಯಿಂದ ಪುನರ್ದೀಕ್ಷೆಯನ್ನು ಗ್ರಹಣ ಮಾಡಿಸಿದರು. ಈ ರೀತಿಯಾಗಿ ಚಾರಿತ್ರದಿಂದ ಭ್ರಷ್ಟರಾದ ಪುಷ್ಪಡಾಳರನ್ನು ಪುನಃ ಅದೇ ಚಾರಿತ್ರದಲ್ಲಿ ಸ್ಥಿರವಾಗುವಂತೆ ಮಾಡಿದರು. ಆ ಮೇಲೆ ಪುಷ್ಪಡಾಳಮುನಿ

ಯು ಗುರೂಪದೇಶದಿಂದ ಮಹಾವೈರಾಗ್ಯಸಂಪನ್ನರಾಗಿ ದುಃಸಹವಾದ ತಪಸ್ಸನ್ನು ಮಾಡಿ, ಕ್ರಮವಾಗಿ ಅಚಿಂತ್ಯವೂ ನಿರ್ಬಾಧವೂ ಆದ ಮೋಕ್ಷ ಸುಖವನ್ನು ಹೊಂದಿದರು. ಇತ್ತ ವಾರಿಷೇಣಮುನಿಗಳೂ ಪರಿಶುದ್ಧವಾದ ತಪಶ್ಚರ್ಯದಿಂದ ಸಿದ್ಧಪದವಿಯನ್ನು ಹೊಂದಿದರು.

ಈ ಕಥೆಯಿಂದ ನಮಗುಂಟಾಗುವ ಬೋಧೆಯೇನಂದರೆ—ವಾರಿಷೇಣ ಮುನಿಯು ದೀಕ್ಷಾಬದ್ಧನಾದ ಮೇಲ್ಕೆ ತನಗೇನೂ ಪ್ರಯೋಜನವಿಲ್ಲದ ವಿಷಯವನ್ನು ಕೈಕೊಂಡು, ತನ್ನ ನೂತನ ಪತ್ನಿಯ ವಿರಹವ್ಯಥೆಯಿಂದ ದುಃಖ ಪಡುತ್ತಿರುವ ಪುಷ್ಪಡಾಳನನ್ನು ಯುಕ್ತಿಪ್ರಯುಕ್ತಿಗಳಿಂದ ಸನ್ಮಾರ್ಗಕ್ಕೆ ತಂದು ಮುನಿದೀಕ್ಷೆಯಲ್ಲಿ ಸ್ಥಿರಗೊಳಿಸಿದನು. ಆದುದರಿಂದ ಭವ್ಯಜೀವಿಗಳಿರಾ! ನೀವು ಕೂಡ ಸಂಸಾರಮೋಹದಲ್ಲಿ ಭ್ರಮಿಸಿ, ಧರ್ಮಭ್ರಷ್ಟರಾಗುವ ಪ್ರಾಣಿಗಳನ್ನು ಸದುಪದೇಶದಿಂದ ತಮ್ಮತಮ್ಮ ಚಾರಿತ್ರದಲ್ಲಿ ಸುಸ್ಥಿತೀಕರಣವನ್ನು ಮಾಡಬೇಕೆಂದಭಿಪ್ರಾಯವು.

## [೭] ವಾತ್ಸಲ್ಯ ಅಂಗದ ವರ್ಣನೆ.

**ಸ್ವಯೂಥ್ಯಾನ್ಪ್ರತಿ ಸದ್ಭಾವಸನಾಥಾಪೇತಕೈತವಾ ||**
**ಪ್ರತಿಪತ್ತಿರ್ಯಥಾಯೋಗ್ಯಂ | ವಾತ್ಸಲ್ಯಮಭಿಲಪ್ಯತೇ ||೧೭||**

**ಅನ್ವಯಾರ್ಥ:—** ಸ್ವಯೂಥ್ಯಾನ್ ಪ್ರತಿ—ತನ್ನ ಧರ್ಮದವರನ್ನು ಕುರಿತು ಸದ್ಭಾವಸನಾಥಾ—ಸಮೀಚೀನವಾದ ಪರಿಣಾಮದೊಡನೆ ಕೂಡಿದುದೂ ಅಪೇತಕೈತವಾ—ಕಪಟರಹಿತವೂ ಯಥಾಯೋಗ್ಯಂ- ಅವರವರ ಯೋಗ್ಯತೆಯನ್ನನುಸರಿಸಿ ಪ್ರತಿಪತ್ತಿ—ಆದರಸತ್ಕಾರವನ್ನು ಮಾಡುವಿಕೆಯು ವಾತ್ಸಲ್ಯಂ—ವಾತ್ಸಲ್ಯ ಅಂಗವೆಂದು ಅಭಿಲಪ್ಯತೇ—ಹೇಳಲ್ಪಡುತ್ತದೆ.

**ತಾತ್ಪರ್ಯ:—** ಸಮ್ಯಗ್ದರ್ಶನಚಾರಿತ್ರರೂಪವಾದ ರತ್ನತ್ರಯಗಳನ್ನು ಧಾರಣೆ ಮಾಡಿರುವ ಋಷಿ, ಅರ್ಜಿಕಾ, ಶ್ರಾವಕ, ಶ್ರಾವಿಕೆಯರೆಂಬ ಚತುಸ್ಸಂಘಗಳಿಗೆ ಶುಭಪರಿಣಾಮದಿಂದ ಕಪಟವಿಲ್ಲದೆ ಅವರವರ ಯೋಗ್ಯತೆಗೆ ಅನುಸಾರವಾಗಿ, ಅವರು ಬಂದರೆ ಎದ್ದು ನಿಲ್ಲುವಿಕೆಯು, ಮುಂದೆ ಹೋಗುವಿಕೆಯು, ನಮಸ್ಕರಿಸುವಿಕೆಯು, ಗುಣಸ್ತವನವನ್ನು ಮಾಡುವಿಕೆಯು ಕೈಮುಗಿಯುವಿಕೆಯು, ಅವರ ಆಜ್ಞೆಯನ್ನು ಪಾಲಿಸುವಿಕೆಯು, ಉನ್ನತ

ವಾದ ಆಸನದಲ್ಲಿ ಕೂಡ್ರಿಸುವಿಕೆಯು ಮೊದಲಾದ ಆದರ–ಸತ್ಕಾರವನ್ನು ಮಾಡುವುದಕ್ಕೆ ವಾತ್ಸಲ್ಯಅಂಗವೆಂದು ಹೆಸರು. ಈ ಗುಣದಲ್ಲಿ ವಿಷ್ಣುಕುಮಾರ ಮುನಿಗಳು ಪ್ರಸಿದ್ಧಿಯನ್ನು ಹೊಂದಿರುವರು.

## ೭ ವಿಷ್ಣುಕುಮಾರಮುನಿಗಳ ಕಥೆ.

ಪೂರ್ವದಲ್ಲಿ ಭಾರತವರ್ಷದಲ್ಲಿ ಪ್ರಸಿದ್ಧವಾದ ಅವಂತಿಯೆಂಬ ದೇಶದಲ್ಲಿ ಉಜ್ಜಯನೀ ಎಂಬುದೊಂದು ಪಟ್ಟಣವಿತ್ತು. ಅಲ್ಲಿ ಪ್ರಜಾಹಿತದಕ್ಷನೂ ದಯಾಳುವೂ ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ಪರಿಪಾಲಿಸುವವನೂ ಜೈನಧರ್ಮಿಯೂ ಆದ ಶ್ರೀವರ್ಮನೆಂಬ ರಾಜನು ರಾಜವನ್ನಾಳುತ್ತಿದ್ದನು. ಆತನಿಗೆ ಅತ್ಯಂತ ಸುಂದರಿಯೂ ಶೀಲವತಿಯೂ ಜೈನಧರ್ಮದಲ್ಲಿ ದೃಢಭಕ್ತಿಯುಳ್ಳವಳೂ ಆದ ಶ್ರೀಮತಿಯೆಂಬ ಪಟ್ಟಮಹಿಷಿಯಿದ್ದಳು ರಾಜನು ಪರಮನ್ಯಾಯಸಂಪನ್ನನಾಗಿದ್ದನು. ಆದರೆ ಅವನ ಮಂತ್ರಿಗಳು ನಾಲ್ವರಿದ್ದು ಅವರು ಮಹಾದುಷ್ಟರಾಗಿದ್ದರು ಅವರು ಬಲಿ, ಬೃಹಸ್ಪತಿ, ಪ್ರಹ್ಲಾದ, ನಮುಚಿಗಳೆಂದು ಕ್ರಮವಾಗಿ ವೈಷ್ಣವ, ಚಾರ್ವಾಕ, ಶೈವ, ಮತ್ತು ಬೌದ್ಧಮತಾನುಯಾಯಿಗಳಾಗಿದ್ದರು. ಆದ್ದರಿಂದ ಶ್ರೀವರ್ಮ ರಾಜನು ಸರ್ಪಗಳಿಂದ ವೇಷ್ಟಿತವಾದ ಚಂದನವೃಕ್ಷದಂತೆ ಶೋಭಿಸುತ್ತಿದ್ದನು.

ಒಂದು ದಿವಸ ಆ ನಗರದ ಬಾಹ್ಯೋದ್ಯಾನದಲ್ಲಿ ಅವಧಿಜ್ಞಾನಸಂಪನ್ನರಾದ ಅಕಂಪನಾಚಾರ್ಯರೆಂಬ ಮುನಿಗಳು ತಮ್ಮ ಏಳನೂರು ಮಂದಿ ಶಿಷ್ಯರಿಂದೊಡಗೂಡಿ ಬಂದಿಳಿದರು. ಕೂಡಲೇ ಅವರು ತಮ್ಮ ಅವಧಿಜ್ಞಾನದಿಂದ ಆಲೋಚಿಸಿದ್ದೇನೆಂದರೆ, ಈ ಪಟ್ಟಣದ ಅರಸನ ಮಂತ್ರಿಗಳು ಜೈನಧರ್ಮದ ಮೇಲೆ ದ್ವೇಷಿಗಳಾಗಿರುವರು. ಒಂದು ವೇಳೆ ಅವರು ವಾದ ಮಾಡಲು ಬಂದರೆ ನಮ್ಮಲ್ಲಿ ಯಾರೂ ಅವರೊಡನೆ ವಾದವನ್ನು ಮಾಡಬಾರದು, ಯಾಕಂದರೆ ಅದರಿಂದ ನಮ್ಮ ಸಂಘದ ಮುನಿಗಳಿಗೆ ಹಾನಿಯುಂಟಾಗುವ ಸಂಭವವಿದೆ. ಆದಕಾರಣ ನಮ್ಮ ಸಂಘಕ್ಕೆ ಮೊದಲೇ ತಿಳಿಸುವುದು ಉಚಿತವೆಂದು ಎಲ್ಲರನ್ನು ಕರೆದು ಅಜ್ಞಾಪಿಸಿದ್ದೇನಂದರೆ—"ಎಲೈ ಮುನಿಗಳಿರಾ! ಈ ಊರ ಅರಸನು ಬಹುಜನರನ್ನು ಕೂಡಿಕೊಂಡು ನಮ್ಮ ದರ್ಶನಕ್ಕೆ ಬಂದಾನು ಅಗ ನಿಮ್ಮಲ್ಲಿ ಯಾರೊಬ್ಬನೂ ರಾಜನೊಡನೆ ಅಥವಾ ಇತರ

ರೊಡನೆ ಮಾತನಾಡಬಾರದು. ಕೇವಲ ಧ್ಯಾನಸ್ಥರಾಗಿರಬೇಕು. ಇಲ್ಲದಿದ್ದರೆ ನಮ್ಮೆಲ್ಲರ ನಾಶವಾದೀತು" ಎಂದರು ಈ ರೀತಿಯಾಗಿ ಗುರುವಿನ ಅಜ್ಞೆಯಂತೆ ಎಲ್ಲರೂ ಕಾಯೋತ್ಸರ್ಗಧ್ಯಾನದಲ್ಲಿ ನಿರತರಾದರು. ಯಾವ ಶಿಷ್ಯರು ಗುರುಗಳ ಆಜ್ಞೆಯನ್ನು ಶಿರಸಾವಹಿಸಿ ಅದರಂತೆ ವರ್ತಿಸುವರೋ ಅವರೇ ಧನ್ಯರು.

ರಾಜ್ಯೋದ್ಯಾನದಲ್ಲಿ ದಿಗಂಬರಮುನಿಗಳು ಶಿಷ್ಯಸಮೂಹದೊಂದಿಗೆ ಬಂದಿಳಿದ ವಾರ್ತೆಯು ನಗರದಲ್ಲೆಲ್ಲಾ ಹಬ್ಬಿತು. ಆದಕಾರಣ ನಗರವಾಸಿಗಳೆಲ್ಲಾ ಆನಂದಭರಿತರಾಗಿ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ಮುನಿಗಳ ವಂದನೆಗೋಸ್ಕರ ರಾಜ್ಯೋದ್ಯಾನದ ಕಡೆಗೆ ಹೋಗುತ್ತಿದ್ದರು. ಪೂಜಾದ್ರವ್ಯಗಳನ್ನು ತೆಗೆದುಕೊಂಡು ಉಲ್ಲಾಸದಿಂದ ಹೋಗುವ ಹೆಜ್ಜಾದ ಜನಸ್ತೋಮವನ್ನು ರಾಜರು ಕಂಡು ಇಷ್ಟು ಜನರು ಎಲ್ಲಿಗೆ ಹೋಗುತ್ತಿರಬಹುದೆಂದು ಯೋಚಿಸುತ್ತಿರುವಷ್ಟರಲ್ಲಿ ಉದ್ಯಾನಪಾಲಕನು ಅರಸನ ಸಮೀಪಕ್ಕೆ ಬಂದು ಶಿರಬಾಗಿ ಅತಿವಿನಯದಿಂದ "ಮಹಾಸ್ವಾಮಿ ! ನಮ್ಮ ಉದ್ಯಾನವಲ್ಲಿ ಅವಧಿಜ್ಞಾನಸಂಪನ್ನರಾದ ಅಕಂಪನಾಚಾರ್ಯರೆಂಬ ದಿಗಂಬರ ಮುನಿಗಳು ತಮ್ಮ ಶಿಷ್ಯಸಮೂಹದಿಂದೊಡಗೂಡಿ ದಯಮಾಡಿಸಿರುವರು. ಅವರ ತಪಃ ಪ್ರಭಾವದಿಂದ ಉದ್ಯಾನದಲ್ಲಿರುವ ಎಲ್ಲಾ ವೃಕ್ಷಗಳು ಫಲಪುಷ್ಪಗಳಿಂದ ಶೋಭಿಸುತ್ತಿರುವುವು. ಬೇರೆ ಬೇರೆ ಋತುಗಳಲ್ಲಿ ಫಲಪುಷ್ಪಗಳನ್ನು ಬಿಡುವ ಗಿಡಬಳ್ಳಿಗಳೆಲ್ಲವೂ ಮುನಿಗಳ ಆಗಮನದಿಂದ ಫಲಪುಷ್ಪಭರಿತಗಳಾಗಿ ವಿಲಕ್ಷಣವಾಗಿ ಶೋಭಿಸುತ್ತಿರುವುವು. ಅದನ್ನು ವರ್ಣಿಸಲು ಯಾರಿಂದಲೂ ಅಸದಳವು. ಈ ಜನಸಮೂಹವೆಲ್ಲ ಅವರ ವಂದನಾನಿಮಿತ್ತವಾಗಿಯೇ ಹೋಗುತ್ತಿರುವುದು" ಎಂಬೀ ಮಾತನ್ನು ಕೇಳಿ ರಾಜನಿಗೂ ಮುನಿಗಳ ದರ್ಶನಕ್ಕೆ ಹೋಗಬೇಕೆಂಬ ಇಚ್ಛೆಯುಂಟಾಯಿತು. ಆಗ ಆತನು ತನ್ನ ಮಿಥ್ಯಾಜ್ಞಾನಿಯಾದ ಬಲಿಯೆಂಬ ಮಂತ್ರಿಯನ್ನು ಕುರಿತು, "ಎಲೇ ಸಚಿವನೇ ! ಮುನಿಗಳ ದರ್ಶನಕ್ಕೆ ಹೋಗೋಣ" ಎಂದೆನ್ನಲು ಅವನು ಹೇಳಿದ್ದೇನಂದರೆ, ರಾಜನ್ !

**ನ ವೇದಾದಪರಂ ತತ್ವಂ। ನ ಶ್ರದ್ಧಾದಪರೋ ವಿಧಿಃ ॥**
**ನ ಯಜ್ಞಾದಪರೋ ಧರ್ಮೋ। ನ ದ್ವಿಜಾದಪರೋ ಯತಿಃ ॥**

ವೇದಕ್ಕೆ ಸಮಾನವಾದ ತತ್ವವು ಮತ್ತೊಂದಿಲ್ಲವು, ಭಕ್ತಿಗೆ ಸಮಾನವಾದ ವಿಧಿಯು ಇನ್ನೊಂದಿಲ್ಲವು, ಯಜ್ಞಕ್ಕೆ ಸಮಾನವಾದ ಧರ್ಮವು ಬೇರೊಂದಿಲ್ಲವು. ಬ್ರಾಹ್ಮಣಗಿಂತಲೂ ಬೇರೆಯಾದ ಮುನಿಗಳಿಲ್ಲವು, ಎಂದು ಶಾಸ್ತ್ರವಚನವಿರುತ್ತದೆ. ಇದನ್ನು ಕೇಳಿ ಪ್ರಹ್ಲಾದನೆಂಬ ಮಂತ್ರಿಯು ತನ್ನ ಅಗಾಧಜ್ಞಾನವನ್ನು ಪ್ರಕಟಿಸಬೇಕೆಂಬ ಉದ್ದೇಶದಿಂದ:—

**ಅದ್ವೈತಾನ್ನ ಪರಂ ತತ್ವಂ। ನ ದೇವಃ ಶಂಕರಾತ್ಪರಃ ॥**
**ಶೈವಶಾಸ್ತ್ರಾತ್ಪರಂ ನಾಸ್ತಿ। ಭುಕ್ತಿಮುಕ್ತಿಪ್ರದಂ ವಚಃ ॥**

ಅದ್ವೈತಕ್ಕಿಂತಲೂ ಉತ್ಕೃಷ್ಟವಾದ ಬೇರೊಂದು ತತ್ವವಿಲ್ಲವು. ಶಂಕರನಿಗಿಂತಲೂ ಬೇರೆಯಾದ ದೇವರಿಲ್ಲವು. ಇಹಲೋಕದ ಭೋಗ್ಯ ಪದಾರ್ಥಗಳನ್ನು ಕೊಡುವ ಮತ್ತು ಪರಲೋಕಸಂಬಂಧಿಯಾದ ಮುಕ್ತಿಯನ್ನೀಯುವ ವಚನಗಳು ಶೈವಶಾಸ್ತ್ರಕ್ಕಿಂತಲೂ ಇತರ ಶಾಸ್ತ್ರಗಳಲ್ಲಿ ದೊರೆಯುವಂತಿಲ್ಲವು. ಇವರಂತೆಯೇ ನಮುಚಿ ಬೃಹಸ್ಪತಿಗಳೆಂಬ ಮಂತ್ರಿಗಳೂ ತಮ್ಮ ತಮ್ಮ ಅಮೋಘವಾದ ಜ್ಞಾನವನ್ನು ಪ್ರಕಟಪಡಿಸಿದರು. ಇದನ್ನೆಲ್ಲಾ ಕೇಳಿ ರಾಜನು ಕ್ರೋಧದಿಂದ ಸಂತಪ್ತನಾದನು. ಆದರೂ ಅದನ್ನು ಯಾರಿಗೂ ತಿಳಿಸದೆ, ಅವರನ್ನು ಕುರಿತು—ನೀವು ನಿಮ್ಮ ದಿವ್ಯಜ್ಞಾನವನ್ನು ನನ್ನೆದುರಿಗೇಕೆ ಹೇಳುವಿರಿ? ಪಂಡಿತರೆದುರಿಗೆ ವಾದ ವಿವಾದಗಳನ್ನು ಮಾಡಿದರೆ ಆಗ ನಿಮ್ಮ ವಾಚಾಲತ್ವವು ಗೋತ್ತಾಗುವುದು. ವ್ಯರ್ಥವಾಗಿ ಪ್ರಲಪಿಸುವುದರಿಂದೇನು? ಎಂದು ಹೇಳಿದನು. ಆಗ ಬಲಿಯೆಂಬ ಮಂತ್ರಿಯು ಸುಮ್ಮನಿರದೆ ಮತ್ತೂ ತನ್ನ ಪ್ರೌಢಿಮೆಯನ್ನು ವ್ಯಕ್ತಪಡಿಸುವುದಕ್ಕೆ ಇನ್ನೂ ಕೆಲವು ಉತ್ತರಗಳನ್ನು ಕೊಟ್ಟನು. ಇವನ್ನು ಕೇಳಿ ರಾಜನು ಕೋಪಗೊಳ್ಳದೆ ಶಾಂತಚಿತ್ತದಿಂದ ಇಲ್ಲಿ ವ್ಯರ್ಥವಾಗಿ ಮಾತನಾಡುವುದರಿಂದೇನು? ಇದರ ಫಲಿತಾಂಶವು ವಾದವಿವಾದದಲ್ಲಿಯೇ ಗೊತ್ತಾಗುವುದು. ಇಷ್ಟಾದ ಮೇಲೆ ಯಾರೂ ಉತ್ತರವನ್ನೀಯದೆ ರಾಜನೊಂದಿಗೆ ಮುನಿಗಳ ದರ್ಶನಕ್ಕೆ ಹೊರಟರು. ಇತ್ತ ರಾಜನು ಆನಂದಭೇರಿಯನ್ನು ಹೊಯಿಸಿ, ತನ್ನೊಂದಿಗೆ

ಪ್ರಮುಖರಾದ ನಾಗರಿಕರನ್ನು ಪರಿವಾರ ಜನರನ್ನೂ ಅಂತಃಪುರದ ಸ್ತ್ರೀ ಸಮಾಜವನ್ನೂ ಕೂಡಿಕೊಂಡು ಪೂಜಾದ್ರವ್ಯಗಳೊಂದಿಗೆ ತನ್ನ ವಿಜಯ ಶೇಖರವೆಂಬ ಗಜಾರೂಢನಾಗಿ ಬಹಳ ವಿಜೃಂಭಣೆಯಿಂದ ಮುನಿಗಳ ದರ್ಶನಕ್ಕೆ ಹೊರಟನು. ಈ ರೀತಿಯಾಗಿ ಸಮಸ್ತ ಜನರೊಡನೆ ಹೋಗುತ್ತಾ ಉದ್ಯಾನದ ಸಮೀಪಕ್ಕೆ ಬರಲು ಆನೆಯಿಂದಿಳಿದು ತನ್ನ ರಾಜಚಿಹ್ನೆಗಳನ್ನೆಲ್ಲಾ ತೊರೆದು ಉಪವನಕ್ಕೆ ಪ್ರವೇಶಿಸಿದನು. ಆ ಮೇಲೆ ಅಲ್ಲಿ ಧ್ಯಾನ ಮಗ್ನರಾಗಿರುವ ಮುನಿಗಳನ್ನು ನೋಡಿ ಸಂತೋಷದಿಂದ ಅವರೆಲ್ಲರಿಗೂ ಬೇರೆಬೇರೆಯಾಗಿ ನಮಸ್ಕಾರವನ್ನು ಮಾಡಿದನು. ಅವರೆಲ್ಲರೂ ತಮ್ಮ ಗುರುಗಳ ಆಜ್ಞೆಯಂತೆ ಮೌನಸ್ಥರಾಗಿದ್ದುದರಿಂದ ರಾಜನಿಗೆ ಯಾರೂ ಆಶೀರ್ವಾದವನ್ನೀಯಲಿಲ್ಲ. ಆದ ರಾಜನು ಅದನ್ನು ನೋಡಿ, ಇವರು ಸಾಧುಗಳು ನಿಸ್ಪೃಹರು. ಇವರಿಗೆ ರಾಜನೂ ರಂಕನೂ ಸರಿಸಮಾನರೇ, ಇವರೆಲ್ಲರೂ ಧ್ಯಾನಸ್ಥರಾಗಿರುವುದರಿಂದ ಆಶೀರ್ವಾದವನ್ನಿತ್ತಿರಲಿಕ್ಕಿಲ್ಲ. ಈ ರೀತಿಯಾಗಿ ಸ್ತುತಿಮಾಡುತ್ತಾ ಹೊರಡಲುದ್ಯುಕ್ತನಾದನು. ಆದರೆ ರಾಜನ ಈ ಕೃತಿಯು ಜೈನಧರ್ಮದ್ವೇಷಿಗಳಾದ ಆ ನಾಲ್ವರು ಮಂತ್ರಿಗಳಿಗೆ ಸಹನವಾಗದೆ, ಉತ್ಕೃಷ್ಟಚಾರಿತ್ರಧಾರಿಗಳಾದ ಮುನಿಗಳನ್ನು ನಿಂದಿಸಲು ಪ್ರಾರಂಭಿಸಿ ರಾಜನನ್ನು ಕುರಿತು—"ಪ್ರಭುಗಳೇ! ಇವರು ಜ್ಞಾನಶೂನ್ಯರಾದ್ದರಿಂದ ಏನೂ ಮಾತನಾಡಲರಿಯದೆ ನಮ್ಮನ್ನು ಮೋಸಗೊಳಿಸುವುದಕ್ಕಾಗಿ ಮೌನರಾಗಿರುವರು. ಯಾಕೆಂದರೆ, ನಮ್ಮಂತಹ ವಿದ್ವಾಂಸರೊಡನೆ ವಾದಮಾಡುವ ಪ್ರಸಂಗ ಬಂದರೆ ಅಪಮಾನವಾಗುವುದು. ಎಂಬುದಾಗಿ ಮೌನಿಗಳಾಗಿರುವರು, ಇವರು ನಿಜವಾಗಿ ವಿದ್ಯಾವಂತರಾಗಿದ್ದರೆ ಮಾತನಾಡದೆ ಇರುತ್ತಿದ್ದಿಲ್ಲ." ಈ ರೀತಿಯಾಗಿ ಪರಮಸಾಧುಗಳನ್ನು ನಿಂದಿಸಿ—ತಿರಸ್ಕರಿಸುತ್ತಾ ರಾಜನೊಡನೆ ಹೊರಟರು. ಯಥಾರ್ಥವಾಗಿ ನೋಡಿದರೆ, ಇಂತಹ ಪರಮಪೂಜ್ಯರೂ ಇಂದ್ರಾದಿಗಳಿಂದಲೂ ವಂದ್ಯರೂ ಆದ ಪರಮಸಾಧುಗಳನ್ನು ನಿಂದಿಸುವವರು ಪಾಪಿಗಳೆಂದರೆ ವಿರೋಧವೆನಿಸದು. ಅದಿರಲಿ. ಅವರು ಈ ಲೋಕದಲ್ಲಿ ನಾನಾವಿಧವಾದ ದುಃಖಗಳಿಗೆ ಭಾಗಿಗಳಾಗುವುದಲ್ಲದೆ, ಪರಜನ್ಮದಲ್ಲಿಯೂ ರೌರವ ನರಕದುಃಖಗಳಿಗೀಡಾಗುವರು.

ಇಲ್ಲಿ ಯಾವಾಗ ಮುನಿಗಳ ಸಮೂಹವು ಉದ್ಯಾನಕ್ಕೆ ಬಂದು ಇಳಿಯಿತೋ ಆಗ ಗುರುಗಳಾದ ಅಕಂಪನಾಚಾರ್ಯರು ಈಗ ನೂತನವಾಗಿ ದೀಕ್ಷೆಯನ್ನು ಸ್ವೀಕರಿಸುವ ಶ್ರುತಸಾಗರೆಂಬ ಮುನಿಗಳನ್ನು ಕುರಿತು- ಹೇಳಿದ್ದೇನಂದರೆ, "ನಾವೆಲ್ಲರೂ ಉಪವಾಸವನ್ನು ಧಾರಣೆ ಮಾಡಿ ಧ್ಯಾನಸ್ಥರಾಗಿರುವೆವು. ಆದ ಕಾರಣ ನೀವೊಬ್ಬರೇ ನಗರದೊಳಗೆ ಹೋಗಿ ಆಹಾರವನ್ನು ಸ್ವೀಕರಿಸಿಕೊಂಡು ಬನ್ನಿ " ಎಂದರು. ಅದನ್ನು ಕೇಳಿ ಗುರುಗಳ ಆಜ್ಞೆಯಂತೆ ನಗರದೊಳಗೆ ಹೋಗಿ ಆಹಾರವನ್ನು ಸ್ವೀಕರಿಸಿಕೊಂಡು ಬರುತ್ತಿರುವಾಗ ಇವರನ್ನು ಆ ದುಷ್ಟರಾದ ಮಂತ್ರಿಗಳು ನೋಡಿ, ರಾಜನನ್ನು ಕುರಿತು— "ನೋಡಿ ಚೆನ್ನಾಗಿ ತಿಂದು ಪುಷ್ಟಿಯಾದ ಎತ್ತಿನಂತೆ ಇತ್ತಕಡೆ ಬರುತ್ತಿದ್ದಾನೆ " ಎಂಬೀ ಮಾತನ್ನು ಕೇಳಿದ ಕೂಡಲೆ ಆ ಮುನಿಗಳಿಗೆ ಬಹಳ ವ್ಯಸನವಾಗಿ ಯೋಚಿಸಿದ್ದೇನಂದರೆ, ಈ ಗರ್ವಿಷ್ಠರಾದ ಬ್ರಾಹ್ಮಣರು ನಮಗೆ ಅಪಮಾನ ಮಾಡಬೇಕೆಂದಿರುವರು ಮತ್ತು ನಮ್ಮೊಡನೆ ವಾದವಿವಾದವನ್ನು ಮಾಡಬೇಕೆಂದು ಇಚ್ಛೆ ಇರಬಹುದು. ಇರಲಿ. ಇವರಿಗೆ ಅಂತಹ ಅಗಾಧ ಜ್ಞಾನವಾದರೂ ಎಲ್ಲಿ ಬಂತು? ಈಗ ಪ್ರತ್ಯಕ್ಷವಾಗಿ ರಾಜನೆದುರಿನಲ್ಲಿಯೇ ಅನೇಕಾಂತವಾದದಿಂದ ಇವರ ಅಲೌಕಿಕವಾದ ತತ್ವವನ್ನು ಪೂರ್ಣ ರೀತಿಯಿಂದ ಖಂಡಿಸುವೆನೆಂದು ರಾಜನೆದುರಿಗೆ ತನ್ನ ವಾಕ್ಚಾತುರ್ಯದಿಂದ ಅನೇಕ ಪ್ರಕಾರವಾದ ವಾದವನ್ನು ಮಾಡಿ ಗರ್ವಿಷ್ಠರಾದ ಮಂತ್ರಿಗಳನ್ನು ಜಯಿಸಿದರು. ಆಗ ಮಂತ್ರಿಗಳು ಬಹಳ ಲಜ್ಜಿತರಾಗಿ ತಮಗುಂಟಾದ ಅಪಮಾನವನ್ನು ಹೇಗೆ ಹೋಗಲಾಡಿಸಿಕೊಳ್ಳುವುದೆಂದು ಪರಸ್ಪರ ವಿಚಾರ ಮಾಡಿಕೊಳ್ಳುತ್ತಿದ್ದರು. ನಮ್ಮ ಸಾಧುಗಳು ಗರ್ವಿಷ್ಠರಾದ ಮಂತ್ರಿಗಳನ್ನು ಜಯಿಸಿದರೆಂದು ರಾಜನಿಗೆ ಬಹಳ ಆನಂದವಾಯಿತು. ಒಬ್ಬ ಸೂರ್ಯನು ಸರ್ವ ಲೋಕದ ಅಂಧಕಾರವನ್ನು ದೂರ ಮಾಡುವಂತೆ ಓರ್ವ ಶ್ರುತಸಾಗರಮುನಿಗಳೇ ಈ ಮಂತ್ರಿಮಂಡಲವನ್ನು ಜಯಿಸಿದರೆ ನಿಜವಾಗಿಯೂ ಆಶ್ಚರ್ಯವೂ ಸಂತೋಷವೂ ಉಂಟಾಗದಿರದು.

ಇತ್ತ ಶ್ರುತಸಾಗರಮುನಿಗಳು ವಾದದಲ್ಲಿ ತನಗೆ ಜಯವುಂಟಾದ್ದರಿಂದ ಆನಂದಿತರಾಗಿ ಸ್ವಸ್ಥಾನಕ್ಕೆ ತೆರಳಿ ಅಲ್ಲಿ ನಡೆದ ಸಂಗತಿಗಳನ್ನೆಲ್ಲಾ ತಮ್ಮ

ಗುರುಗಳಿಗೆ ನಿರೂಪಿಸಿದರು. ಇದನ್ನು ಕೇಳುತ್ತಲೇ ಅಕಂಪನಾಚಾರ್ಯರು "ಅಕಟಕಟಾ! ಇದರಿಂದ ನಿಮಗೂ ನಮ್ಮ ಇಡೀ ಸಂಘಕ್ಕೂ ಹಾನಿಯುಂಟಾಗುವ ಕಾಲ ಬಂದೊದಗಿತು. ಇರಲಿ. 'ಗತಂ ನ ಶೋಚಯೇತ್'ಎಂಬೀ ಉಕ್ತಿಯಂತೆ ಇನ್ನು ಶೋಕಿಸಿ ಫಲವೇನು? ಈಗ ನಮ್ಮ ಸಂಘದ ಸಂರಕ್ಷಣೋಪಾಯವನ್ನು ನೋಡಬೇಕು. ಆದ್ದರಿಂದ ಮರಳಿ ನೀವು ರಾತ್ರಿಯಲ್ಲಿ ಅದೇ ವಾದವಿವಾದವಾದ ಸ್ಥಳದಲ್ಲಿ ಕಾಯೋತ್ಸರ್ಗಧ್ಯಾನಸ್ಥರಾಗಿ ನಿಂದಿರಬೇಕು. ಆಗ ನಮ್ಮ ಸಂಘಕ್ಕೆಉಂಟಾಗುವ ಸಂಕಟವು ದೂರವಾಗಬಹುದು. ಎಂದರು. ತನ್ನಂತರ ಗುರುಗಳ ಆಜ್ಞೆಯಂತೆ ಶ್ರುತಸಾಗರಮುನಿಗಳು ಸಂಘದ ಸಂರಕ್ಷಣೆಗೋಸ್ಕರ ಆ ಸ್ಥಳದಲ್ಲಿ ಧ್ಯಾನಸ್ಥರಾಗಿ ನಿಂತರು. ಆ ಮೇಲೆ ಮಂತ್ರಿಗಳು ನಮಗುಂಟಾದ ಅಪಮಾನದ ಪ್ರತೀಕಾರಕ್ಕೋಸ್ಕರ ಸಂಘದಲ್ಲಿರುವ ಎಲ್ಲಾ ಮುನಿಗಳನ್ನು ಕೊಲ್ಲಬೇಕೆಂದು ನಿಶ್ಚೈಸಿ ಕೈಯಲ್ಲಿ ಶಸ್ತ್ರಧಾರಣೆ ಮಾಡಿಕೊಂಡು ಹೊರಟರು. ಬರುವಾಗ ದಾರಿಯಲ್ಲಿ ಧ್ಯಾನಸ್ಥರಾಗಿರುವ ಶ್ರುತಸಾಗರಮುನಿಗಳನ್ನು ನೋಡಿ, ಇವನೇ ನಮಗೆ ಅಪಮಾನವನ್ನು ಮಾಡಿದವನು. ಮೊದಲು ಈತನನ್ನು ಕೊಲ್ಲಬೇಕು. ಆ ಮೇಲೆ ಇತರ ಮುನಿಗಳನ್ನು ಕೊಲ್ಲುವ ಎಂದು ಹೇಳಿ, ಆ ನಾಲ್ವರು ಮಂತ್ರಿಗಳು ಮುನಿಗಳಿಗೆ ಸುತ್ತುಹಾಕಿ ಒಂದೇ ಸಾರಿ ಎಲ್ಲರೂ ಶಸ್ತ್ರದಿಂದ ಹೊಡೆಯಬೇಕೆಂದಾಲೋಚಿಸಿ, ಶಸ್ತ್ರವನ್ನೆತ್ತಲು, ಆ ಮುನಿಗಳ ಪುಣ್ಯಪ್ರಭಾವದಿಂದ ನಗರರಕ್ಷಕರಾದ ದೇವತೆಗಳ ಆಸನವು ಕಂಪಾಯಮಾನವಾಗಿ, ಯಾರಿಗೋ ಮಹಾತ್ಮರಿಗೆ ಘೋರವಾದ ಸಂಕಟವು ಪ್ರಾಪ್ತವಾಗಿದೆ. ಅದನ್ನು ನಾವು ನಿವಾರಿಸಬೇಕೆಂದು ತಿಳಿದು, ಕೂಡಲೇ ಆ ಸ್ಥಳದಲ್ಲಿ ಪ್ರತ್ಯಕ್ಷವಾಗಿ ಬಂದು ತಮ್ಮ ಸಾಮರ್ಥ್ಯದಿಂದ ಆ ಮುನಿಗಳಿಗುಂಟಾದ ಉಪಸರ್ಗವನ್ನು ದೂರ ಮಾಡಿ, ಅವರನ್ನು ಕೊಲ್ಲುವುದಕ್ಕೆ ಮೇಲಕ್ಕೆತ್ತಲ್ಪಟ್ಟ ಕೈಗಳನ್ನು ಹಾಗೆಯೇ ಬಂಧಿಸಿ, ದೇವತೆಗಳು ಸ್ವಸ್ಥಾನಕ್ಕೆ ಹೊರಟುಹೋದರು.

ಪ್ರಾತಃಕಾಲದಲ್ಲಿ ಈ ವಿಚಾರವು ರಾಜನಿಗೆ ತಿಳಿಯು, ಮುನಿಗಳಿಗೆ ದುಷ್ಟಮಂತ್ರಿಗಳಿಂದುಂಟಾದ ಉಪಸರ್ಗದ ಸ್ಥಾನಕ್ಕೆ ಹೋದನು. ಅಲ್ಲಿ ಹೋಗುತ್ತಲೇ ಶಸ್ತ್ರಸಹಿತವಾಗಿ ಬಂಧನಾವಸ್ಥೆಯಲ್ಲಿರುವ ತನ್ನ ಮಂತ್ರಿ

ಗಳನ್ನು ನೋಡಿ ಕ್ರೋಧದಿಂದ ಹೇಳಿದ್ದೇನಂದರೆ "ಅಯ್ಯೋ! ಪಾಪಿಷ್ಠರೇ! ನಿರಪರಾಧಿಗಳಿಗೆ ಈ ರೀತಿಯಾಗಿ ಉಪಸರ್ಗವನ್ನುಂಟು ಮಾಡುವವರು ಈ ಲೋಕದಲ್ಲಿ ಭಯಂಕರವಾದ ಕಷ್ಟಕ್ಕೊಳಗಾಗುವುದಲ್ಲದೆ, ಪರಲೋಕ ದಲ್ಲಿಯೂ ಅತ್ಯಂತ ಘೋರವಾದ ನರಕದುಃಖಗಳಿಗೆ ಭಾಗಿಗಳಾಗುವರು. ಇವರಲ್ಲೇನೂ ಸಂಶಯವಿರಲಾರದು. ಸಾಮಾನ್ಯ ಪ್ರಾಣಿಹಿಂಸೆಯನ್ನು ಮಾಡುವ ದುಷ್ಟರ ಮುಖವನ್ನೂ ನೋಡುವುದು ಉಚಿತವಲ್ಲವು. ಹೀಗಿರಲು ಲೋಕವಂದ್ಯರಾದ ಈ ಮುನಿಗಳನ್ನು ಕೊಲ್ಲಬೇಕೆಂದು ಯತ್ನಿಸಿದ ಈ ಚಾಂಡಾಲರಾದ ನಿಮಗೆ ಯಾವತರದ ಶಿಕ್ಷೆಯನ್ನು ಕೊಟ್ಟರೂ ತೀರದು, ನಿಜವಾಗಿಯೂ ನಿಮಗೆ ಮರಣದಂಡನೆಯನ್ನೇ ಕೊಡಬೇಕು. ಪರಂತು. ನೀವು ನಿಮ್ಮ ವಂಶಪರಂಪರೆಯಿಂದ ಮಂತ್ರಿಗಳಾಗಿರುವಿರಿ. ಆದ್ದರಿಂದ ಮರ ಣದಂಡನೆಯನ್ನು ಕೊಡದೆ ನಿಮ್ಮನ್ನು ಅಪಮಾನಪೂರ್ವಕವಾಗಿ ದೇಶಾಂ ತರಕ್ಕೆ ಕಳುಹಿಸುವುದೇ ಲೇಸು ಎಂದು ಕೂಡಲೇ ಆ ಮಂತ್ರಿಗಳಿಗೆ ಅಂಗ ವಿಕಾರವನ್ನು ಮಾಡಿ ಕತ್ತೆಯ ಮೇಲೆ ಕೂಡ್ರಿಸಿ ಊರಲ್ಲೆಲ್ಲಾ ಮೆರವಣಿಗೆ ಮಾಡಿಸಿ, ದೇಶಾಂತರಕ್ಕೆ ಕಳುಹಿಸಿದನು. ಇಂತಹ ಪಾಪಿಗಳಿಗೆ ಹೀಗಾ ಗುವುದು ಯೋಗ್ಯವಾದುದೇ ಸರಿ, ಮುನಿಗಳ ಈ ರೀತಿಯಾದ ಅತಿಶಯ ವನ್ನು ನೋಡಿ ಭವ್ಯಜೀವಿಗಳೆಲ್ಲಾ ಆನಂದಭರಿತರಾಗಿ ಹೆಚ್ಚಾದ ಭಕ್ತಿ ಯಿಂದ ಜಯಜಯಕಾರವನ್ನು ಮಾಡಿದರು.

ಇತ್ತ ಕುರುಜಾಂಗಲವೆಂಬ ದೇಶದ ಹಸ್ತಿನಾಪುರವೆಂಬ ನಗರದಲ್ಲಿ ಬಹಳ ಧಾರ್ಮಿಕನೂ ನಿಷ್ಕಪಟಿಯೂ ಆದ ಮಹಾಪದ್ಮನೆಂಬ ರಾಜನು ರಾಜ್ಯವನ್ನಾಳುತ್ತಿದ್ದನು. ಆತನಿಗೆ ಸುಂದರಿಯೂ ಧರ್ಮಿಷ್ಠಳೂ ಆದ ಲಕ್ಷ್ಮೀಮತಿಯೆಂಬ ಪತ್ನಿಯೂ, ಇವರಿಗೆ ಪದ್ಮಕುಮಾರ ಮತ್ತು ವಿಷ್ಣು ಕುಮಾರನೆಂಬ ಇಬ್ಬರು ಪುತ್ರರೂ ಇದ್ದರು. ಈ ಮಹಾಪದ್ಮರಾಜನು ನ್ಯಾಯ ರೀತಿಯಿಂದ ಪ್ರಜೆಗಳನ್ನು ಪಾಲಿಸುತ್ತಾ ಸುಖದಿಂದಿರುತ್ತಿರಲೊಂದು ದಿನ ಆತನಿಗೆ ಕಾರಣಾಂತರದಿಂದ ಸಂಸಾರದಲ್ಲಿ ವೈರಾಗ್ಯವುಂಟಾಯಿತು. ಆತನ ದ್ವಿತೀಯ ಪುತ್ರನಾದ ವಿಷ್ಣುಕುಮಾರನಿಗೆ ಬಾಲ್ಯದಿಂದಲೂ ಜೈನಧರ್ಮ ದಲ್ಲಿ ಅಚಲವಾದ ದೃಢವಿಶ್ವಾಸವಿದ್ದುದರಿಂದ ಸ್ವಲ್ಪ ಕಾಲದಲ್ಲಿಯೇ ಹಲವು

ಜೈನಧರ್ಮ ಗ್ರಂಥಗಳನ್ನು ಅಧ್ಯಯನ ಮಾಡಿದ್ದನು. ಆದ್ದರಿಂದ ತನಗೂ ಆತ್ಮಕಲ್ಯಾಣವನ್ನು ಮಾಡಿಕೊಳ್ಳಬೇಕೆಂಬ ಇಚ್ಛೆಯುಂಟಾಗಿ ಆತನೂ ತನ್ನ ತಂದೆಯೊಡನೆ ಮುನಿದೀಕ್ಷೆಯನ್ನು ಸ್ವೀಕರಿಸಬೇಕೆಂದು ಅನುಮತಿಯನ್ನು ಕೇಳಿದನು. ರಾಜನೂ ತನ್ನ ಮಗನ ವೈರಾಗ್ಯಪೂರ್ಣವಾದ ವೃತ್ತಿಯನ್ನು ನೋಡಿ ಅನುಮತಿಯನ್ನಿತ್ತನು. ಅನಂತರ ಮಹಾಪದ್ಮರಾಜನು ತನ್ನ ರಾಜ್ಯ ಭಾರವನ್ನು ಪದ್ಮಕುಮಾರನೆಂಬ ಮಗನಿಗೆ ಕೊಟ್ಟು, ತಾನು ತನ್ನ ಕಿರೇ ಮಗನೊಡನೆ ಶ್ರುತಸಾಗರಚಂದ್ರರೆಂಬ ಮುನಿಗಳ ಸಮೀಪದಲ್ಲಿ ದೀಕ್ಷೆ ಯನ್ನು ಸ್ವೀಕರಿಸಿದರು. ಇವರೀರ್ವರೂ ಆನಂದದಿಂದ ಅತ್ಯಂತ ಘೋರ ವಾದ ತಪಶ್ಚರ್ಯೆಯನ್ನು ಮಾಡುತ್ತಿರಲು, ಕೆಲವು ಕಾಲದ ನಂತರ ವಿಷ್ಣು ಕುಮಾರಮುನಿಗಳಿಗೆ ತನ್ನ ಧ್ಯಾನದ ಬಲದಿಂದ 'ವೈಕ್ರಿಯಕ' ಋದ್ಧಿ ಯು ಪ್ರಾಪ್ತವಾಯಿತು.

ಇತ್ತ ಪದ್ಮರಾಜನು ನ್ಯಾಯದಿಂದ ರಾಜ್ಯವನ್ನು ಪರಿಪಾಲಿಸುತ್ತಿ ರಲು, ಕೆಲವು ದಿವಸಗಳನಂತರ ಆ ದುಷ್ಟರಾದ ಬ್ರಾಹ್ಮಣ ಮಂತ್ರಿಗಳು ಇಲ್ಲಿಗೆ ಬಂದು ರಾಜನ ಸಮೀಪದಲ್ಲಿ ತಮ್ಮ ಚಮತ್ಕಾರವನ್ನು ತೋರಿಸಿ ತಮಗೆ ಮಂತ್ರಿಪದವಿಯನ್ನು ಕೊಡಬೇಕೆಂದು ಬೇಡಿಕೊಂಡರು. ರಾಜನೂ ಅದಕ್ಕೆ ಸಮ್ಮತಿಸಿ ಮಂತ್ರಿಪದವಿಯನ್ನು ಕೊಟ್ಟನು. ಅನಂತರ ರಾಜನು ಏನೋ ವಿಶೇಷವಾದ ವ್ಯಸನದಿಂದ ಕೃಶವಾಗುತ್ತಾ ಬಂದನು. ಇದನ್ನು ನೋಡಿ ಬಲಿಯೆಂಬ ಮಂತ್ರಿಯು "ಮಹಾಸ್ವಾಮಿ! ತಾವು ಈ ರೀತಿ ಯಾಗಿ ದಿನೇದಿನೇ ಕೃಶವಾಗುವುದಕ್ಕೆ ಕಾರಣವೇನು? ತಮಗೆ ಅಂತಹ ಬಲವತ್ತರವಾದ ಹೃದ್ರೋಗವು ಅಥವಾ ವ್ಯಸನವು ಅದೇನಿದೆ? ಯದ್ಯಪಿ ಈ ವಿಷಯವು ನನ್ನಲ್ಲಿ ಹೇಳುವುದಕ್ಕೆ ಸಾಧ್ಯವಿದ್ದರೆ ತಿಳಿಸಬೇಕು ನಾನು ಆ ವಿಷಯದಲ್ಲಿ ನನ್ನ ಕೈಲಾದಮಟ್ಟಿಗೆ ಪ್ರಯತ್ನಿಸಿ ಸಂಕಟವನ್ನು ಪರಿಹ ರಿಸುವೆನು" ಇಂತೆಂದನು. ಆಗ ರಾಜನು ಈತನ ಮಾತನ್ನು ಕೇಳಿ ಸಂತು ಷ್ಟನಾಗಿ, "ನನಗೆ ಇನ್ನೇತರ ಚಿಂತೆಯೂ ಹೃದ್ರೋಗವೂ ಇರುವುದಿಲ್ಲವು ಪರಂತು ಕುಂಭನಗರದ ಅತಿ ದುಷ್ಟನಾದ ಸಿಂಹಬಲನೆಂಬ ರಾಜನು ನನ್ನ ರಾಜ್ಯದಲ್ಲಿ ಬಹು ಉಪದ್ರವವನ್ನುಂಟು ಮಾಡುತ್ತಿರುವನು, ಅವನಿರುವ

ನಗರದ ಕೋಟೆಯು ಬಹಳ ಬಲವತ್ತರವಾಗಿರುವುದರಿಂದಲೂ ಅವನಲ್ಲಿ ಅತ್ಯಧಿಕವಾದ ಸೈನ್ಯಗಳಿರುವುದರಿಂದಲೂ ಜಯಿಸಲಶಕ್ಯನಾಗಿರುವನು. ಆದರೆ ಅವನನ್ನು ವಶಮಾಡಿಕೊಳ್ಳಲು ನಾನು ಬಹಳವಾಗಿ ಪ್ರಯತ್ನಿಸಿದೆನು. ಪರಂತು, ಸಾಧ್ಯವಾಗದೆ ಬಹಳ ವ್ಯಸನದಲ್ಲಿರುವೆನು. ನನಗೆ ಇದೊಂದೇ ಚಿಂತೆಯಲ್ಲದೆ ಇನ್ನೇತರ ಚಿಂತೆಯೂ ಇರುವುದಿಲ್ಲ" ವೆಂದನು. ಈ ಪ್ರಕಾರವಾದ ರಾಜನ ಮಾತನ್ನು ಕೇಳಿ ಬಲಿಯು ಆವೇಶದಿಂದೆದ್ದು ಹೇಳಿದ್ದೇನೆಂದರೆ "ಮಹಾಸ್ವಾಮಿ ! ಈಗ ನಾನೇನೋ ನನ್ನ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುವುದಿಲ್ಲವು. ಆದರೆ ನಾನು ತಮ್ಮ ಪುಣ್ಯಪ್ರಭಾವದಿಂದ ಅವಶ್ಯವಾಗಿಯೂ ಈ ಕಾರ್ಯವನ್ನು ನೆರವೇರಿಸುವೆನು. ಹೆಚ್ಚೇನೆನ್ನಲಿ. ಆ ದುಷ್ಟನನ್ನು ಜೀವಂತನನ್ನಾಗಿ ಹಿಡಿದು ತಂದು ತಮ್ಮ ಚರಣಕ್ಕರ್ಪಿಸುವೆನು ಆದಕಾರಣ ತಾವು ಇಂದಿನಿಂದ ಈ ವಿಷಯವಾಗಿ ಚಿಂತೆಯನ್ನು ತೊರೆದು ಆನಂದಿತರಾಗಬೇಕೆ"ಂದನು. ಈ ಪ್ರಕಾರವಾದ ಬಲಿಯ ಮಾತನ್ನು ಕೇಳಿ ರಾಜನು ಸಂತುಷ್ಟನಾಗಿ ಆತನನ್ನು ಆ ಕಾರ್ಯದಲ್ಲಿ ನಿಯೋಗಿಸಿ, ತಾನು ಸುಖವಾಗಿದ್ದನು.

ಇತ್ತ ಆ ದುಷ್ಟಮಂತ್ರಿಯಾದ ಬಲಿಯು ರಾಜನ ಅಪ್ಪಣೆಯನ್ನು ಪಡೆದು, ಹೊರಟು, ಆ ಸಿಂಹಬಲರಾಜನ ನಗರಕ್ಕೆ ಪ್ರವೇಶಿಸಿಅಲ್ಲಿ ಗುಪ್ತ ರೀತಿಯಿಂದ ವಾಸಮಾಡಿಕೊಂಡಿದ್ದನು. ಆ ಮೇಲೆ ಅಭೇದ್ಯವಾದ ಕೋಟೆಯನ್ನೊಮ್ಮೆ ನಿರೀಕ್ಷಿಸಿ, ಇದನ್ನು ಹೇಗೆ ಭೇದಿಸುವುದೆಂದು ವಿಚಾರದಲ್ಲಿದ್ದನು. ಪರಂತು, ಆತನು ತೀಕ್ಷ್ಣವಾದ ಬುದ್ಧಿಯುಳ್ಳವನಾದ್ದರಿಂದ ಆತನಿಗೆ ಒಂದು ಯುಕ್ತಿಯು ತೋರಿ, ಕೂಡಲೇ ಅದಕ್ಕೆ ಬೇಕಾದ ಸಾಮುಗ್ರಿಗಳನ್ನು ಸಿದ್ಧಪಡಿಸಿಕೊಂಡು, ರಾಜನು ಸ್ವಸ್ಥವಾಗಿ ಅರಮನೆಯಲ್ಲಿರುವ ಸಮಯದಲ್ಲಿ ಬಹುಚಾತುರ್ಯದಿಂದ ಕೋಟೆಯನ್ನು ಭೇದಿಸಿ ಒಳಗೆ ಪ್ರವೇಶಿಸಿ, ಸಿಂಹಬಲರಾಜನನ್ನು ಹಿಡಿದನು. ಪರಂತು, ಸಿಂಹಬಲರಾಜನಿಗೆ ಅಕಸ್ಮಾತ್ತಾಗಿ ಈ ಘಟನೆಯಿಂದ ಆಶ್ಚರ್ಯವೂ ಗಾಬರಿಯೂ ಉಂಟಾಗಿ, ತನ್ನ ಮನಸ್ಸಿನಲ್ಲಿಯೇ ಶತ್ರುಪಕ್ಷದವರ ಚಾತುರ್ಯವನ್ನು ಬಹಳವಾಗಿ ಪ್ರಶಂಸೆ ಮಾಡಿದನು.

ಸಿಂಹಬಲರಾಜನು ತನ್ನ ಕೈವಶವಾದ ಮೇಲೆ ಬಲಿಯು ಸಂತುಷ್ಟನಾಗಿ ಆತನನ್ನು ಬಹಳ ಜಾಗ್ರತೆಯಿಂದ ತನ್ನ ರಾಜ್ಯಕ್ಕೆ ತೆಗೆದುಕೊಂಡು ಹೋಗಿ, ಪದ್ಮರಾಜನ ಮುಂದೆ ನಿಲ್ಲಿಸಿ, ಮಹಾಸ್ವಾಮಿ! ತಮ್ಮ ಶತ್ರುವಾದ ಸಿಂಹಬಲರಾಜನನ್ನು ಬಂಧಿಸಿ, ತಮ್ಮ ಸಮಕ್ಷಮದಲ್ಲಿ ತಂದಿರುವೆನು. ಇಂತೆಂದನು. ಇದನ್ನು ನೋಡಿ ರಾಜನು ಬಹಳ ಸಂತೋಷದಿಂದ ಬಲಿಯನ್ನು ಕುರಿತು, "ಇಂದು ನೀವು ನಿಜವಾಗಿಯೂ ಅಪೂರ್ವವಾದ ಉಪಕಾರವನ್ನು ಮಾಡಿದಿರಿ. ನೀವು ಬಹು ಶೂರರು. ನಿಮ್ಮ ಇಂದಿನ ಕಾರ್ಯದಿಂದ ಬಹಳ ಸಂತುಷ್ಟನಾಗಿರುವೆನು. ಆದ್ದರಿಂದ ಇಂತಹ ಮಂಗಲವಾದ ಸಮಯದಲ್ಲಿ ನಿಮಗಿಷ್ಟವಾದ ವರವನ್ನು ಬೇಡಿಕೊಳ್ಳಬೇಕೆಂದನು. ಆಗ ಬಲಿಯು ಅಂದದ್ದೇನಂದರೆ, "ಮಹಾಸ್ವಾಮಿ! ತಮ್ಮಾಜ್ಞೆಯನ್ನು ನಾನು ಶಿರಸಾ ವಹಿಸುವೆನು. ಆದರೆ, ನನಗೆ ಬೇಕಾದ ಆ ವರವನ್ನು ಬೇಡಿಕೊಳ್ಳುವೆನೆ"ಂದನು ರಾಜನೂ ಅದಕ್ಕೆ ಸಮ್ಮತಿಸಿ, ಶತ್ರುವನ್ನು ಬಂಧನದಲ್ಲಿರಿಸುವಂತೆ ಆಜ್ಞಾಪಿಸಿ ಅಂತಃಪುರಕ್ಕೆ ತೆರಳಿದನು. ಇತ್ತ ಬಲಿಯೂ ರಾಜನ ಅನುಮತಿಯಂತೆ ಸಿಂಹಬಲನನ್ನು ಕಾರಾಗೃಹದಲ್ಲಿರಿಸಿದನು.

ಇತ್ತ ಉಜ್ಜಯಿನೀನಗರದಲ್ಲಿ ಅವಧಿಜ್ಞಾನಸಂಪನ್ನರಾದ ಅಕಂಪನಾಚಾರ್ಯರು ಕೆಲವು ದಿವಸಗಳಿದ್ದು ತಮ್ಮ ಸಂಘದೊಡನೆ ವಿಹಾರ ಮಾಡುತ್ತಾ ಅಲ್ಲಲ್ಲಿ ಭವ್ಯಪ್ರಾಣಿಗಳಿಗೆ ಜೈನಧರ್ಮೋಪದೇಶವನ್ನು ಮಾಡುತ್ತಾ ಪದ್ಮರಾಜನ ಶಹರಿನ ಹೊರಗಿರುವ ಹೇಮವೆಂಬ ಪರ್ವತದ ಗುಹೆಯಲ್ಲಿ ಚಾತುರ್ಮಾಸಕ್ಕೋಸ್ಕರ ಬಂದಿಳಿದರು. ಈ ವಾರ್ತೆಯನ್ನು ನಗರವಾಸಿಗಳೆಲ್ಲಾ ಕೇಳಿ ಸಂತುಷ್ಟರಾಗಿ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ಮುನಿಗಳ ದರ್ಶನಕ್ಕೆ ಹೊರಟರು. ಪರಂತು, ಈ ಸಮಾಚಾರವು ಮತ್ಸರಿಗಳೂ ದುಷ್ಟರೂ ಆದ ಬಲಿ ಮೊದಲಾದ ಮಂತ್ರಿಗಳಿಗೆ ತಿಳಿದು, ಅಂದಿನ ವೈರವನ್ನು ತೀರಿಸುವ ಸಮಯವು ಇದೇ. ಆದರೆ, ರಾಜನು ಜೈನಧರ್ಮಭಕ್ತನಾಗಿರುವನು. ಅವನೆಂದೂ ನಮಗೆ ಸಹಾಯವನ್ನು ಕೊಡಲಾರನು. ಮಾಡತಕ್ಕದ್ದೇನು? ಎಂದು ಯೋಚಿಸುತ್ತಿರಲು, ಇಷ್ಟರಲ್ಲಿ ಬಲಿಗೆ ತನಗೆ ಕೊಟ್ಟಿರುವ ವರವು ಜ್ಞಾಪಕಕ್ಕೆ ಬಂದು, ಇದನ್ನು ಈಗ ಕೇಳಬೇಕು. ಅಂದರೆ

ಏಳು ದಿವಸಗಳ ವರೆಗೆ ತಮ್ಮ ರಾಜ್ಯಭಾರವನ್ನು ನನ್ನ ಸ್ವಾಧೀನಕೊಟ್ಟು ತಾವು ಸ್ವಸ್ಥರಾಗಿರಬೇಕೆಂದು ವರದಾನವನ್ನು ಬೇಡಬೇಕೆಂದು ಆಲೋಚಿಸಿ ಮಾರಣೆ ದಿವಸ ಬಲಿಯು ರಾಜನಿಗೆ ತನ್ನವರದಾನದ ಸ್ಮರಣೆಯನ್ನು ಮಾಡಿ ಹೇಳಿದ್ದೇನಂದರೆ, "ಮಹಾಸ್ವಾಮಿ! ತಾವು ಏಳು ದಿವಸಗಳವರೆಗೆ ತಮ್ಮ ರಾಜ್ಯಭಾರವನ್ನು ನನ್ನ ಸ್ವಾಧೀನ ಮಾಡಿ ತಾವು ಸ್ವಸ್ಥರಾಗಿರಬೇಕು. ಇಷ್ಟೇ ನನ್ನ ಬೇಡುವಿಕೆಯು ಇಂತೆಂದನು" ಆದರೆ, ರಾಜನಿಗೆ ಈ ಪ್ರಕಾರವಾದ ವರವನ್ನು ಕೇಳುವುದರಲ್ಲೇನೋ ಕಪಟವಿರಬಹುದೆಂಬ ಸಂಶಯವೂ ಆಶ್ಚರ್ಯವು ಉಂಟಾಯಿತು. ಪರಂತು ಮಾಡುವುದೇನು? ಹೇಳಿದ ಮಾತಿಗೆ ತಪ್ಪಲಿಕ್ಕಾಗುವುದೇ? ಕೊನೆಗೆ ರಾಜನು ನಿರುಪಾಯನಾಗಿ ತನ್ನ ರಾಜ್ಯವನ್ನು ಬಲಿಯ ಸ್ವಾಧೀನವನ್ನು ಮಾಡಿ, ತಾನು ಅಂತಃಪುರನಿವಾಸಿಯಾದನು. ಅನಂತರ ಈ ದುಷ್ಟಮಂತ್ರಿಗಳ ಕಪಟತಂತ್ರವನ್ನು ತಿಳಿದು ಮನಸ್ಸಿಗೆ ಬಹಳ ವ್ಯಸನವಾದರೂ ಉಪಾಯವಿಲ್ಲದೆ ಸುಮ್ಮನಿದ್ದನು. ಇರಲಿ. ದೈವಗತಿಯನ್ನು ಯಾರಿಂದಲೂ ಮೀರಲಶಕ್ಯವಷ್ಟೇ?

ಈ ಪ್ರಕಾರವಾಗಿ ಪಾಪಿಗಳಾದ ಆ ಬ್ರಾಹ್ಮಣ ಮಂತ್ರಿಗಳು ಕಪಟರೀತಿಯಿಂದ ರಾಜ್ಯಭಾರವು ತಮ್ಮ ಸ್ವಾಧೀನವಾದನಂತರ ಆ ಮುನಿಗಳ ಸಮೂಹವನ್ನು ನಾಶ ಮಾಡುವ ಉಪಾಯವನ್ನು ಯೋಚಿಸಿ, ಮೊದಲು, ಆ ಮುನಿಸಂಘವಿರುವ ಪರ್ವತದ ಸುತ್ತಲೂ ಒಂದು ಆವರಣವನ್ನು ಮಾಡಿಸಿ, ಅದರೊಳಗೆ ಯಜ್ಞನಿಮಿತ್ತವಾಗಿ ಎಂದು, ಸೌಧೆಯಿಂದ ಒಂದು ವಿಸ್ತೀರ್ಣವಾದ ಮಂಟಪವನ್ನೂ ಅದರೊಳಗೊಂದು ಯಜ್ಞಕುಂಡವನ್ನೂ ಮಾಡಿಸಿ, ಬ್ರಾಹ್ಮಣರಿಂದ ವೇದಪಾರಾಯಣವನ್ನು ಮಾಡಿಸುತ್ತಾ ಪಶುಯಜ್ಞವನ್ನು ಮಾಡಲಾರಂಭಿಸಿದರು, ಈ ರೀತಿಯಾದ ಧೂಮಸಮೂಹದಿಂದಲೂ ಪಶುಹಿಂಸೆಯ ದುರ್ಗಂಧವಾದ ವಾಯುವಿನಿಂದಲೂ ನೀಚರಾದ ಬ್ರಾಹ್ಮಣರೂ ತಮ್ಮ ಉಚ್ಛಿಷ್ಟವನ್ನೂ ಕಲ್ಲುಗಳನ್ನೂ ಬಿಸಾಡುವದರಿಂದಲೂ ಆ ನಿರಪರಾಧಿಗಳಾದ ಮುನಿಗಳಿಗೆ ಹಲವು ವಿಧವಾದ ಉಪದ್ರವವನ್ನು ಕೊಡಲಾರಂಭಿಸಿದರು, ಆದರೆ, ಅವರಿಗೆ ಆ ಸಮಯದಲ್ಲಿ ಇಂತಹ ಭಯಂಕರವಾದ ಉಪಸರ್ಗವುಂಟಾದರೂ ಮನಸಿನಲ್ಲಿ ಏನೂ ವಿಕಾರವನ್ನು

ಹೊಂದದೆ ಧೈರ್ಯಸ್ಥರಾಗಿ, "ನಮಗುಂಟಾದ ಉಪಸರ್ಗವು ದೂರವಾಗುವ ವರೆಗೆ ನಮಗೆ ಅನ್ನಾಹಾರಗಳು ವರ್ಜ್ಯವಾಗಿರಲೆ''ಂದು ಪ್ರತಿಜ್ಞೆ ಮಾಡಿ ಧ್ಯಾನದಲ್ಲಿ ಮಗ್ನರಾಗಿದ್ದರು, ಇತ್ತ ಬಲಿಯು ಎಲ್ಲಾಮುನಿಗಳನ್ನು ಹೋಮಾಗ್ನಿಯಲ್ಲಿ ದಹನ ಮಾಡುವ ವಿಷಯದಲ್ಲಿ ಉದ್ಯುಕ್ತನಾಗಿದ್ದನು.

ಮಿಥಿಲಾನಗರದಲ್ಲಿ ಜಿಷ್ಣುಸೂರಿಗಳೆಂಬ ಅವಧಿಜ್ಞಾನಿಗಳಾದ ಮುನಿಗಳ ಸಮೀಪದಲ್ಲಿ ಅಷ್ಟಾಂಗನಿಮಿತ್ತಜ್ಞಾನಿಗಳಾದ ಭ್ರಾಜಿಷ್ಣುಗಳೆಂಬ ಕ್ಷುಲ್ಲಕರು ಇರುತ್ತಿದ್ದರು ಅವರ ಮಧ್ಯರಾತ್ರಿಯಲ್ಲಿ ಆಕಾಶವನ್ನು ನೋಡುತ್ತಿರುವಾಗ ಶ್ರವಣನಕ್ಷತ್ರವೂ ಇತರ ನಕ್ಷತ್ರಮಾಲೆಯೂ ಕಂಪಾಯಮಾನವಾಗುವುದನ್ನು ನೋಡಿ, ನಿಮಿತ್ತಜ್ಞಾನದ ಬಲದಿಂದ, ಅಯ್ಯೊ! ಎಲ್ಲಿಯೋ ಮಹಾಮುನಿಗಳಿಗೆ ಘೋರೋಪಸರ್ಗವು ಪ್ರಾಪ್ತವಾಗಿದೆ. ಎಂದು ಹೇಳುವ ಶಬ್ದವನ್ನು ಜಿಷ್ಣುಸೂರಿಗಳು ಕೇಳಿ ತನ್ನ ಅವಧಿಜ್ಞಾನದಿಂದ "ಅಕಂಪನಾಚಾರ್ಯರು ಮೊದಲಾದ ಮುನಿಸಂಘಕ್ಕೆ ಬಲಿಯು ಉಪಸರ್ಗವನ್ನು ಕೊಡುತ್ತಿದ್ದಾನೆ ಎಂದು ತಿಳಿದು, ಆ ಮೇಲೆ ಗಗನವಿಹಾರಿಯಾದ ಒಬ್ಬ ಪುಷ್ಪದೇವನನ್ನು ಬರಮಾಡಿ ಆತನಿಗೆ ಈ ವಿಷಯುವನ್ನೆಲ್ಲಾ ತಿಳಿಸಿ "ಈ ಘೋರೋಪಸರ್ಗವು ವೈಕ್ರಿಯಕಋದ್ಧಿಸಂಪನ್ನರಾದ ಮುನಿಗಳಿಂದಲ್ಲದೆ ಇತರರಿಂದ ನಿವಾರಿಸಲಶಕ್ಯವು. ಈಗ ವಿಷ್ಣುಕುಮಾರ ಮುನಿಗಳಿಗೆ ಋದ್ಧಿಪ್ರಾಪ್ತವಾಗಿದೆ. ಈಗ ಅವರು ಧರಣೀಭೂಷಣವೆಂಬ ಪರ್ವತದಲ್ಲಿರುವರು ಆದ್ದರಿಂದ ನೀವು ಈಗ ಅವರಿದ್ದಲ್ಲಿ ಬೇಗನೇ ಹೋಗಿ ಈ ವಿಷಯವನ್ನೆಲ್ಲಾ ಅವರಿಗೆ ತಿಳಿಸಿದರೆ, ಅವರಿಂದ ಈ ಉಪಸರ್ಗವು ನಿವಾರಣೆಯಾದೀತು' ಇಂತೆಂದರು. ಈ ಪ್ರಕಾರವಾದ ಜಿಷ್ಣುಸೂರಿಗಳ ವಚನವನ್ನು ಕೇಳಿ ಪುಷ್ಪಕದೇವನು ಶೀಘ್ರವಾಗಿ ಹೋಗಿ ಈ ಸಮಾಚಾರವನ್ನೆಲ್ಲಾ ಅವರಿಗೆ ತಿಳಿಸಿ, 'ಮಹಾಸ್ವಾಮಿ! ತಮ್ಮಿಂದಲೇ ಈ ಉಪಸರ್ಗವು ದೂರವಾಗಬೇಕಲ್ಲದೆ, ಇನ್ನಿತರರಿಂದ ಅಸಾಧ್ಯವು. ಆದಕಾರಣ ತಾವು ಈ ಕಾರ್ಯದಲ್ಲಿ ಉದ್ಯುಕ್ತರಾಗಬೇಕೆ"ಂದು ಪ್ರಾರ್ಥಿಸಿಕೊಂಡನು. ಈ ವಿಷಯವನ್ನು ಕೇಳುತ್ತಲೇ ವಿಷ್ಣುಕುಮಾರಮುನಿಗಳಿಗೆ ಬಹಳ ವ್ಯಸನವಾಯಿತು. ಆದರೆ ತನಗೆ ಋದ್ಧಿಪ್ರಾಪ್ತವಾದ ವಿಷಯವೂ ಅವರಿಗೆ ಗೊತ್ತಿಲ್ಲದ ಕಾರಣ ಆಶ್ಚ

ರ್ಯವೂ ಉಂಟಾಯಿತು. ಅದನ್ನು ಪರೀಕ್ಷಿಸಿ ನೋಡುವುದಕ್ಕೋಸ್ಕರ ತನ್ನ ಕೈಯನ್ನು ನೀಡಿದರು. ಅದು ಉದ್ದವಾಗುತ್ತಾ ಆಗುತ್ತಾ ಸಮುದ್ರದವರೆಗೆ ವ್ಯಾಪಿಸಿತು. ಆ ಮೇಲೆ ತನ್ನ ಹಸ್ತವನ್ನು ಸಂಕೋಚವನ್ನು ಮಾಡಿಕೊಂಡರು. ಆಗ ನನಗೆ ನಿಜವಾಗಿಯೂ ವೈಕ್ರಿಯಕಋದ್ಧಿಪ್ರಾಪ್ತಿಯಾಗಿದೆ ಎಂದರಿತು, ಕೂಡಲೇ ಮುನಿಗಳ ಉಪಸರ್ಗವನ್ನು ದೂರಮಾಡುವುದಕ್ಕೋಸ್ಕರ ಹಸ್ತಿನಾಪುರಕ್ಕೆ ಆಕಾಶಮಾರ್ಗವಾಗಿ ದಯಮಾಡಿಸಿದರು. ಮೊದಲು ಪದ್ಮರಾಜನ ಸಮೀಪಕ್ಕೆ ಹೋಗಿ ಕೋಪಗೊಂಡು, "ರಾಜನೇ! ಮುನಿಗಳಿಗೆ ಉಪಸರ್ಗವನ್ನು ಕೊಡುವುದಕ್ಕೋಸ್ಕರ ಈ ನಿರ್ದಯವಾದ ಕೃತ್ಯವನ್ನೇಕೆ ಆರಂಭಿಸಿರುವೆ? ಮೊದಲು ನಮ್ಮ ವಂಶದಲ್ಲಿ ಈ ವರೆಗೆ ಯಾರಾದರೂ ದುಷ್ಕೃತ್ಯವನ್ನು ಮಾಡಿರುವರೇನು? 'ದುಷ್ಟನಿಗ್ರಹ, ಶಿಷ್ಟಪರಿಪಾಲನೆ' ಮಾಡುವುದು ರಾಜನ ಧರ್ಮವಲ್ಲವೇ? ನಿನ್ನಂತಹ ಮೂರ್ಖನಿಗೆ ರಾಜ್ಯ! ನಿನಗೇಕೆ? ಇಂತಹ ದುರ್ಬುದ್ಧಿಯುಂಟಾಯಿತು? ಅರೇ! ನಿರ್ದಯಿಯೇ! ನಿರ್ದೋಷಿಗಳಾದ ಮುನಿಗಳಿಗೆ ಉಪಸರ್ಗವನ್ನು ಕೊಡುವುದಕ್ಕಿಂತಲೂ ಅಧಿಕದುಃಖಕರವಾದ ವಿಷಯವೇನಿದೆ? ಇದರಿಂದ ಮುಂದೆ ನಿನಗೆ ಭಯಂಕರವಾದ ಸಂಕಟವು ಸಂಭವಿಸತಕ್ಕದ್ದಿದೆ. ಆದಕಾರಣ ಅದಕ್ಕಿಂತ ಮೊದಲೇ ಆ ಮುನಿಗಳಿಗುಂಟಾದ ಉಪಸರ್ಗವನ್ನು ದೂರಮಾಡುವ ಉಪಾಯವನ್ನು ನೋಡು" ಇಂತೆಂದರು. ಆ ಮುನಿಗಳ ಕ್ರೋಧಯುಕ್ತವಾದ ಭಾಷಣವನ್ನು ಕೇಳಿ, ಬಹಳ ದುಃಖಿತನಾಗಿ, "ಮಹಾಸ್ವಾಮಿ! ತಾವು ಅಪ್ಪಣೆ ಕೊಡಿಸಿದ್ದೆಲ್ಲಾ ನಿಜವಾದುದು. ಸತ್ಪುರುಷರಿಗೆ ದುಃಖವನ್ನುಂಟು ಮಾಡುವುದರಿಂದ ಭಯಂಕರವಾದ ದುಃಖವನ್ನು ಅನುಭವಿಸಬೇಕಾಗುತ್ತದೆ. ಪರಂತು, ಈಗ ನಾನು ಮಾಡತಕ್ಕದ್ದೇನು? ಒಮ್ಮೆ ಬಲಿಯೆಂಬ ಮಂತ್ರಿಯು ಒಂದು ಮಹತ್ವವಾದ ಕಾರ್ಯವನ್ನು ಮಾಡಿದ ನಿಮಿತ್ತವಾಗಿ ಅವನಿಗೆ ಅಭೀಷ್ಟವಾದ ವರವನ್ನು ಕೊಡುತ್ತೇನೆಂದು ವಚನವನ್ನು ಕೊಟ್ಟ ಮೇರೆಗೆ ವಚನಭಂಗವಾಗುವುದೆಂಬ ಭಯದಿಂದ ಅವನಿಗೆ ಏಳು ದಿವಸಗಳ ರಾಜ್ಯಭಾರವನ್ನು ಕೊಟ್ಟು ನಾನು ಆತನಿಂದ ವಂಚಿಸಲ್ಪಟ್ಟವನಾಗಿದ್ದೇನೆ. ಅಷ್ಟರವರೆಗೆ ನನಗೆ ಬೇರೆ ಯಾವ

ಉಪಾಯವೂ ತೋರುವಂತಿಲ್ಲ. ಆದ್ದರಿಂದ ಪ್ರಾಜ್ಞರಾದ ತಾವು ಈ ಪ್ರಾಪ್ತವಾದ ಸಂಕಟವನ್ನು ದೂರಮಾಡಬೇಕೆಂದು ಪ್ರಾರ್ಥಿಸಿಕೊಂಡನು.'' ಈ ಪ್ರಕಾರವಾದ ರಾಜನ ಮಾತನ್ನು ವಿಷ್ಣುಕುಮಾರಮುನಿಗಳು ಕೇಳಿ, ಕೂಡಲೇ ಅಲ್ಲಿಂದ ಹೊರಟು, ಅವರು ತನ್ನ ಋದ್ಧಿಯ ಬಲದಿಂದ ವಾಮನನಾದ ಬ್ರಾಹ್ಮಣನ ರೂಪವನ್ನು ಧರಿಸಿಕೊಂಡು, ವೇದಘೋಷಣೆಯನ್ನು ಮಾಡುತ್ತಾ ಯಜ್ಞ ನಡಿಯುತಕ್ಕ ಸ್ಥಾನಕ್ಕೆ ಹೋದರು. ಅಲ್ಲಿ ಹೋದ ಮೇಲೆ ಈ ಬ್ರಾಹ್ಮಣ ವಟುವನ್ನು ಬಲಿಯು ನೋಡಿ, ಸಂತುಷ್ಟನಾಗಿ, 'ಮಹಾಸ್ವಾಮಿ! ಈ ಸಮಯದಲ್ಲಿ ತಮಗೆ ಅಭೀಷ್ಟವಾದ ವಸ್ತುಗಳನ್ನು ಕೇಳಿರಿ. ನಾನು ತಮ್ಮ ಇಚ್ಛೆಯನ್ನು ಪೂರ್ತಿ ಮಾಡುವೆನು. ಎಂದನು ಈ ಮಾತನ್ನು ಕೇಳಿ ವಾಮನ ಬ್ರಾಹ್ಮಣನು 'ನನಗೆ ಮೂರು ಹೆಜ್ಜೆ ಜಾಗವನ್ನು ಮಾತ್ರ ಕೊಡಬೇಕು. ಇನ್ನೇನೂ ಬೇಕಿಲ್ಲವೆಂದನು' ಆಗ ಬಲಿ ರಾಜನು ಇದೇನು ಸ್ವಾಮಿ! ತಮ್ಮ ಬೇಡುವಿಕೆ! ಬೇರ ಏನಾದರೂ ಅಧಿಕವಾದ ದ್ರವ್ಯಗಳನ್ನು ಕೇಳಿರಿ. ತಮ್ಮ ಇಚ್ಛೆಯನ್ನು ಪೂರ್ತಿ ಮಾಡುವೆನು. ಎಂದನು. ಆಗ ಅಲ್ಲಿ ನೆರೆದ ಇತರ ಬ್ರಾಹ್ಮಣ ಸಮೂಹದಲ್ಲಿ ಈ ಹುಚ್ಚು ವಾಮನನಿಗೆ ಏನಾಗಿದೆ? ಬಲಿರಾಜನು ಈ ಸಮಯದಲ್ಲಿ ಬೇಕಾದ ವಸ್ತುಗಳನ್ನು ಕೊಡುವಾಗ ಅವುಗಳನ್ನು ಏಕೆ ಕೇಳುವುದಿಲ್ಲ? ಹುಚ್ಚನಂತೆ ಮೂರು ಹೆಜ್ಜೆ ಜಾಗವನ್ನು ಮಾತ್ರ ಕೇಳುತ್ತಾನೆ. ಈತನು ಭಾಗ್ಯಹೀನ, ಎಂದೆನ್ನುತ್ತಾ, ನಿನಗೆ ಬೇಕಾದ ದ್ರವ್ಯಗಳನ್ನು ಕೇಳೆಂದು ಬಹಳವಾಗಿ ಪ್ರೇರೇಪಿಸಿದರು. ಪರಂತು, ವಾಮನಾವತಾರಿಯು ಅವರೆಲ್ಲರಿಗೂ ಹೇಳಿದ್ದೇನಂದರೆ, "ರಾಜನು ನನ್ನ ಇಚ್ಛೆಯನ್ನು ಪೂರ್ತಿ ಮಾಡಿದ ನಂತರ ಇನ್ನಿತರ ವಸ್ತುಗಳನ್ನು ಕೇಳುವೆನು'' ಎಂದನು. ಅದಕ್ಕೆ ಬಲಿರಾಜನೂ ಅನುಮತಿಯನ್ನಿತ್ತು, ತಮ್ಮ ಇಚ್ಛೆಯಂತೆಯೇ ಆಗಲಿ. ತಮಗೆ ಮೂರು ಹೆಜ್ಜೆ ಜಾಗವನ್ನು ಕೊಟ್ಟೆನೆಂದು ಹೇಳಿ ಅವರ ಹಸ್ತದಲ್ಲಿ ಜಲಧಾರೆಯನ್ನು ಅರ್ಪಿಸಿದನು. ಕೂಡಲೇ ಬ್ರಾಹ್ಮಣವೇಷಧಾರಿಯಾದ ವಿಷ್ಣುಕುಮಾರಮುನಿಗಳಿಗೆ ಕ್ರೋಧವುಂಟಾಗಿ ತನ್ನ ವೈಕ್ರಿಯಕಋದ್ಧಿಯ ಬಲದಿಂದ ತನ್ನ ಶರೀರವನ್ನು ಭಯಂಕರವಾದ ಸ್ಥೂಲರೂಪವನ್ನು ಧಾರಣೆಮಾಡಿಕೊಂಡು,

ಒಂದು ಹೆಜ್ಜೆಯನ್ನು ಮೇರುಪರ್ವತದ ಮೇಲೆಯೂ ಇನ್ನೊಂದು ಪಾದ ವನ್ನು ಮಾನುಷೋತ್ತರಪರ್ವತದ ಮೆಲೆಯೂ, ಇನ್ನೊಂದು ಹೆಜ್ಜೆಗೆ ಜಾಗ ವಿಲ್ಲದಿರಲು, ಬಲಿರಾಜನೇ ! ಇನ್ನೊಂದು ಹೆಜ್ಜೆಗೆ ಜಾಗವೆಲ್ಲಿ? ವಚನ ಭಂಗವನ್ನು ಮಾಡಿಕೊಳ್ಳಬೇಡ. ಮೂರನೇ ಹೆಜ್ಜೆಗೆ ಜಾಗವನ್ನು ಕೊಡು. ಹೀಗೆಂದು ಹೇಳಿ ಮೂರನೇ ಹೆಜ್ಜೆಯನ್ನು ಅವನ ಮಸ್ತಕದ ಮೇಲೆ ಇರಿ ಸಿದನು. ಪರಂತು, ಮೊದಲೇ ಇವರ ಭಯಂಕರವಾದ ರೂಪವನ್ನು ನೋಡಿ ಭಯಭೀತನಾಗಿ ಮುನಿಗಳ ಪ್ರಶ್ನೆಗೆ ಏನೊಂದೂ ಉತ್ತರವನ್ನು ಕೊಡದೆ ಸ್ತಬ್ಧನಾಗಿದ್ದನು.

ವಿಷ್ಣುಕುಮಾರಮುನಿಗಳು ಈ ಭಯಂಕರವಾದ ರೂಪನ್ನು ಧಾರ ಣೆಮಾಡಿದ ಸಮಯದಲ್ಲಿ ತ್ರಿಭುವನದಲ್ಲಿಯೂ ಪ್ರಚಂಡವಾದ ಅದ್ಭುತವು ಉಂಟಾಯಿತು. ದೊಡ್ಡ ದೊಡ್ಡ ಪರ್ವತಗಳು ಕಂಪಾಯಮಾನವಾಗಿ ಭೂಮಿಯ ಮೇಲೆ ಬೀಳುತ್ತಿದ್ದುವು. ಮಹಾಸಮುದ್ರಗಳು ಅಲ್ಲೋಲ ಕಲ್ಲೋಲಗಳಾದುವು. ಭೂಕಂಪವಾಯಿತು. ಆಕಾಶದಲ್ಲಿ ವಿಮಾನಗಳ ಪರ ಸ್ಪರ ಸಂಘರ್ಷಣೆಯಿಂದ ದೇವತೆಗಳು ಭಯಭೀತರಾದರು. ಈ ಪ್ರಕಾರ ವಾಗಿ ನಾಲ್ಕು ಕಡೆಗಳಿಂದಲೂ ಪ್ರಲಯಕಾಲದಂತೆ ಭಯಂಕರವಾದ ಸ್ಥಿತಿಯು ಪ್ರಾಪ್ತವಾಯಿತು. ಆಗ ಈ ಪ್ರಕಾರವಾದ ಭಯಂಕರಸ್ಥಿತಿ ಯನ್ನು ಸುರಾಸುರರು ನೋಡಿ ಭಯಭೀತರಾಗಿ, ಈ ಮುನಿಗಳ ಸಮೀ ಪಕ್ಕೆ ಬಂದು, 'ಮಹಾಮುನಿಗಳೇ ! ಕ್ಷಮಿಸಿರಿ, ಕ್ಷಮಿಸಿರಿ, ಅಪರಾಧಕ್ಕೆ ತಕ್ಕುದಾದ ಫಲವು ದೊರೆಯಿತು. ಈಗ ತಾವು ಶಾಂತರಾಗಿ ಆತನ ಮಸ್ತ ಕದಿಂದ ತಮ್ಮ ಪಾದವನ್ನು ತೆಗೆದು ಕ್ಷಮಾಭಾವವನ್ನು ಧಾರಣೆ ಮಾಡಿ ಒಮ್ಮೆ ದಯಾದೃದೃಷ್ಟಿಯಿಂದ ನಮ್ಮನ್ನು ನೋಡಬೇಕು. ಇಷ್ಟೆ ತಮ್ಮಲ್ಲಿ ವಿನಂತಿ' ಎಂದು ಹೇಳಿದರು. ಆಗ ವಿಷ್ಣುಕುಮಾರ ಮುನಿಗಳು ಶಾಂತರಾಗಿ ತನ್ನ ಪಾದವನ್ನು ಸಂಕೋಚ ಮಾಡಿಕೊಂಡರು. ಆ ಮೇಲೆ ಸ್ವರ್ಗವಾಸಿ ಗಳಾದ ದೇವತೆಗಳು ಬಲಿಯನ್ನು ಬಂಧಿಸಿ, ಮುನಿಗಳಿಗೆ ಪಾದಪೂಜೆ ಯನ್ನು ಮಾಡಿದರು. ಈ ಪ್ರಕಾರವಾಗಿ ವಿಷ್ಣುಕುಮಾರ ಮುನಿಗಳು ತನ್ನ

ವೈಕ್ರಿಯಕಋದ್ಧಿಯ ಸಾಮರ್ಥ್ಯದಿಂದ ಮುನಿಗಳಿಗುಂಟಾದ ಭಯಂಕರವಾದ ಉಪಸರ್ಗವನ್ನು ದೂರಮಾಡಿದರು,

ಇತ್ತ ಪದ್ಮರಾಜನೂ ಈ ವರ್ತಮಾನವನ್ನು ಕೇಳಿ ಭಯಭೀತನಾಗಿ ಬೇಗನೇ ಬಂದು ವಿಷ್ಣುಕುಮಾರಮುನಿಗಳಿಗೂ ಇತರ ಎಲ್ಲಾ ಮುನಿಗಳಿಗೂ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಬಹಳ ನಮ್ರತೆಯಿಂದ ಕ್ಷಮೆಯನ್ನು ಬೇಡಿಕೊಂಡನು. ಆ ಮೇಲೆ ಕೆಲವು ಸಮಯದನಂತರ ಬಲಿಯನ್ನು ದೇವತೆಗಳು ಬಂಧನದಿಂದ ಮುಕ್ತನನ್ನಾಗಿ ಮಾಡಿದರು. ತರುವಾಯ ಅವನು ಇತರ ಮೂರು ಮಂದಿ ಮಂತ್ರಿಗಳ ಸಮೀಪಕ್ಕೆ ಹೋಗಿ, ಆಗ ಆ ನಾಲ್ಕು ಮಂದಿ ಮಂತ್ರಿಗಳೂ ಅವರು ಮಾಡಿದ ದುಷ್ಕೃತ್ಯದ ವಿಷಯವಾಗಿ ಪಶ್ಚಾತ್ತಾಪವನ್ನು ಹೊಂದಿ, ಆ ಮೇಲೆ ನಾಲ್ವರೂ ವಿಷ್ಣುಕು-ಮಾರಮುನಿಗಳೂ ಇನ್ನಿತರ ಅಕಂಪನಾಚಾರ್ಯರೇ ಮೊದಲಾದ ಎಲ್ಲಾ ಮುನಿಗಳ ಸಮೀಪಕ್ಕೆ ಬಂದು ಬಹಳ ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರವನ್ನು ಮಾಡಿದರು. ಅನಂತರ ತಮ್ಮ ದುಃಖದಾಯಕವಾದ ಮಿಥ್ಯಾತ್ವವನ್ನು ತೊರೆದು ಆ ನಾಲ್ವರೂ ಮುನಿಗಳ ಸಮೀಪದಲ್ಲಿ ಜಿನದೀಕ್ಷೆಯನ್ನು ಸ್ವೀಕರಿಸಿ, ವಿನಯದಿಂದ ಕ್ಷಮೆಯನ್ನು ಬೇಡಿದರು. ಆ ಮೇಲೆ ದೇವತೆಗಳು ನಗರವಾಸಿಗಳಾದ ಭವ್ಯರಿಗೆ ವಿಷ್ಣುಕುಮಾರಮುನಿಗಳ ಪೂಜಾಸೇವೆಯನ್ನು ಮಾಡುವುದಕ್ಕೋಸ್ಕರ ೩ ವೀಣೆಗಳನ್ನು ಕೊಟ್ಟು ಸ್ವಸ್ಥಾನಕ್ಕೆ ತೆರಳಿದರು.

ವಿಷ್ಣುಕುಮಾರಮುನಿಗಳೂ ಈ ಕಾರ್ಯಗಳಿಂದುಟಾದ ಶುದ್ಧಿಗೋಸ್ಕರ ಪ್ರಾಯಶ್ಚಿತ್ತಪೂರ್ವಕವಾಗಿ ಪುನರ್ದೀಕ್ಷೆಯನ್ನು ಸ್ವೀಕರಿಸಿ, ಅನಂತರ ಘೋರವಾದ ತಪಸ್ಸನ್ನು ಮಾಡಿ ಮೋಕ್ಷವನ್ನು ಹೊಂದಿದರು.

## [೮] ಪ್ರಭಾವನಾ ಅಂಗದ ವರ್ಣನೆ.

**ಅಜ್ಞಾನತಿಮಿರವ್ಯಾಪ್ತಿಮಪಾಕೃತ್ಯ ಯಥಾಯಥಂ ||**
**ಜಿನಶಾಸನಮಾಹಾತ್ಮ್ಯಪ್ರಕಾಶಃ ಸ್ಯಾತ್ಪ್ರಭಾವನಾ ||೧೮||**

**ಅನ್ವಯಾರ್ಥ:**—ಅಜ್ಞಾನತಿಮಿರವ್ಯಾಪ್ತಿಂ- ಅಜ್ಞಾನವೆಂಬ ಅಂಧಕಾರದ ವ್ಯಾಪಕತೆಯನ್ನು ಯಥಾಯಥಂ—ತನ್ನ ಶಕ್ತಿಗನುಸಾರವಾಗಿ,

ಅಪಾಕೃತ್ಯ–ದೂರ ಮಾಡಿ, ಜಿನಶಾಸನಮಾಹಾತ್ಮ್ಯ ಪ್ರಕಾಶಃ–ಜಿನಧರ್ಮದ ಮಹಿಮೆಯನ್ನು ಪ್ರಕಟಪಡಿಸುವಿಕೆಯು, ಪ್ರಭಾವನಾ—ಪ್ರಭಾವನೆಯೆಂಬ ಅಂಗವಾಗಿ, ಸ್ಯಾತ್-ಆಗುವುದು.

**ತಾತ್ಪರ್ಯ:—** ಅನಾದಿಕಾಲಸಂಬಂಧಿಯಾದ ಈ ಸಂಸಾರಿಜೀವನು ಸರ್ವಜ್ಞರಿಂದ ಪ್ರತಿಪಾದಿಸಲ್ಪಟ್ಟ ಧರ್ಮವನ್ನರಿಯದೆ, ನಾನು ಯಾರು? ನನ್ನ ಸ್ವರೂಪವೇನು? ನಾನೇನು ಮಾಡಬೇಕು? ನನಗೆ ಹಿತವ್ಯಾವದು? ನಾನಾ ಪ್ರಕಾರವಾದ ಜೀವರುಗಳ ಸುಖದುಃಖಗಳು ಹೇಗಿವೆ? ದೇವ ಗುರುಶಾಸ್ತ್ರಗಳ ಸ್ವರೂಪವೇನು? ಜನನಮರಣದ ಸ್ವರೂಪವೇನು? ಭಕ್ಷ್ಯಾಭಕ್ಷ್ಯಗಳ ಸ್ವರೂಪವೇನು? ಇದು ಮೊದಲಾದ ವಿಚಾರಗಳಿಲ್ಲದವನಾಗಿ ಅಜ್ಞಾನವೆಂಬ ಅಂಧಕಾರದಿಂದ ವ್ಯಾಪಿಸಲ್ಪಟ್ಟವನಾಗಿರುವನು. ಅಂತಹ ಜೀವರ ಅಜ್ಞಾನವನ್ನು ಯಥಾಶಕ್ತಿಯಾಗಿ ದೂರ ಮಾಡಿ ಜಿನ ಧರ್ಮದ ಮಹಿಮೆಯನ್ನು ಪ್ರಕಾಶಪಡಿಸುವುದಕ್ಕೆ ಪ್ರಭಾವನಾ ಅಂಗವೆಂದು ಹೆಸರು. ಇದರಲ್ಲಿ ಸ್ವಪ್ರಭಾವನೆ ಪರಪ್ರಭಾವನೆಯೆಂದು ಎರಡು ಭೇದಗಳಿವೆ. ಸಮ್ಯಗ್ದರ್ಶನಜ್ಞಾನಚಾರಿತ್ರರೂಪವಾದ ರತ್ನತ್ರಯಗಳನ್ನು ತಾನು ಚೆನ್ನಾಗಿ ಪರಿಪಾಲಿಸಿ ತನ್ನ ಆತ್ಮನನ್ನು ಉಜ್ವಲನನ್ನಾಗಿ ಮಾಡಿಕೊಳ್ಳುವುದಕ್ಕೆ ಸ್ವಪ್ರಭಾವನೆಯೆಂದೂ, ದಾನ, ತಪಸ್ಸು, ಜಿನಪೂಜೆ, ವ್ರತ ಉಪವಾಸ, ವಿದ್ಯೋನ್ನತಿ ಮೊದಲಾದವುಗಳಿಂದ ಜಿನಧರ್ಮದ ಮಹಿಮೆಯನ್ನು ಪ್ರಕಟಪಡಿಸುವುದಕ್ಕೆ ಪರಪ್ರಭಾವನೆಯೆಂದೂ ಹೆಸರು. ಈ ರೀತಿಯಾಗಿ ಎಂಟು ಅಂಗ [ಗುಣ]ಗಳ ಸಮುದಾಯಕ್ಕೆ ಸಮ್ಯಗ್ದರ್ಶನವೆಂದು ಹೆಸರು. ಅಂಗದಿಂದ ಅಂಗಿ [ಆತ್ಮನು] ಅಭಿನ್ನನಾಗಿರುವಂತೆ, ನಿಃಶಂಕಾದಿ ಗುಣಗಳ ಸಮುದಾಯವೇ ಸಮ್ಯಗ್ದರ್ಶನವು. ಶಂಕೆ, ಕಾಂಕ್ಷೆ, ಜುಗುಪ್ಸೆ, ಮೂಢತನ ಅನುಪಗೂಹನ, ಅಸ್ಥಿತೀಕರಣ, ಅವಾತ್ಸಲ್ಯ ಮತ್ತು ಅಪ್ರಭಾವನೆಗಳೆಂಬ ಪೂರ್ವೋಕ್ತವಾದ ಗುಣಗಳಿಗೆ ವಿರುದ್ಧವಾದ ಧರ್ಮಗಳೇ ಸಮ್ಯಗ್ದರ್ಶನದ ದೋಷಗಳು. ಇವುಗಳಿಂದ ಸಮ್ಯಕ್ತ್ವವನ್ನು ಹಾನಿ ಮಾಡಿಕೊಳ್ಳಬಾರದೆಂದು ಭಾವವು. ಈ ಅಂಗದಲ್ಲಿ ವಜ್ರಕುಮಾರನೆಂಬ ರಾಜಪುತ್ರನು ಪ್ರಸಿದ್ಧಿಯನ್ನು ಹೊಂದಿರುವನು.

## ೮ ವಜ್ರಕುಮಾರನ ಕಥೆ.

ಪೂರ್ವದಲ್ಲಿ ಹಸ್ತಿನಾಪುರವೆಂಬ ನಗರದಲ್ಲಿ ಬಲಸೆಂಬ ರಾಜನು ರಾಜ್ಯವನ್ನಾಳುತ್ತಿದ್ದನು. ಅವನಿಗೆ ಗರುಡನೆಂಬ ಅತ್ಯಂತ ಚತುರನಾದ ಮಂತ್ರಿಯಿದ್ದು, ಅವನಿಗೆ ಸೋಮದತ್ತನೆಂಬೊಬ್ಬ ಮಗನಿದ್ದನು. ಆತನು ಬೇಗನೇ ನಾನಾಪ್ರಕಾರವಾದ ಶಾಸ್ತ್ರದಲ್ಲಿ ಪಾರಂಗತನಾಗಿ ವಿದ್ವಾಂಸರಿಗೆ ಪ್ರೀತಿಪಾತ್ರನಾಗಿದ್ದನು. ಹೀಗಿರಲೊಂದು ದಿನ ಸೋಮದತ್ತನು ಅಹಿಛತ್ರ ವೆಂಬ ನಗರದಲ್ಲಿರುವ ಸುಭೂತಿಯೆಂಬ ತನ್ನ ಮಾವನ ಸಮೀಪಕ್ಕೆ ಹೋಗಿ ಬಹಳ ವಿನಯದಿಂದ " ಮಾವನೇ ! ತಾವು ನನ್ನ ಮೇಲೆ ಕೃಪೆ ಇಟ್ಟು ಇಲ್ಲಿಯ ದುರ್ಮುಖನೆಂಬ ರಾಜನ ಪರಿಚಯವನ್ನು ನನಗೆ ಮಾಡಿಕೊಡಬೇಕೆಂದು ಹೇಳಿದನು " ಈ ಮಾತನ್ನು ಕೇಳುತ್ತಲೇ ಸುಭೂತಿಯು ತನ್ನ ಮನಸ್ಸಿನಲ್ಲಿ " ಒಂದು ವೇಳೆ ಇವನಿಗೆ ರಾಜನ ಭೇಟಿಯಾಯಿತೆಂದರೆ, ಇವನು ಬಹಳ ಚತುರನಾಗಿರುವುದರಿಂದ ರಾಜನು ಇವನ ಗುಣಕ್ಕೆ ಮೋಹಿತನಾಗಿ ಇವನನ್ನು ತನ್ನಮಂತ್ರಿಯನ್ನಾಗಿ ಮಾಡಿಕೊಳ್ಳುವನು ಆ ಮೇಲೆ ಇವನ ಮುಂದೆ ನನ್ನ ಪ್ರಭಾವವು ಬೀಳಲಾರದು. ಈಗ ನನಗೆ ರಾಜಾಶ್ರಯವಿರುವುದು. ಅನಂತರ ಇರಲಾರದು. " ಎಂಬದಾಗಿ ಯೋಚಿಸಿ, ಏನೋ ಕಾರಣವನ್ನು ಹೇಳಿ ರಾಜನ ಪರಿಚಯವನ್ನು ಮಾಡಿಕೊಡಲಿಲ್ಲವು. ಸೋಮದತ್ತನು ವ್ಯವಹಾರಚತುರನಾಗಿರುವುದರಿಂದ ಮಾವನ ಅಂತರಂಗಿಕ-ಅಭಿಪ್ರಾಯವನ್ನು ತಿಳಿದು, ಆ ಮೇಲೆ ಈ ವಿಷಯವಾಗಿ ಮಾವನೊಡನೆ ಏನೊಂದೂ ಪ್ರಸ್ತಾವವನ್ನೆತ್ತದೆ, ಹೇಗಾದರೂ ರಾಜನ ದರ್ಶನವನ್ನು ಮಾಡಬೇಕೆಂದು ನಿಶ್ಚೈಸಿದನು.

ಅನಂತರ ಆತನು ಒಂದಾನೊಂದು ದಿವಸ ಹುಚ್ಚನ ವೇಷವನ್ನು ಧರಿಸಿ ರಾಜಸಭೆಗೆ ಹೋಗುವುದಕ್ಕೆ ಹೊರಟನು. ಆತನು ಬಹುಚತುರನಾಗಿರುವುದರಿಂದ ತನ್ನ ಅರಿವು ಯಾರಿಗೂ ಉಂಟಾಗದಂತೆ ನಟಿಸಿದನು. "ಅವರು ಈತನು ಯಾರೋ ಹುಚ್ಚನಾಗಿರಬೇಕು." ಎಂದು ತಿಳಿದು ಅರಮನೆಯೊಳಗೆ ಪ್ರವೇಶಿಸಲು ಯಾರು ಅಡ್ಡಿ ಮಾಡಲಿಲ್ಲವು. ಈ ರೀತಿಯಾಗಿ

ಪ್ರವೇಶಿಸಿ ರಾಜನ ಸಭೆಗೆ ಹೋದನು. ಅಲ್ಲಿ ಹೋಗಿ ರಾಜನಿಗೆ ಆಶಿರ್ವಾದವನ್ನು ಕೊಟ್ಟು, ಆತನಿಂದ ತೋರಿಸಲ್ಪಟ್ಟಆಸನದಲ್ಲಿ ಕುಳಿತುಕೊಂಡನು. ಆ ಮೇಲೆ ನಾನಾಪ್ರಕಾರವಾದ ಪ್ರಶ್ನೋತ್ತರಗಳಿಂದಲೂ ಸಂಭಾಷಣೆಗಳಿಂದಲೂ ತನ್ನ ಅನೇಕವಿಧವಾದ ಶಾಸ್ತ್ರದಲ್ಲಿ ಪ್ರವೀಣತೆಯನ್ನು ರಾಜನಿಗೆ ತೋರಿಸಿ ಸಂತೋಷಪಡಿಸಿದ ನಂತರ ರಾಜನು ಈತನು ಮಂತ್ರಿಪದವಿಗೆ ಯೋಗ್ಯನೆಂದು ತಿಳಿದು, ಕೂಡಲೇ ಆ ಮಂತ್ರಿಪದವಿಯನ್ನು ಸ್ವೀಕರಿಸುವುದಕ್ಕೆ ಪ್ರಾರ್ಥಿಸಿದನು. ಆ ಸೋಮದತ್ತನು ಅಭೀಷ್ಟಕಾರ್ಯದ ಸಿದ್ಧಿಯಾದುದಕ್ಕೆ ಸಂತೋಷಿಸಿ, ಗುಣಗ್ರಾಹಿಯಾದ ರಾಜನನ್ನು ಪ್ರಶಂಸಿಸಿ ಮಂತ್ರಿಪದವಿಯನ್ನು ಗ್ರಹಣೆ ಮಾಡಿದನು. ನಾವು ನಮ್ಮ ಕಾರ್ಯಗಳಿಗೆ ಮತ್ತೊಬ್ಬರನ್ನು ಆಶ್ರಯಿಸುವುದಕ್ಕಿಂತ ತಾವೇ ಮಾಡಿಕೊಳ್ಳುವುದು ಉತ್ತಮವೆಂಬುದು ಮೇಲಿನ ಉದಾಹರಣೆಯಿಂದ ಗೊತ್ತಾಗುತ್ತದೆ.

ರಾಜನು ಸೋಮದತ್ತನಿಗೆ ತನ್ನ ಮಂತ್ರಿಪದವಿಯ ಪೋಷಾಕ [ವಸ್ತ್ರ] ಗಳನ್ನು ಕೊಟ್ಟನು. ಈ ವಾರ್ತೆಯು ಅವನ ಮಾವನಾದ ಸುಭೂತಿಗೆ ತಿಳಿದು ಮನಸ್ಸಿಗೆ ಬಹಳ ಪಶ್ಚಾತ್ತಾಪವಾಯಿತು. ಅನಂತರ ಕೆಲವು ದಿನಗಳಲ್ಲಿ ಆ ಮಾತ್ಸರ್ಯವು ದೂರವಾಗಿ. ರಾಜಸಭೆಯಲ್ಲಿ ತನ್ನ ಅಳಿಯನಿಗೆ ಉಂಟಾದ ಸನ್ಮಾನವನ್ನು ನೋಡಿ, ಸಂತುಷ್ಟನಾಗಿ ತನ್ನ ಯಜ್ಞದತ್ತೆಯೆಂಬ ಮಗಳನ್ನು ಆತನಿಗೆ ಕೊಟ್ಟು ಮದುವೆ ಮಾಡಿದನು, ಅನಂತರ ಕೆಲವು ದಿವಸಗಳ ಮೇಲೆ ಆಕೆಯು ಗರ್ಭವತಿಯಾದಳು, ಆಗ ವರ್ಷಾಕಾಲದಲ್ಲಿ ಪಕ್ವವಾದ ಮಾವಿನ ಹಣ್ಣನ್ನು ತಿನ್ನಬೇಕೆಂಬ ಬಯಕೆಯುಂಟಾಯಿತು. ಕೂಡಲೇ ಈ ವಿಷಯವನ್ನು ತನ್ನ ಗಂಡನಿಗೆ ತಿಳಿಸಿದಳು. ಆಗ ಸೋಮದತ್ತನು ತನ್ನ ಪತ್ನಿಯ ಬಯಕೆಯನ್ನು ಪೂರ್ತಿಗೊಳಿಸುವುದಕ್ಕೋಸ್ಕರ ಮಾವಿನ ಹಣ್ಣನ್ನು ಹುಡುಕುವುದಕ್ಕೆ ಆಮ್ರವನಕ್ಕೆ ಹೋದನು. ಅಲ್ಲಿ ಹಣ್ಣನ್ನು ಹುಡುಕುತ್ತಾ ಹೋಗುವಾಗ ಅಲ್ಲೊಂದು ಮಾವಿನಮರದ ಕೆಳಗೆ ಧ್ಯಾನಸ್ಥರೂ ರತ್ನತ್ರಯಧಾರಕರೂ ಆದ ಸುಮಿತ್ರರೆಂಬ ಮುನಿಗಳನ್ನು ಕಂಡರು. ಅದಲ್ಲದೆ ಆ ಮರವು ಆಮ್ರಫಲಗಳಿಂದ ಭರಿತವಾಗಿದ್ದಿತು, ಇದನ್ನು ನೋಡಿ ಆಶ್ಚರ್ಯಭರಿತನಾಗಿ, "ಈ ವರ್ಷಾಕಾಲದಲ್ಲಿ ಮಾವಿನಮರದಲ್ಲಿ

ಹೂ ಉಂಟಾಗುವುದೂ ನಿಸರ್ಗನಿಯಮಕ್ಕೆ ವಿರುದ್ಧವಾದುದು. ಹೀಗಿರಲು ಈ ಮರವು ಫಲಭರಿತವಾಗಿದೆ. ಆದ್ದರಿಂದ ಇದಕ್ಕೆ ದಿಗಂಬರ ಮುನಿಗಳ ಮಹಿಮೆಯೇ ಪ್ರಧಾನಕಾರಣವಲ್ಲದೆ, ಮತ್ತೊಂದಲ್ಲ! ಜೈನಸಾಧುಗಳೇ ಧನ್ಯರು! ಆಹಾ! ನನ್ನ ಅಭೀಷ್ಟವು ಸಿದ್ಧಿಯಾದ್ದರಿಂದ ಬಹಳ ಆನಂದ ವೆನಿಸುತ್ತದೆ'' ಎಂದು ಹೇಳಿ, ಮರದಿಂದ ಕೆಲವು ಹಣ್ಣುಗಳನ್ನು ತೆಗಿಸಿ ತನ್ನ ಸೇವಕನ ಹಸ್ತ ಮನೆಗೆ ಕಳುಹಿಸಿದನು. ತಾನು ಆ ಮುನಿಗಳಿಂದ ಧರ್ಮೋಪದೇಶವನ್ನು ಕೇಳಬೇಕೆಂದು ಅವರ ಧ್ಯಾನವು ಪೂರ್ತಿಯಾದ ನಂತರ ಅವರ ಸಮೀಪಕ್ಕೆ ಹೋಗಿ ಭಕ್ತಿಯಿಂದ ನಮಸ್ಕಾರವನ್ನುಮಾಡಿ "ಮಹಾಸ್ವಾಮಿ! ಈ ಮೂರು ಲೋಕದಲ್ಲಿ ಸಾರವಾದ ವಸ್ತುಯಾವುದೆಂದು ತಮ್ಮ ಮುಖಕಮಲದಿಂದ ಕೇಳಬೇಕೆಂಬ ಇಚ್ಛೆಯು ನನಗಿದೆ" ಎಂದನು. ಈ ಮಾತನ್ನು ಕೇಳಿ ಸುಮಿತ್ರರೆಂಬ ಮುನಿಗಳು ತಮ್ಮ ಮಧುರವಾಣಿ ಯಿಂದ ಅಪ್ಪಣೆಕೊಡಿಸಿದರು. ವತ್ಸನೇ! ನಿನ್ನ ಪ್ರಶ್ನೆಯು ಬಹಳ ಉತ್ತಮ ವಾದುದು. ಆದಕಾರಣ ನಾನು ಅತೀವ ಸಂತುಷ್ಟನಾದೆನು. "ಲೋಕದಲ್ಲಿ ಜಿನೋಕ್ತವಾದ ಧರ್ಮವೇ ಶ್ರೇಷ್ಠವಾದುದು ಮತ್ತು ಅದು ಸಂಸಾರ ಪರಿ ಭ್ರಮಣೆಯನ್ನು ನಾಶ ಮಾಡಿ ಸ್ವರ್ಗಮೋಕ್ಷಸುಖವನ್ನು ಕೊಡತಕ್ಕದ್ದು. ಆ ಧರ್ಮದಲ್ಲಿ ಅನಾಗಾರ ಮತ್ತು ಸಾಗಾರಧರ್ಮವೆಂದು ಎರಡು ಭೇದ ಗಳಿವೆ. ಮುನಿಗಳ ರತ್ನತ್ರಯಾತ್ಮಕವಾದ ಧರ್ಮಕ್ಕೆ ಅನಾಗಾರಧರ್ಮ ವೆಂದೂ ಶ್ರಾವಕರ ಧರ್ಮಕ್ಕೆ ಸಾಗಾರಧರ್ಮವೆಂದೂ ಹೆಸರು'' ಇದು ಮೊದಲಾಗಿ ಬಹಳ ವಿಸ್ತಾರವಾಗಿ ಸೋಮದತ್ತನಿಗೆ ಜೈನಧರ್ಮದ ಸ್ವರೂಪವನ್ನು ತಿಳಿಸಿದರು. ಮತ್ತು ಹೀಗೆ ಕ್ರಮದಿಂದ ಹೇಳುತ್ತಾ, 'ನೀನು ಪೂರ್ವಜನ್ಮದಲ್ಲಿ ಸಹಸ್ರಾರ ಸ್ವರ್ಗದಲ್ಲಿ ಸೂರ್ಯವೆಂಬ ವಿಮಾನದಲ್ಲಿ ಸೂರ್ಯನೆಂಬ ದೇವನಾಗಿ ಜನಿಸಿದ್ದಿಯೇ" ಎಂದು ಆತನ ಪೂರ್ವಜನ್ಮದ ಪರಿಚಯವನ್ನು ಹೇಳುತ್ತಲೇ ಆತನಿಗೆ ಜಾತಿಸ್ಮರಣೆಯುಂಟಾಗಿ, ಈ ಸಂಸಾರವು ಸ್ವಪ್ನಸಾಮ್ರಾಜ್ಯದಂತೆ ಅಸ್ಥಿರವಾದುದೆಂದು ತಿಳಿದು, ಆತನು ಅವರಲ್ಲಿ ಜಿನದೀಕ್ಷೆಯನ್ನು ಸ್ವೀಕರಿಸಿ, ಕೆಲವು ಕಾಲ ಅವರೊಡನೆ ಇದ್ದು ವಿದ್ಯಾಭ್ಯಾಸವನ್ನು ಮಾಡಿ ನಾನಾಶಾಸ್ತ್ರಗಳಲ್ಲಿ ಪ್ರವೀಣನಾಗಿ, ಮಗಧದೇ

ಶದ ನಾಭಿಗಿರಿಪರ್ವತಕ್ಕೆ ಹೋಗಿ ಘೋರವಾದ ತಪಸ್ಸನ್ನು ಮಾಡುತ್ತಿದ್ದನು.

ಇತ್ತ ಕೆಲವು ದಿವಸಗಳಲ್ಲಿ ಸೋವದತ್ತಬ್ರಾಹ್ಮಣನ ಪತ್ನಿಯು ಸುಂದರನೂ ಶುಭಲಕ್ಷಣಗಳಿಂದ ಯುಕ್ತನೂ ಆದ ಒಬ್ಬ ಪುತ್ರನನ್ನು ಪ್ರಸವಿಸಿದಳು. ಮುಂದೆ ಕೆಲವು ದಿವಸಗಳ ನಂತರ ತನ್ನ ಪತಿಯು ಜಿನದೀಕ್ಷೆಯನ್ನು ಸ್ವೀಕರಿಸಿದ ವಾರ್ತೆಯನ್ನು ಕೇಳಿ ಬಹಳ ದುಃಖಿತಳಾಗಿ ಭಯಂಕರವಾದ ಆಕ್ರೋಶದಿಂದ ಈ ಸಮಾಚಾರವನ್ನು ತನ್ನ ಬಂಧುಗಳಿಗೆ ತಿಳಿಸಿದಳು. ಆಗ ಅವರು "ನೀನು ಹೆದರಬೇಡ ಸುಮ್ಮನಿರು. ಇದಕ್ಕೆ ತಕ್ಕ ಪ್ರಯತ್ನವನ್ನು ಮಾಡೋಣ" ಎಂದು ಆಕೆಗೆ ಸಮಾಧಾನವನ್ನು ಹೇಳಿ ಆ ನಾಭಿಪರ್ವತದಲ್ಲಿರುವ ಸೋಮದತ್ತಮುನಿಯ ಸಮೀಪಕ್ಕೆ ಅವರೆಲ್ಲರೂ ಹೋದರು. ಅಲ್ಲಿ ಹೋಗುತ್ತಲೇ ಅವರು ಧ್ಯಾನದಲ್ಲಿ ಮಗ್ನರಾಗಿರುವುದನ್ನು ಕಂಡು, ಯಜ್ಞದತ್ತೆಯು ಕ್ರೋಧದಿಂದ ಕಷಾಯಮಾನಳಾಗಿ ಸೋಮದತ್ತಮುನಿಯನ್ನು ಕುರಿತು—"ಅರೇ ದುಷ್ಟನೇ! ಕಪಟದಿಂದ ನನ್ನನ್ನು ತ್ಯಜಿಸಿ, ಈ ಶಿಲೆಯಲ್ಲಿ ಬಹಳ ಸಂತೋಷದಿಂದ ಕೂತಿರುವೆ, ಒಂದು ವೇಳೆ ನಿನಗೆ ಈ ರೀತಿಯಾದ ವಂಚನೆಯನ್ನು ಮಾಡಬೇಕೆಂದಿರುತ್ತಿದ್ದರೆ, ಮೊದಲೇಕೆ ನನ್ನೊಡನೆ ಲಗ್ನವನ್ನು ಮಾಡಿಕೊಂಡೆ? ಮೊದಲು ನನ್ನಲ್ಲಿ ಹೆಚ್ಚಾದ ಪ್ರೇಮವನ್ನು ತೋರಿಸಿ, ಈಗ ಏಕೆ ಈ ಬಡ ಪಶುವಿನ ಕುತ್ತಿಗೆಯನ್ನು ಕತ್ತರಿಸುವೆ? ಇದರಿಂದ ನಿನಗುಂಟಾಗುವ ಪುರುಷಾರ್ಥವಾದರೂ ಯಾವುದು? ಈಗ ಲೋಕದಲ್ಲಿ ನಮ್ಮ [ವೈದಿಕ] ಧರ್ಮವೇ ಶ್ರೇಷ್ಠವಾದುದು. ಹೀಗಿರಲು ಅದನ್ನು ಬಿಟ್ಟು ನಿಂದ್ಯವಾದ ಪರಧರ್ಮವನ್ನು ಅಂಗೀಕರಿಸಿರುವೆ. ಆದ್ದರಿಂದ ಇಂತಹ ಪಾಪಾಚರಣೆಯಿಂದ ನಿನಗೆ ಅಭೀಷ್ಟವಾದ ಮುಕ್ತಿಯ ಪ್ರಾಪ್ತಿಯು ಹೇಗಾಗುವುದೋ! ನಾನರಿಯೆ! 'ಸ್ವಧರ್ಮೇನಿಧನಂ ಶ್ರೇಯಃ, ಪರಧರ್ಮೋ ಭಯಾವಹಃ' ಎಂಬೀ ನೀತಿಯಂತೆ, ತನ್ನ ಧರ್ಮವನ್ನು ಬಿಟ್ಟು ಪರಧರ್ಮವನ್ನೇಕೆ ಸ್ವೀಕರಿಸಿರುವೆ? ಅದಲ್ಲದೆ ನಿನ್ನಂತಹ ಕ್ರೂರರು ಎನ್ನಂತಹ ಅಬಲೆಯರನ್ನು ಈ ರೀತಿಯಾದ ಕಷ್ಟಕ್ಕೆ ಗುರಿಪಡಿಸಿ, ತನ್ನ ಕಾರ್ಯಸಿದ್ಧಿಯಾಗಬೇಕೆಂದು ಇಚ್ಛಿಸಿದರೆ, ನಿನ್ನ ಆತ್ಮಕಲ್ಯಾಣವೆಂದೂ ಆಗಲಾರದು. ಅದಂತಿರಲಿ. ಹೆಚ್ಚು

ಮಾತನಾಡಿ ಫಲವೇನು? ಈಗ ನೀನು ನಿನ್ನ ಪುತ್ರನ ಪ್ರೇಮದಿಂದಾಗಲಿ ದಯವಿಟ್ಟು ಮನೆಗೆ ಬರಬೇಕು.'' ಹೀಗೆಂದು ಹೇಳಿ ಸ್ವಲ್ಪ ಹೊತ್ತು ಸುಮ್ಮನಾದಳು. ಪರಂತು ಸೋಮದತ್ತಮುನಿಯು ಧ್ಯಾನನಿಮಗ್ನನಾಗಿದ್ದುದರಿಂದ ಆಕೆಯ ವಜ್ರಘಾತದಂತೆ ಕಠೋರವಾದ ಮಾತಿನಿಂದ ಸ್ವಲ್ಪವೂ ವಿಕಾರವನ್ನು ಹೊಂದದೆ, ತನ್ನ ಧ್ಯಾನದಿಂದ ವಿಚಲಿತನಾಗಲಿಲ್ಲ. ಇದನ್ನು ನೋಡಿ ಆಕೆಯು ಮತ್ತೂ ಅಧಿಕವಾದ ಕೋಪದಿಂದ ಸಂತಪ್ತಳಾಗಿ 'ಇಷ್ಟು ಹೇಳಿದರೂ ನಿನ್ನ ಹೃದಯದಲ್ಲಿ ದಯೆಯು ಉಂಟಾಗುವುದಿಲ್ಲವೆಂದ ಮೇಲೆ ಎನಗಾದರೂ ಈ ಪುತ್ರನಿಂದೇನು ಪ್ರಯೋಜನ? ಈ ನಿನ್ನ ಪುತ್ರನನ್ನು ತೆಗೆದುಕೋ, ಎಂದನ್ನುತ್ತಾ ಆ ಪಾಪಿಯಾದ ಬ್ರಾಹ್ಮಣೀಯು ಆ ಮಗುವನ್ನು ಆ ಮುನಿಯ ಪಾದಮೂಲದಲ್ಲಿ ಬಿಸಾಡಿ, ತನ್ನ ಬಂಧುಗಳೊಡನೆ ಹೇಳಿದಳು.

"ಈತನು ಈಗ ತನ್ನ ಮನಸ್ಸನ್ನು ಕಲ್ಲಿನಂತೆ ದೃಢಮಾಡಿರುವನು. ಇಷ್ಟು ಹೇಳಿಯೂ ಏನೂ ಫಲವಿಲ್ಲ. ಇದು ನನ್ನ ದುರ್ದೈವವೆನ್ನಬೇಕು. ನಾವೀಗ ಹಿಂತಿರುಗಿ ಹೋಗುವ'' ಎಂದು ಹೇಳಿದಳು. ಈ ಪ್ರಕಾರವಾದ ಆಕೆಯ ಮಾತನ್ನು ಕೇಳಿ ಬಂಧುಗಳಿಗೆ ಬಹಳ ವ್ಯಸನವಾಯಿತು. ಆದರೆ, ಮಾಡತಕ್ಕದ್ದೇನು? ಏನೂ ಉಪಾಯವಿಲ್ಲದೆ ಮಗುವನ್ನು ಅಲ್ಲಿಯೇ ಬಿಟ್ಟು ಎಲ್ಲರೂ ಹಿಂತಿರುಗಿ ಬಂದರು.

ವಾಚಕರೇ! ನೋಡಿ, ಸ್ತ್ರೀಚರಿತ್ರವು ಹೇಗಿದೆ? ಅವರು ಪ್ರಸಂಗಾನುಸಾರ ಎಂತಹ ಭಯಂಕರ ಕೃತ್ಯಗಳನ್ನೂ ಮಾಡುತ್ತಾರೆ. ಸ್ತ್ರೀಯರು ಅತ್ಯಂತ ಕೋಮಲಹೃದಯರೆಂದು ಪ್ರಸಿದ್ಧಿಯಿದ್ದರೂ ಸಂದರ್ಭಾನುಸಾರ ಚಾಂಡಾಲರಿಗಿಂತಲೂ ಕಠಿಣಹೃದಯರಾಗುವರು. ಅವರ ಮನೋನುಕೂಲವಾಗಿ ನಾವು ವರ್ತಿಸಿದರೆ ನಮ್ಮನ್ನು ಪ್ರೀತಿಸುವರು. ಇಲ್ಲವಾದರೆ ಕಲ್ಲಿನಂತೆ ಕಠಿನಹೃದಯರಾಗುವರು. ಈ ವಿಷಯುವು ಯಜ್ಞದತ್ತೆಯ ವರ್ತನೆಯಿಂದ ನಿಮಗೆ ಚೆನ್ನಾಗಿ ತಿಳಿಯದಿರಲಾರದು. ಆ ಚಾಂಡಾಲಿನಿಯು ಸಿಂಹವ್ಯಾಘ್ರ ಮೊದಲಾದ ಕ್ರೂರಪ್ರಾಣಿಗಳಿಗೆ ವಸತಿಸ್ಥಾನವೂ ಭಯಂಕರವೂ ಆದ ವನದಲ್ಲಿ ಅತ್ಯಂತ ಸುಕುಮಾರನಾದ ಪುತ್ರನನ್ನು ಬಿಸುಟು ಹೊರಟು ಹೋದಳೆಂದರೆ, ಆಕೆಯ ಕಠೋರಹೃದಯಕ್ಕೆ ಏನನ್ನಲಿ? ಅವಳ ಸ್ವಭಾವವನು

ವರ್ಣಿಸುತ್ತಾ ಹೋದರೆ ಒಂದು ಸ್ವತಂತ್ರ ಗ್ರಂಥವಾಗಬಹುದು. ಇರಲಿ.

ಅಮರಾವತಿಯೆಂಬ ನಗರದಲ್ಲಿ ತ್ರಿಶಂಕು ಎಂಬ ವಿದ್ಯಾಧರರಾಜನಿದ್ದನು. ಆತನಿಗೆ ದಿವಾಕರದೇವ ಮತ್ತು ಪುರಂದರದೇವನೆಂಬ ಎರಡು ಗಂಡು ಮಕ್ಕಳೂ ಸುದೇವಿಯೆಂಬ ಪುತ್ರಿಯೂ ಇದ್ದಳು. ಆಕೆಯನ್ನು ಹೇಮಪುರಿಯ ರಾಜನಾದ ಬಲವಾಹನನೆಂಬ ವಿದ್ಯಾಧರನಿಗೆ ಕೊಟ್ಟು ಲಗ್ನವಾಗಿತ್ತು. ಪರಂತು, ಆ ತ್ರಿಶಂಕುರಾಜನು ಜೈನಶಾಸ್ತ್ರದ ರಹಸ್ಯವನ್ನು ಚೆನ್ನಾಗಿ ತಿಳಿದಿರುವುದರಿಂದ, ಆತನು ಸಂಸಾರಭೋಗದಿಂದ ವಿರಕ್ತನಾಗಿದ್ದನು. ಆದ್ದರಿಂದ ತನ್ನ ಹಿರೇಮಗನಾದ ದಿವಾಕರದೇವನಿಗೆ ರಾಜ್ಯವನ್ನು ಕೊಟ್ಟು ತಾನು ಸುಪ್ರಭಸೂರಿಗಳೆಂಬ ಮುನಿಗಳ ಸಮೀಪದಲ್ಲಿ ಜಿನದೀಕ್ಷೆಯನ್ನು ಸ್ವೀಕರಿಸಿದನು. ದಿವಾಕರದೇವನ ತಮ್ಮನಾದ ಪುರಂದರದೇವನು ಬಹಳ ಕಪಟಿಯಾಗಿರುವುದರಿಂದ ತನ್ನ ಅಣ್ಣನ ಉತ್ಕರ್ಷತೆಯನ್ನು ನೋಡಿ ಸಹನವಾಗದೆ, ಉಪಾಯಾಂತರದಿಂದ ತನ್ನ ಅಣ್ಣನಿಂದ ರಾಜ್ಯವನ್ನು ತಾನು ಸ್ವಾಧೀನಪಡಿಸಿಕೊಂಡು, ಆತನನ್ನು ರಾಜ್ಯದಿಂದ ಹೊರಡಿಸಬೇಕೆಂದು ರಾತ್ರಿಹಗಲು ಪ್ರಯತ್ನಿಸುತ್ತಿದ್ದನು. ಹೀಗಿರುತ್ತಾ ಒಂದು ದಿನ ಉಭಯತರಿಗೂ ಪರಸ್ಪರ ಕಲಹವು ಉಂಟಾಗಿ ಕಿರಿಯವನು ಹಿರಿಯವನೊಡನೆ ಯುದ್ಧವನ್ನು ಮಾಡಿದನು ಪರಂತು, ದಿವಾಕರದೇವನು ಯುದ್ಧದಲ್ಲಿ ಅಪಜಯವನ್ನು ಹೊಂದಿದ ಕಾರಣ, ಪುರಂದರದೇವನು ಆತನನ್ನು ಹೊರಡಿಸಿ, ರಾಜ್ಯವನ್ನು ತನ್ನ ಸ್ವಾಧೀನ ಮಾಡಿಕೊಂಡನು. ಆದ್ದರಿಂದ ದಿವಾಕರದೇವನು ಬಹಳ ವಿರಕ್ತನಾಗಿ ತನ್ನ ಮಣಿಮಾಲೆಯೆಂಬ ಪತ್ನಿಯೊಡನೆ ತೀರ್ಥಯಾತ್ರೆಗೆ ಹೊರಟನು. ಆ ಮೇಲೆ ಆಕಾಶಮಾರ್ಗದಿಂದ ಹೋಗುತ್ತಾ ಹೋಗುತ್ತಾ ನಾಭಿಪರ್ವತಕ್ಕೆ ಬಂದನು. ಆಗ ಇಲ್ಲಿ ಯಾರೋ ಮುನಿಗಳು ತಪಸ್ಸನ್ನು ಮಾಡುತ್ತಿದ್ದಾರೆಂದು ತಿಳಿದು ಸಂತೋಷದಿಂದ ಅವರ ಸಮೀಪಕ್ಕೆ ಬಂದು ನಮಸ್ಕಾರವನ್ನು ಮಾಡಿದನು. ಅಷ್ಟರಲ್ಲಿ ಅವರ ಮುಂಭಾಗದಲ್ಲಿರುವ ಆ ಸುಂದರವಾದ ಮಗುವನ್ನು ನೋಡಿ, ಅವರೀರ್ವರೂ ಅತ್ಯಂತ ಆಶ್ಚರ್ಯಚಕಿತರಾಗಿ, ಅಕಟಕಟಾ! ಎಷ್ಟು ಸುಂದರವಾದ ಮುದ್ದು ಮೊಗವು? ' ಎಂದು ಹೇಳಿ, ದಿವಾಕರದೇವನು ಆನಂದಾತಿಶಯದಿಂದ ಆ ಮಗುವನ್ನು ತನ್ನ ಕೈಯಲ್ಲೆತ್ತಿಕೊಂಡು,

" ಪ್ರಿಯೇ! ನಿಜವಾಗಿಯೂ ಈ ಮಗುವು ಪುಣ್ಯಮೂರ್ತಿಯು. ಇಲ್ಲವಾದರೆ ಇಂತಹ ಭಯಂಕರವಾದ ಮೃಗಗಳಿಂದ ವ್ಯಾಪ್ತವಾದ ಈ ವನದಲ್ಲಿ ಸುರಕ್ಷಿತವಾಗಿ ಹೇಗಿರಭೇಕು? ಎಷ್ಟು ತೇಜಸ್ವಿಯಾಗಿದೆ? ಇದನು ನಿಜವಾಗಿ ಪುಣ್ಯಶಾಲಿಯಾಗಿರಬೇಕು, ಆದರೆ, ಶುಭ ಲಕ್ಷಣಗಳಿಂದ ಕೂಡಿರುವ ಈ ಮಗುವು ಯಾರ ಗರ್ಭದಲ್ಲಿ ಜನ್ಮಿಸಿರಬಹುದು ? ಇಲ್ಲಿ ಬರಲು ಕಾರಣವೇನು? ಯಾರೋ ಚಾಂಡಾಲರು ಪೂರ್ವಜನ್ಮದ ವೈರದಿಂದ ಇಲ್ಲಿ ತಂದು ಬಿಸಾಡಿರಬಹುದು. ಪರಂತು ಈ ಮುನಿಗಳ ಸಮೀಪವಿರಲು ಕಾರಣವೇನು? ಇವರಿಗೇನಾದರೂ ಸಂಬಂಧವಿರಲಾರದಷ್ಟೇ ? ಛೇ ! ಇಂತಹ ಉತ್ಕೃಷ್ಟ ಚಾರಿತ್ರಧಾರಿಗಳಾದ ಇವರಿಗೆ ವ್ಯರ್ಥವಾಗಿ ದೋಷಾರೋಪಣೆಯನ್ನು ಮಾಡುವುದರಿಂದ ಪಾಪಾಶ್ರವವಾಗುವುದು. ಪ್ರಿಯೇ ! ಅದೆಂತೂ ಇರಲಿ. ಈ ವಿಷಯದಲ್ಲಿ ಯಾವ ವಿಚಾರವೂ ನಮಗೆ ತಿಳಿಯದಿರಲು, ನಾವು ಅಲ್ಲ ಸಲ್ಲದ ವಿಕಲ್ಪಗಳನ್ನು ಮಾಡುವುದರಿಂದ ದೋಷಕ್ಕೆ ಪಾತ್ರರಾಗುವೆವು. ಆದ್ದರಿಂದ ಈ ಮಗುವನ್ನು ತೆಗೆದುಕೋ " ಎಂದು ಹೇಳಿ ತನ್ನ ಪತ್ನಿಯಾದ ಮಣಿಮಾಲೆಯ ಕೈಯಲ್ಲಿ ಕೊಟ್ಟನು.

ಆಕೆಯು ಆ ಮಗುವನ್ನು ತೆಗೆದುಕೊಂಡ ಕೂಡಲೇ ಆಕೆಗೆ ಬಹಳ ಸಂತೋಷವಾಯಿತು. ಮತ್ತು ಬಹಳ ಕೌತುಕದಿಂದ ಆ ಮಗುವಿನ ಸರ್ವಾವಯವಗಳನ್ನು ನೋಡುತ್ತಾ ಕೈಯಲ್ಲಿರುವ ವಜ್ರ ಮೊದಲಾದ ಶುಭ ಚಿಹ್ನೆಗಳನ್ನು ನೋಡಿ, ಆ ಬಾಲಕನಿಗೆ ವಜ್ರಕುಮಾರನೆಂಬ ನಾಮಧೇಯನ್ನಿಟ್ಟರು. ಆ ಮೇಲೆ ಅವರೀರ್ವರೂ ಆ ಮಗುವನ್ನು ತೆಗೆದುಕೊಂಡು ತಮ್ಮ ಸ್ಥಾನಕ್ಕೆ ತೆರಳಿದರು.

ವಾಚಕರೆ ! ಪುಣ್ಯಾತ್ಮರ ಚರಿತ್ರೆಯು ಅಚಿಂತ್ಯವಾದುದು. ಈ ಬಾಲಕನು ತನ್ನ ತಾಯಿಯಿಂದ ಪರಿತ್ಯಜಿಸಲ್ಪಟ್ಟವನಾಗಿ ಭಯಂಕರವಾದ ಪರ್ವತದಲ್ಲಿ ಒಬ್ಬನಾಗಿದ್ದರೂ, ಅವನ ಪೂರ್ವಸುಕೃತದಿಂದ ವಿದ್ಯಾಧರ ದೃಷ್ಟಿಪಾತ್ರನಾಗಿ ಸಂರಕ್ಷಿಸಲ್ಪಟ್ಟನು. ಆದ್ದರಿಂದ ಪುಣ್ಯಾತ್ಮರಿಗೆ ಮೂರು ಲೋಕದಲ್ಲಿಯೂ ದುಃಖವುಂಟಾಗಲಾರದು. ಅವರಿಗೆ ಎಂತಹ ಸಂಕಟ ಪ್ರಾಪ್ತವಾದರೂ ಅವರಪುಣ್ಯದಪ್ರಭಾವದಿಂದ ಕೂಡಲೇ ದೂರವಾಗುವದು,

ಅನಂತರ ಆ ಬಾಲಕನು ಬಿದಿಗೆಯ ಚಂದ್ರನಂತೆ ವೃದ್ಧಿಹೊಂದುತ್ತಾ ಆತನು ಎಲ್ಲರಿಗೂ ಅತ್ಯಾನಂದದಾಯಕನಾಗಿದ್ದನು. ಮುಂದೆ ಅವನಿಗೆ ಪ್ರಾಯಬಂದ ಮೇಲೆ ಅವನನ್ನು ವಿದ್ಯಾಭ್ಯಾಸಕ್ಕೋಸ್ಕರ ದಿವಾಕರದೇವನು ತನ್ನ ಮೈದುನನಾದ ಕನಕಪುರದ ವಿಮಲವಾಹನನ ಸಮೀಪಕ್ಕೆ ಕಳುಹಿಸಿ ಕೊಟ್ಟನು. ವಜ್ರಕುಮಾರನು ಸಹ ಕೆಲವು ದಿವಸಗಳಲ್ಲಿಯೇ ಪರಿಶ್ರಮ ಪೂರ್ವಕವಾಗಿ ವಿದ್ಯಾಭ್ಯಾಸವನ್ನು ಮಾಡಿ ಸರ್ವಶಾಸ್ತ್ರಸಂಪನ್ನನಾದನು. ಇದನ್ನುನೋಡಿ ತನ್ನ ಮಾವನಿಗೂ ಇತರ ವಿದ್ಯಾಧರರಿಗೂ ಬಹಳ ಆನಂದವಾಗುತ್ತಿತ್ತು. ಇದೆಲ್ಲಾ ಪುಣ್ಯದ ಪ್ರಭಾವವಲ್ಲವೇ? ಇಷ್ಟು ಸ್ವಲ್ಪ ಸಮಯದಲ್ಲಿ ಸರ್ವಶಾಸ್ತ್ರಸಂಪನ್ನನಾಗುವುದು ಪುಣ್ಯಾತ್ಮರಿಗಲ್ಲದೆ ಇತರರಿಗೆ ಅಸದಳವು.

ಗರುಡವೇಗನೆಂಬ ವಿದ್ಯಾಧರನಿಗೆ ಅಂಗಮತಿಯೆಂಬ ಸತಿಶಿರೋಮಣಿಯಾದ ಪತ್ನಿಯಿದ್ದಳು. ಇವರಿಗೆ ಸುಂದರಿಯೂ ಸದ್ಗುಣವತಿಯೂ ಆದ ಪವನವೇಗೆಯೆಂಬ ಪುತ್ರಿಯಿದ್ದಳು.ಒಂದಾನೊಂದು ದಿನ ಆಕೆಯುಪ್ರಜ್ಞಪ್ತಿಯೆಂಬ ವಿದ್ಯೆಯನ್ನು ಸಾಧಿಸುವುದಕ್ಕೋಸ್ಕರ ಹ್ರೀಮಂತ ಪರ್ವತಕ್ಕೆ ಹೋಗಿದ್ದಳು. ಅಲ್ಲಿ ಅಕಸ್ಮಾತ್ತಾಗಿ ಒಂದು ದೊಡ್ಡ ಜಂಝಾವಾತವು ಉಂಟಾಗಿ ಅದರೊಡನೆ ಒಂದು ಎಲಚಿ ಮರದ ಮುಳ್ಳು ಕಣ್ಣಿಗೆ ತಾಗಿ, ವಿದ್ಯೆಯನ್ನು ಸಾಧಿಸುವುದಕ್ಕೆ ತೊಂದರೆಯುಂಟಾದ್ದರಿಂದ ಕ್ರೀಡಾನಿಮಿತ್ತವಾಗಿ ಅಲ್ಲಿಗೆ ಬಂದಿದ್ದ ವಜ್ರಕುಮಾರನು ಇದನ್ನು ನೋಡಿ, ಆಕೆಯ ಕಣ್ಣಿಗೆ ನೋವಾಗದಂತೆ ಆ ಮುಳ್ಳನ್ನು ತೆಗೆದನು. ಆ ಮೇಲೆ ಆಕೆಯು ಪೂರ್ವವತ್ ಸ್ವಸ್ಥಚಿತ್ತಳಾಗಿ ಮಂತ್ರಸಿದ್ಧಿಯನ್ನು ಮಾಡಿ ಅನೇಕಕಾರ್ಯವನ್ನು ಮಾಡುವುದರಲ್ಲಿ ಸಮರ್ಥವಾದ ಪ್ರಜ್ಞಪ್ತಿಯೆಂಬ ವಿದ್ಯೆಯು ಸಾಧ್ಯವಾದ್ದರಿಂದ ಆಕೆಗೆ ಬಹಳ ಸಂತೋಷವಾಯಿತು. ಆಕೆಯು ಈ ಭಯಂಕರವಾದ ಪರ್ವತದಲ್ಲಿ ಒಬ್ಬಳೇ ಏನು ಮಾಡುವಳು? ಅದನ್ನು ನೋಡಬೇಕೆಂದು ಅವಳಿಗೆ ಕಾಣದಂತೆ ವಜ್ರಕುಮಾರನು ಮರೆಯಾಗಿ ನಿಂತುಕೊಂಡಿದ್ದನು ಆಕೆಯ ಮಂತ್ರಸಿದ್ಧಿಯು ಪೂರ್ತಿಯಾದ ನಂತರ ಸಮೀಪಕ್ಕೆ ಬಂದನು, ಪವನವೇಗೆಯು ಆತನನ್ನು ನೋಡಿ ತನ್ನ ಮನಸ್ಸಿನಲ್ಲಿ— "ಈ ಕುಮಾರನು ನನಗೆ ಬಹಳ ಉಪಕಾರವನ್ನು ಮಾಡಿರುವನು ಇವನಿಂದಲೇ ನನಗೆ ಈ

ವಿದ್ಯಾಸಿದ್ಧಿಯಾಯಿತು. ಇಲ್ಲವಾದರೆ ಅಸಂಭವವೆನ್ನಬೇಕು. ಆದ್ದರಿಂದ ಆತನನ್ನು ವರಿಸಿ, ಋಣಮುಕ್ತಳಾಗಬೇಕೆ''ಂದು ಯೋಚಿಸಿ, ವಜ್ರಕುಮಾರನ ಸಮೀಪಕ್ಕೆ ಬಂದು ಬಹಳ ವಿನಯದಿಂದ ಹೇಳಿದಳು. ''ಮಹಾಸ್ವಾಮಿ! ತಮ್ಮಗಳ ಅನುಗ್ರಹದಿಂದ ಎನಗೆ ಈ ವಿದ್ಯೆಯು ಪ್ರಾಪ್ತಿಯಾಯಿತು. ಈ ನನ್ನ ಕಾರ್ಯಸಿದ್ಧಿಗೆ ತಾವೇ ಕಾರಣಭೂತರು. ಆದ್ದರಿಂದ ತಮ್ಮನ್ನೇ ವರಿಸಬೇಕೆಂದು ನಾನು ನಿಶ್ಚೈಸಿರುವೆನು. ತಮ್ಮನ್ನು ಹೊರತು ಇತರ ಪುರುಷರೆಲ್ಲರೂ ನನಗೆ ಪಿತೃಸಮಾನರು. ನಾನು ತಮ್ಮನ್ನು ಮನಃಪೂರ್ವಕವಾಗಿ ವರಿಸಿರುವೆನು. ನಾನು ತಮ್ಮ ಚರಣದ ದಾಸಿಯಾಗಿರುವೆನು. ಆದ್ದರಿಂದ ತಾವು ಈ ಸೇವಕಿಯ ಪಾಣಿಗ್ರಹಣವನ್ನು ಮಾಡಿಕೊಂಡು ನನ್ನನ್ನು ತಮ್ಮ ಋಣದಿಂದ ಮುಕ್ತಳನ್ನಾಗಿ ಮಾಡಬೇಕೆಂದು ತಮ್ಮ ದಾಸಿಯ ಪ್ರಾರ್ಥನೆ. ಇನ್ನು ಮೇಲೆ ತಮ್ಮಂತಹ ಮಹಾಪುರುಷರಿಗೆ ಪತ್ನಿಯಾಗುವುದಕ್ಕೆ ನಾನು ಅಯೋಗ್ಯಳಾಗಿದ್ದರೆ, ಯದಿ ತಾವು ನನ್ನನ್ನು ಪಾಣಿಗ್ರಹಣ ಮಾಡಿಕೊಳ್ಳದಿದ್ದರೆ ನಾನು ನನ್ನ ದುರ್ದೈವವೆಂದು ತಿಳಿದು, ಇನ್ನು ಯಾರನ್ನೂ ಪಾಣಿಗ್ರಹಣ ಮಾಡಿಕೊಳ್ಳದೆ ತಮ್ಮನ್ನು ಚಿಂತಿಸುತ್ತಾ ಆಜನ್ಮ ಅವಿವಾಹಿತಳಾಗಿರುವುದೆಂದು ನಾನು ದೃಢನಿಶ್ಚಯವನ್ನು ಮಾಡಿರುವೆನು. ಆದ್ದರಿಂದ ಈ ತಮ್ಮ ಚರಣಸೇವಕಳನ್ನು ಪಾಣಿಗ್ರಹಣ ಮಾಡಿಕೊಳ್ಳುವುದಕ್ಕೆ ಅನುಮತಿಯನ್ನೀಯಬೇಕೆ''ಂದು ಪ್ರಾರ್ಥಿಸಿಕೊಂಡಳು. ಈ ರೀತಿಯಾದ ತನ್ನ ಮನೋರಥಕ್ಕೆ ಅನುಕೂಲವಾದ ಪವನವೇಗೆಯ ಮಾತನ್ನು ಕೇಳಿ ಬಹಳ ಸಂತುಷ್ಟನಾಗಿ, ನಾನಾ ವಿಧವಾದ ಮನೋಹರಸಲ್ಲಾಪಗಳಿಂದ ಆಕೆಯನ್ನು ಸಂತೋಷ ಪಡಿಸಿ, ಅವರೀರ್ವರೂ ತಮ್ಮ ತಮ್ಮ ಸ್ಥಾನಕ್ಕೆ ತೆರಳಿದರು.

ಆ ಮೇಲೆ ಪವನವೇಗೆಯು ತನ್ನ ಮನೆಗೆ ಹೋಗಿ, ಹ್ರೀಮಂತ ಪರ್ವತದಲ್ಲಿ ನಡೆದ ಎಲ್ಲಾ ಸಮಾಚಾರವನ್ನು ತನ್ನ ತಂದೆಗೆ ತಿಳಿಸಿ, ''ವಜ್ರಕುಮಾರನನ್ನೇ ಪಾಣಿಗ್ರಹಣ ಮಾಡಿಕೊಳ್ಳಬೇಕೆ''ಂದಳು. ಗರುಡವೇಗನೂ ಆಕೆಯ ದೃಢನಿಶ್ಚಯವನ್ನರಿತು ಸಂತುಷ್ಟನಾಗಿ, ಅವಳ ಇಚ್ಛೆಯಂತೆ ವಿವಾಹ ಕಾರ್ಯದಲ್ಲಿ ತೊಡಗಿದನು. ಇತ್ತ ದಿವಾಕರದೇವನೂ ಈ ವಾರ್ತೆಯನ್ನು

ಕೇಳಿ ಆನಂದಿತನಾಗಿ ಲಗ್ನ ಸಮಾರಂಭದಲ್ಲಿ ಸನ್ನದ್ಧನಾದನು. ಅನಂತರ
ಸುಮುಹೂರ್ತದಲ್ಲಿ ವಜ್ರಕುಮಾರನಿಗೆ ಪವನವೇಗೆಯೊಡನೆ ಬಹಳ
ವಿಜೃಂಭಣೆಯಿಂದ ಪಾಣಿಗ್ರಹಣವಾಯಿತು.

ಆ ಮೇಲೆ ಕೆಲವು ದಿವಸಗಳ ವರೆಗೆ ವಜ್ರಕುಮಾರನು ತನ್ನ ನೂತನ
ಪತ್ನಿಯೊಡನೆ ಸುಖವನ್ನನುಭವಿಸುತ್ತಿರಲು, ಒಂದು ದಿನ ತನ್ನ ಚಿಕ್ಕಪ್ಪನು
ತನ್ನ ತಂದೆಯಾದ ದಿವಾಕರದೇವನಿಂದ ರಾಜ್ಯವನ್ನು ಸ್ವಾಧೀನ ಮಾಡಿ
ಕೊಂಡಿರುವನೆಂಬೀ ವಾರ್ತೆಯನ್ನು ಕೇಳಿ, ಬಹಳ ಸಂತಪ್ತನಾಗಿ, "ತನ್ನ
ಚಿಕ್ಕಪ್ಪನನ್ನು ಪದಚ್ಯುತನನ್ನಾಗಿ ಮಾಡಿ, ತನ್ನ ತಂದೆಯನ್ನು ರಾಜನನ್ನಾಗಿ
ಮಾಡಬೇಕೆಂದು ನಿಶ್ಚೈಸಿ, ಈ ವಿಷಯವನ್ನು ತನ್ನತಂದೆಗೆ ತಿಳಿಸಿ ಅನುಮ
ತಿಯನ್ನು ಬೇಡಿದನು. ಆಗ ಆತನು ಕೂಡಾ ತನ್ನ ತಮ್ಮನಿಂದುಂಟಾದ
ಅಪಮಾನವನ್ನು ಸಹಿಸಲಾರದೆ, ಇದೇ ಸುಸಮಯವೆಂದರಿದು ಸಂತೋಷ
ದಿಂದ ಅನುಮತಿಯನ್ನಿತ್ತನು. ಕೂಡಲೇ ವಜ್ರಕುಮಾರನು ತನ್ನ ಪತ್ನಿಯ
ಪ್ರಜ್ಞಪ್ತಿಯೆಂಬ ವಿದ್ಯಾಸಾಮರ್ಥ್ಯದಿಂದ ಹೆಚ್ಚಾದ ಸೈನ್ಯವನ್ನು ತಯಾರಿಸಿ
ಕೊಂಡು, ತನ್ನ ತಂದೆಯೊಡನೆ ಸೇನಾಸಹಿತನಾಗಿ ಹೊರಟು, ಪುರಂದರದೇವ
ನೊಡನೆ ಯುದ್ಧಮಾಡುವುದಕ್ಕಾಗಿ ಅಮರಾವತಿಗೆ ಹೋದನು. ಇತ್ತ
ಪುರಂದರದೇವನೂ ಇವರು ಬರುವ ಸಮಾಚಾರವನ್ನು ಕೇಳಿ ತಾನು
ಸ್ವಲ್ಪವೂ ಹೆದರದೆ, ಅವನು ಯುದ್ಧಕ್ಕೆ ಸನ್ನದ್ಧನಾದನು.

ಇತ್ತ ವಜ್ರಕುಮಾರನೂ ಕೆಲವು ದಿವಸಗಳಲ್ಲಿಯೇ ಅಮರಾವತಿಗೆ
ಬಂದು ನಗರದ ಹೊರಗೆ ತನ್ನ ಬಿಡಾರವನ್ನು ಮಾಡಿ, ತಾನು ಬಂದ ಉದ್ದೇ
ಶವನ್ನು ಸೂಚಿಸಿ ತನ್ನ ಶತ್ರುವಿಗೆ ವರದಿಯನ್ನು ಕಳುಹಿದನು. ಅನಂತರ
ಉಭಯಪಕ್ಷದವರಿಗೂ ದೊಡ್ಡ ಯುದ್ಧವಾಗಿ ಪುರಂದರದೇವನು ಅಪಜಯ
ವನ್ನು ಹೊಂದಿದನು. ಆ ಮೇಲೆ ವಜ್ರಕುಮಾರನು ಬಹಳ ಆನಂದದಿಂದ ಅರ
ಮನೆಯನ್ನು ಪ್ರವೇಶಿಸಿ, ವಿಧಿಪೂರ್ವಕವಾಗಿ ತನ್ನ ತಂದೆಯನ್ನು ಸಿಂಹಾಸನ
ದಲ್ಲಿ ಕುಳ್ಳಿರಿಸಿ ರಾಜ್ಯಾಭಿಷೇಕವನ್ನು ಮಾಡಿದನು. ಮತ್ತು "ನಗರದಲ್ಲಿ ಇವ
ತ್ತಿನಿಂದ ನಮ್ಮ ಪೂರ್ವದ ದಿವಾಕರದೇವನೇ ರಾಜ್ಯಾಭಿಷಿಕ್ತನಾಗಿರುವನು ಎಲ್ಲ
ರೂ ಅವನ ಆಜ್ಞಾಧಾರಿಗಳಾಗಿರಬೇಕೆಂದು ಡಂಗುರವನ್ನು ಹೊಯಿಸಿದನು.

ವಜ್ರಕುಮಾರನ ಈ ಅಲೌಕಿಕವಾದ ಪರಾಕ್ರಮದಿಂದ ಆತನ ಕೀರ್ತಿಯು ದಿಗಂತವ್ಯಾಪಕವಾಗಿ ಎಲ್ಲಾ ವಿದ್ಯಾಧರರಿಂದಲೂ ಅತಿಶಯವಾಗಿ ಪೂಜ್ಯನಾದನು. ಈತನ ಉತ್ಕರ್ಷತೆಯನ್ನು ನೋಡಿ ಧರ್ಮಮಾತೆಯಾದ ಜಯಶ್ರೀಗೆ ಸಹನವಾಗದೆ ಮತ್ಸರದಿಂದ "ಈ ವಜ್ರಕುಮಾರನು ಬಹಳ ಚತುರನಾಗಿರುವುದರಿಂದ ತನ್ನ ಪತಿಯ ನಂತರ ಇವನಿಗೆ ರಾಜ್ಯಭೋಗವು ಸಿಕ್ಕುವದಲ್ಲದೆ ತನ್ನ ಮಗನಿಗೆ ಪ್ರಾಪ್ತವಾಗಲಾರದು. ಅದಲ್ಲದೆ ಎಲ್ಲರಿಂದಲೂ ಮಾನ್ಯತೆಯು ಇವನಿಗೆ ಉಂಟಾಗುವುದು. ಅವನನ್ನು ಯಾರೂ ವಿಚಾರಿಸುವುದಿಲ್ಲವು. ಆದ್ದರಿಂದ ಯಾವುದಾದರೊಂದು ಉಪಾಯದಿಂದ ಈತನನ್ನು ಇಲ್ಲಿಂದ ಹೊರಡಿಸಬೇಕೆ"ಂದು ನಿಶ್ಚೈಸಿದಳು.

ವಾಚಕರೇ! ನೋಡಿ, ಸ್ತ್ರೀಯರ ಸ್ವಭಾವವು ಹೇಗಿದೆ? ವಾಸ್ತವಿಕವಾಗಿ ನೋಡಿದರೆ ವಜ್ರಕುಮಾರನೇ ತನ್ನ ಪರಾಕ್ರಮದಿಂದ ತನ್ನ ಪತಿ—ದಿವಾಕರದೇವನ ಕಳೆದು ಹೋದ ರಾಜ್ಯವನ್ನು ಪುನಃ ಸ್ವಾಧೀನ ಮಾಡಿಕೊಟ್ಟವನು. ಆ ವಿಷಯವಾಗಿ ಆತನ ಉಪಕಾರವನ್ನು ಸ್ಮರಿಸದೆ, ಮತ್ಸರದಿಂದ ಕೊನೆಗೆ ಇವನನ್ನೇ ನಾಶಮಾಡಲು ಉದ್ಯುಕ್ತಳಾದಳು. ಆದ್ದರಿಂದಲೇ "ಸ್ತ್ರೀಬುದ್ಧಿರ್ನೈವ ನಿಶ್ಚಲಾ" ಎಂದು ಕವಿಗಳು ಹೇಳುತ್ತಾರೆ.

ಜಯಶ್ರೀಯು ಈ ಪ್ರಕಾರವಾಗಿ ವಿಚಾರಮಾಡಿ, ಒಂದು ದಿವಸ ವಜ್ರಕುಮಾರನನ್ನು ಕುರಿತು, ಬಹಳ ಕ್ರೋಧದಿಂದ, "ನೋಡು ಏನಾಶ್ಚರ್ಯ! ಇವನು ಯಾರ ಮಗ! ಈ ದುಷ್ಟನು ವಿನಾಕಾರಣವಾಗಿ ನನಗೇಕೆ ಸಂತಾಪವನ್ನುಂಟು ಮಾಡುತ್ತಿದ್ದಾನೆ? ಜನಗಳೇಕೆ ಇವನಿಗೆ ಸತ್ಕಾರವನ್ನು ಮಾಡುವರೋ? ನಾನರಿಯೆ! ನಾನಾದರೋ ಇವನಿಗೆ 'ಕುಪುತ್ರ' ನೆನ್ನುವೆನು" ಈ ಪ್ರಕಾರವಾದ ಆಕೆಯ ಮಾತನ್ನು ಕೇಳುತ್ತಲೇ ವಜ್ರಕುಮಾರನಿಗೆ ಬಹಳ ವ್ಯಸನವಾಗಿ, ಅವಳು ಹೀಗೆ ಏಕೆ ಹೇಳಿದಳು? ಅದನ್ನು ತಿಳಿಯಬೇಕೆಂದು ತನ್ನ ತಂದೆಯ ಸಮೀಪಕ್ಕೆ ಹೋಗಿ, 'ತಾತನೆ! ನಾನು ಯಾರ ಮಗನೆಂದು ದಯವಿಟ್ಟು ತಿಳಿಸಬೇಕೆಂದು ಬೇಡಿಕೊಂಡನು. ದಿವಾಕರದೇವನು ಈತನ ಅಕಲ್ಪಿತವಾದ ಪ್ರಶ್ನೆಯನ್ನು ಕೇಳಿ ವಿಸ್ಮಿತನಾಗಿ "ವಜ್ರಕುಮಾರ! ನಿನಗೇನು ಭ್ರಮೆಯುಂಟಾಗಿದೆಯೋ? ಇಲ್ಲವಾದರೆ ಇಂತಹ ದುಃಖಕರವಾದ ಪ್ರಶ್ನೆಯನ್ನೇಕೆ ವಿಚಾರಿಸುವೆ?"

“ಎಲೈ ತಂದೆಯೆ! ಈಗ ನನಗೇನೂ ಭ್ರಮೆಯುಂಟಾಗಲಿಲ್ಲ. ನನ್ನ ಚಿತ್ತವು ಬಹಳ ಶಾಂತವಾಗಿದೆ. ತಾವು ದಯವಿಟ್ಟು ನಿಜವಾದ ಸಂಗತಿಯನ್ನು ತಿಳಿಸಬೇಕೆ”ಂದು ವಜ್ರಕುಮಾರನು ಪುನಃ ಹೇಳಿದನು. ಆ ಮೇಲೆ ದಿವಾಕರದೇವನು ಉಪಾಯವಿಲ್ಲದೆ ಆತನ ಬಾಲ್ಯಕಾಲ ಮೊದಲುಗೊಂಡು ಎಲ್ಲಾ ವಿಷಯಗಳನ್ನು ಸವಿಸ್ತರವಾಗಿ ತಿಳಿಸಿದನು. ಕುಮಾರನು ವಿಲಕ್ಷಣವಾದ ಈ ಚರಿತ್ರೆಯನ್ನು ಕೇಳಿದ ಕೂಡಲೇ ಸಂಸಾರದಿಂದ ವಿರಕ್ತನಾಗಿ ಸೋಮದತ್ತಮುನಿಗಳ ದರ್ಶನಕ್ಕೋಸ್ಕರ ಹೋಗಬೇಕೆಂದು ದಿವಾಕರದೇವನನ್ನು ಪ್ರಾರ್ಥಿಸಿಕೊಂಟನು. ಆತನೂ ಸಂತೋಷದಿಂದ ತನ್ನ ಪರಿವಾರದೊಡನೆ ಮುನಿಗಳ ವಂದನಾನಿಮಿತ್ತವಾಗಿ ವಿಮಾನದಿಂದ ಹೊರಟು, ಕೆಲವು ಸಮಯಗಳೊಳಗೆ ಮಥುರೆಯ ಸಮೀಪದಲ್ಲಿರುವ ಕ್ಷತ್ರಿಯವೆಂಬ ಗುಹೆಯಲ್ಲಿ ತಪಸ್ಸನ್ನು ಮಾಡುತ್ತಿರುವ ಸೋಮದತ್ತ ಮುನಿಗಳ ಹತ್ತರ ಬಂದರು. ಅಲ್ಲಿ ಅವರ ದರ್ಶನನಿಮಿತ್ತವಾಗಿ ಬಂದಿರುವ ಭವ್ಯ ಜೀವರು ಅವರಿಗೆ ಭಕ್ತಿಯಿಂ ತ್ರಿಃಪ್ರದಕ್ಷಿಣಾಸಹಿತವಾಗಿ ವಂದನೆ ಪಾದಪೂಜೆ ಮೊದಲಾದುವುಗಳನ್ನು ಮಾಡಿ ಧರ್ಮೋಪದೇಶವನ್ನು ಕೇಳುವುದಕ್ಕೋಸ್ಕರ ವಿನಯದಿಂದ ಕುಳಿತಿದ್ದರು. ಕೆಲವು ಸಮಯದಲ್ಲಿ ಮುನಿಗಳ ಧ್ಯಾನವು ಪೂರ್ತಿಯಾದನಂತರ ದಿವಾಕರದೇವನು ಮುಂದೆ ಬಂದು ಮುನಿಗಳಿಗೆ ನಮಸ್ಕಾರವನ್ನು ಮಾಡಿ, ಈ ವಜ್ರಕುಮಾರನ ವೃಂತಾಂತವನ್ನೆಲ್ಲಾ ತಿಳಿಸಿದನು. ಮತ್ತು ವಜ್ರಕುಮಾರನನ್ನು ತನ್ನ ಸಮೀಪಕ್ಕೆ ಕರೆದು, ಈತನೇ ತಮ್ಮ ಪಾದಮೂಲದಲ್ಲಿ ಅಂದು ಬಿದ್ದಿದ್ದ ಮಗುವು ಎಂದು ತೋರಿಸಿದನು. ಆಗ ವಜ್ರಕುಮಾರನು ಅವರಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಲು ‘ಧರ್ಮವೃದ್ಧಿರಸ್ತು’ ಎಂದು ಆಶೀರ್ವಾದವನ್ನಿತ್ತರು. ಆ ಮೇಲೆ ವಜ್ರಕುಮಾರನು ಎನಗೆ ಜಿನದೀಕ್ಷೆಯನ್ನು ಸ್ವೀಕರಿಸುವುದಕ್ಕೆ ಇದೇ ಸುಸಮಯವೆಂದರಿದು, ತನ್ನ ರಕ್ಷಕನಾದ ದಿವಾಕರದೇವನೊಡನೆ, “ತಾತನೇ! ಆತ್ಮಕಲ್ಯಾಣವನ್ನು ಮಾಡುವುದಕ್ಕೋಸ್ಕರ ಜಿನದೀಕ್ಷೆಯನ್ನು ಅಂಗೀಕರಿಸಿ ಸಂಸಾರಸಮುದ್ರದಿಂದ ಪಾರಾಗಬೇಕೆಂದು ನಿಶ್ಚೈಸಿರುವೆನು. ಈ ವಿಷಯದಲ್ಲಿ ತಾವು ನನಗೆ ಅಪ್ಪಣೆಯನ್ನೀಯಬೇಕೆ”ಂದನು. ಈ ಮಾತನ್ನು ಕೇಳುತ್ತಲೇ ದಿವಾಕರ

ದೇವನಿಗೆ ಬಹಳ ವ್ಯಸನವಾಗಿ, "ವಜ್ರಕುಮಾರಾ! ನಿನ್ನ ಸಹಾಯದಿಂದ ನಾನು ಈಗ ದೀಕ್ಷೆಯನ್ನು ಸ್ವೀಕರಿಸಬೇಕು. ನೀನು ನನ್ನ ರಾಜ್ಯಭೋಗಗಳನ್ನು ಅನುಭವಿಸುತ್ತಾ ರಾಜ್ಯವನ್ನಾಳುತ್ತಿರಬೇಕಲ್ಲದೆ, ನೀನೇ ದೀಕ್ಷೆಯನ್ನು ತೆಗೆದುಕೊಳ್ಳಬೇಕೆಂದು ಅಪ್ಪಣೆಯನ್ನು ಕೇಳುತ್ತೀ, ಇದೇನಾಶ್ಚರ್ಯ?" ಎಂದು ಈ ಪ್ರಕಾರವಾದ ಮಧುರವಚನದಿಂದ ಅವನನ್ನು ಸಮಾಧಾನಪಡಿಸಿದರೂ ತನ್ನ ಸ್ಥಿರವಾದ ಸಂಕಲ್ಪದಿಂದ ವಿಚಲಿತನಾಗಲಿಲ್ಲ. ಆ ಮೇಲೆ ದಿವಾಕರದೇವನು ನಿರುಪಾಯನಾಗಿ ಆತನಿಗೆ ಅನುಮತಿಯನ್ನಿತ್ತು ಸ್ವಸ್ಥಾನಕ್ಕೆ ಹೋದನು.

ಇತ್ತ ವಜ್ರಕುಮಾರನು ಸೋಮದತ್ತಮುನಿಗಳ ಸಮೀಪದಲ್ಲಿ ವಿಧಿಪೂರ್ವಕವಾಗಿ ಜಿನದೀಕ್ಷೆಯನ್ನು ಸ್ವೀಕರಿಸಿದನು, ಆ ಮೇಲೆ ತನ್ನ ಗುರುಗಳ ಸಮೀಪದಲ್ಲಿ ನಾನಾ ಶಾಸ್ತ್ರಗಳನ್ನು ಅಭ್ಯಾಸ ಮಾಡಿ ಉತ್ಕೃಷ್ಟವಾದ ಸಂಯಮವನ್ನು ಪಾಲಿಸುತ್ತಾ ಘೋರವಾದ ತಪಸ್ಸನ್ನು ಮಾಡುತ್ತಿರುವಾಗ ವಜ್ರಕುಮಾರಮುನಿಗೆ—ಚಾರಣಋದ್ಧಿಯು ಪ್ರಾಪ್ತವಾಯಿತು.

ಮಧುರಾನಗರದಲ್ಲಿ ಪೂತಿಗಂಧನೆಂಬ ರಾಜನು ತನ್ನ ಊರ್ವಿಲೆಯೆಂಬ ಪತ್ನಿಯೊಡನೆ ಸುಖವಾಗಿ ರಾಜ್ಯವನ್ನಾಳುತ್ತಿದ್ದನು. ಆ ಊರ್ವಿಲೆಯು ಯಾವಾಗಲೂ ದಾನ ಪೂಜೆ ಉಪವಾಸ ಮೊದಲಾದುವುಗಳಲ್ಲಿ ನಿರತಳಾಗಿ ಜೈನಧರ್ಮದ ಪ್ರಭಾವನೆಯಲ್ಲಿ ಅತ್ಯಂತ ಆಸಕ್ತಳಾಗಿದ್ದಳು. ಆಕೆಯು ನಂದೀಶ್ವರಪರ್ವದ ಅಷ್ಟಾಹ್ನಿಕದಲ್ಲಿ ದೊಡ್ಡ ಸಂಘವನ್ನು ಸೇರಿಸಿ ಬಹಳ ಭಕ್ತಿಯಿಂದ ಶ್ರೀಜಿನೇಶ್ವರರ ರಥೋತ್ಸವವನ್ನು ಮಾಡಿಸುತ್ತಿದ್ದಳು.

ಆ ಮಧುರಾನಗರದಲ್ಲಿ ಸಾಗರದತ್ತನೆಂಬ ಶ್ರೇಷ್ಠಿಯು ತನ್ನ ಲಾವಣ್ಯವತಿಯಾದ ಸಮುದ್ರದತ್ತೆಯೆಂಬ ಪತ್ನಿಯೊಡನೆ ಸುಖವಾಗಿದ್ದು, ಈರ್ವರೂ ಜೈನಧರ್ಮವನ್ನು ಪಾಲಿಸುತ್ತಿದ್ದರು. ಇವರಿಗೆ ದರಿದ್ರೆಯೆಂಬ ಹೆಸರುಳ್ಳ ಒಬ್ಬಳು ಹೆಣ್ಣು ಮಗಳಿದ್ದಳು. ಆಕೆಯು ತನ್ನ ಹೆಸರಿಗೆ ತಕ್ಕಂತೆ, ಜನ್ಮಾಂತರದ ಪಾಪದ ಫಲದಿಂದ ದರಿದ್ರಳಾಗಿ ತನ್ನ ತಾಯಿತಂದೆಗಳ ಮನೆಯಲ್ಲಿಯೂ ಇದ್ದ ದ್ರವ್ಯವೆಲ್ಲಾ ನಾಶವಾಗಿ ದಾರಿದ್ರ್ಯದುಃಖವನ್ನು ಅನುಭವಿಸಬೇಕಾಗಿತ್ತು. ಆ ಮೇಲೆ ಕೆಲವು ದಿವಸಗಳಲ್ಲಿ ಆಕೆಯ ಬಂಧುಗಳೆಲ್ಲರೂ

ಮರಣವನ್ನು ಹೊಂದಿ, ಮುಂದೆ ಆಕೆಯು ಹೆಚ್ಚಾದ ದುಃಖಕ್ಕೆ ಭಾಗಿಯಾದಳು. ಅಂದರೆ ತನ್ನ ಜೀವನೋಪಾಯಕ್ಕೆ ಏನೂ ಗತಿಯಿಲ್ಲದೆ ಇತರರು ಬಿಸಾಡಿದ ಉಚ್ಛಿಷ್ಟವನ್ನು ಭಕ್ಷಿಸುತ್ತಾ ಕಷ್ಟದಿಂದ ತನ್ನ ಜೀವನವನ್ನು ಕಳೆಯುತ್ತಿದ್ದಳು.

ಈ ಪ್ರಕಾರವಾಗಿ ಆ ದರಿದ್ರೆಯು ದಾರಿದ್ರ್ಯದುಃಖದ ಅಸಹ್ಯವೇದನೆಯನ್ನು ಅನುಭವಿಸುತ್ತಿರುವಾಗ ಆ ನಗರಕ್ಕೆ ಚಾರಣಋದ್ಧಿಸಂಪನ್ನರಾದ ನಂದನ, ಮತ್ತು ಅಭಿನಂದನರೆಂಬ ಮುನಿಗಳೀರ್ವರು ಆಹಾರನಿಮಿತ್ತವಾಗಿ ಬಂದರು. ಆ ಪೈಕಿ ನಂದನರು ಅಭಿನಂದನ ಮುನಿಗಳಿಗಿಂತ ಜ್ಞಾನವೃದ್ಧರೂ ವಯೋವೃದ್ಧರೂ ಆಗಿದ್ದರು. ಆಗ ಅಭಿನಂದನಮುನಿಗಳು ಈ ಉಚ್ಛಿಷ್ಟವನ್ನು ಭಕ್ಷಿಸುತ್ತಿರುವ ದರಿದ್ರೆಯೆಂಬ ಬಾಲಕಿಯನ್ನು ನೋಡಿ, "ಅಯ್ಯೋ ಪಾಪ! ಈಕೆಯ ಜೀವನವು ಎಷ್ಟು ಕಷ್ಟತರವಾದುದು? ಈಕೆಗೆ ಬಾಲ್ಯಕಾಲದಲ್ಲಿಯೇ ಇಂತಹ ಭಯಂಕರವಾದ ದುಃಖವನ್ನನುಭವಿಸಬೇಕಾಯಿತು. ಈಕೆಯು ಪೂರ್ವಜನ್ಮದಲ್ಲಿ ಎಂತಹ ಪಾಪಕರ್ಮವನ್ನು ಮಾಡಿರುವಳೋ ಯಾರು ಬಲ್ಲರು?" ಇಂತೆಂದರು. ಇದನ್ನು ಅವಧಿಜ್ಞಾನಿಗಳಾದ ನಂದನಮುನಿಗಳು ಕೇಳಿ, ಅವರು ತನ್ನ ಜ್ಞಾನದ ಬಲದಿಂದ ಅವಳ ಭವಿಷ್ಯತೆಯನ್ನರಿದು, "ಮುನೀಶ್ವರರೇ! ತಮ್ಮ ಮಾತು ನಿಜವಾದುದು. ಪರಂತು, ಈಕೆಯು ಇನ್ನು ಮುಂದಕ್ಕೆ ಇಲ್ಲಿಯ ಪೂತಿಗಂಧನೆಂಬ ರಾಜನಿಗೆ ಅತ್ಯಂತ ಪ್ರೀತಿಪಾತ್ರಳಾದ ಪಟ್ಟರಾಣಿಯಾಗುವಳು" ಎಂದು ಹೇಳಿದರು. ಇದನ್ನು ಕೇಳಿ ಅಭಿನಂದನಮುನಿಗಳಿಗೆ ಬಹಳ ಆಶ್ಚರ್ಯವಾಯಿತು.

ಈ ಪೂರ್ವೋಕ್ತವಾದ ಮುನಿಗಳ ಸಂಭಾಷಣೆಯನ್ನು ಅದೇ ನಗರದಲ್ಲಿ ಭಿಕ್ಷಾನಿಮಿತ್ತವಾಗಿ ತಿರುಗುತ್ತಿರುವ ಧರ್ಮಶ್ರೀವಂದಕನೆಂಬ ಬೌದ್ಧ ಸನ್ಯಾಸಿಯು ಕೇಳಿದನು. ಆಗ ಆತನು, "ಜೈನಸಾಧುಗಳ ವಚನವು ಎಂದೂ ಸುಳ್ಳಾಗಲಾರದು. ಈಕೆಯನ್ನು ನಾನು ನನ್ನ ಮನೆಗೆ ಕರಕೊಂಡು ಹೋಗಿ ಚೆನ್ನಾಗಿ ಪೋಷಿಸಿದರೆ ಈಕೆಯಿಂದ ನನಗೆ ಬಹಳ ಲಾಭವಾಗುವ ಸಂಭವವಿದೆ" ಎಂದು ಯೋಚಿಸಿ, ಆ ಸನ್ಯಾಸಿಯು ಆಕೆಯನ್ನು ಕರಕೊಂಡು ಹೋಗಿ ಯೋಗ್ಯ ರೀತಿಯಿಂದ ಅನ್ನ ವಸ್ತ್ರಗಳನ್ನು ಕೊಟ್ಟು ಪಾಲಿಸುತ್ತಿದ್ದನು. ಹೀಗಿರುವಾಗ ಆಕೆಯು ತನ್ನ ಪೂರ್ವದ ದುಃಖವನ್ನು ಮರೆತು ಸುಖವಾಗಿದ್ದಳು.

ಆಕೆಗೆ ಆ ಬೌದ್ಧಸನ್ಯಾಸಿಯ ಮನೆಯಲ್ಲಿ ಭೋಜನ ಮೊದಲಾದು ವುಗಳಿಗೆ ಯಾವ ವಿಧದ ತೊಂದರೆಯು ಇಲ್ಲದಿರುವುದರಿಂದ ಆಕೆಯು ಶರೀರದಲ್ಲಿ ಸುದೃಢಳಾಗಿ ಯೌವನಾವಸ್ಥೆಯನ್ನು ಹೊಂದಿದ ಕಾರಣ ದಿನೇ ದಿನೇ ಆಕೆಯ ಮುಖಕಮಲದಲ್ಲಿ ಒಂದು ನೂತನವಾದ ಕಳೆಯೇರಿತು. ಹೀಗಿರಲೊಂದು ದಿನ ವಸಂತಋತುವಿನಲ್ಲಿ ನವಯೌವನಸಂಪನ್ನೆಯಾದ ದರಿದ್ರೆಯು ಉದ್ಯಾನದಲ್ಲಿ ಆಂದೋಲನವನ್ನು ಮಾಡುತ್ತಿರುವಾಗ ದೈವ ಯೋಗದಿಂದ ಆ ನಗರದ ಪೂತಿಗಂಧರಾಜನು ಆಕೆಯನ್ನು ನೋಡಿ ಮೋಹಿತನಾಗಿ ಆಕೆಯನ್ನು ಕರತರುವುದಕ್ಕೋಸ್ಕರ ತನ್ನ ಮಂತ್ರಿಯನ್ನು ಆ ಬೌದ್ಧ ಸನ್ಯಾಸಿಯ ಮನೆಗೆ ಕಳುಹಿಸಿದನು. ಈ ರೀತಿಯಾಗಿ ಮಂತ್ರಿಯು ಅಲ್ಲಿಗೆ ಹೋಗಿ, "ಎಲೈ ವಂದಕನೇ! ರಾಜನು ನಿನ್ನ ಪುತ್ರಿಯಲ್ಲಿ ಮುಗ್ಧನಾಗಿರುವನು. ಆದ್ದರಿಂದ ಆಕೆಯನ್ನು ಕರತರುವಂತೆ ನನ್ನನ್ನು ಕಳುಹಿಸಿರುವನು. ಆದ ಕಾರಣ ಆಕೆಯ ಅದೃಷ್ಟವು ಉದಯವಾಯಿತೆನ್ನಬೇಕು. ಆದಕಾರಣ ನೀನು ಇಂತಹ ಸುಸಂದರ್ಭವನ್ನು ವ್ಯರ್ಥವಾಗಿ ಕಳೆದುಕೊಳ್ಳದೆ ಅವನಿಗೆ ಕನ್ಯಾದಾನವನ್ನು ಮಾಡಿ ಧನ ಮೊದಲಾದುವುಗಳಿಂದ ಸುಖವಂತನಾಗು ಇಂತೆಂದನು. ಆಗ ಬೌದ್ಧಗುರುವು "ಒಳ್ಳೆದು, ರಾಜನು ನನ್ನ ಮನೋರಥವನ್ನು ಪೂರ್ತಿ ಮಾಡುವುದಾದರೆ ನನ್ನ ಪುತ್ರಿಯನ್ನು ಅವನಿಗೆ ಕೊಡುವೆನು. ಆದರೆ ರಾಜನು ನಮ್ಮ ಬೌದ್ಧಧರ್ಮವನ್ನು ಸ್ವೀಕರಿಸಬೇಕು." ಎಂದು ಹೇಳಿದನು. ಈ ವಿಚಾರವನ್ನು ಮಂತ್ರಿಯು ರಾಜನಿಗೆ ತಿಳಿಸಿದನು. ರಾಜನು ಕಾಮಾಂಧನಾಗಿರುವುದರಿಂದ ಆ ಅವನ ದುರಾಗ್ರಹಕ್ಕೂ ಅನುಮತಿಯನ್ನಿತ್ತು ಬಹಳ ಸಂತೋಷದಿಂದ ಆ ದರಿದ್ರೆಯೊಡನೆ ಪಾಣಿಗ್ರಹಣವನ್ನು ಮಾಡಿಕೊಂಡನು. ನಿಜವಾಗಿಯೂ ಕಾಮುಕರಿಂದ ಯಾವ ಯಾವ ಅನರ್ಥಗಳುಂಟಾಗುವುದಿಲ್ಲವು ? ದುರ್ಲಭವೂ ಶ್ರೇಷ್ಠವೂ ಆದ ಜೈನಧರ್ಮವನ್ನೂ ಕೂಡ ಪರಿತ್ಯಜಿಸಲು ರಾಜನು ಹಿಂಜರಿಯಲಿಲ್ಲವು. ಧಿಕ್ಕಾರವಿರಲಿ ಈ ಕಾಮುಕತನಕ್ಕೆ! ಈ ಕಾಮಾಂಧರು ತನ್ನ ಕೈಯಲ್ಲಿರುವ ಜಾತಿರತ್ನವನ್ನೂ ತ್ಯಜಿಸಿ, ಗಾಜಿನ ಮಣಿಯನ್ನು ರತ್ನವೆಂದು ಪರಿಭ್ರಮಿಸಿ ಸ್ವೀಕರಿ

ಸೇವರು. ಸರ್ವತ್ರ ಕಾಮುಕರ ಪರಿಸ್ಥಿತಿಯಿದು. ಆದ್ದರಿಂದ ಪ್ರಾಜ್ಞರು ಇದರಿಂದ ದೂರವಾಗಿರುವುದೇ ಉತ್ತಮ.

ದರಿದ್ರೆಯು ತನ್ನ ಪೂರ್ವದ ಹೆಸರನ್ನು ಬಿಟ್ಟು ಬುದ್ಧದಾಸಿಯೆಂದು ಹೇಳಿಕೊಳ್ಳುತ್ತಿದ್ದಳು. ರಾಜನು ಆಕೆಯಲ್ಲಿ ಬಹಳ ಮೋಹಿತನಾಗಿದ್ದ ಕಾರಣ ಆಕೆಯನ್ನು ಪಟ್ಟರಾಣಿಯನ್ನಾಗಿ ಮಾಡಿದ್ದನು. ಆದ್ದರಿಂದ ಆಕೆಗೆ ಸ್ವಾತಂತ್ರ್ಯವುಂಟಾಗಿ ದಿನೇ ದಿನೇ ತನ್ನ ಬೌದ್ಧಧರ್ಮದ ಪ್ರಚಾರವನ್ನು ಮಾಡುತ್ತಿದ್ದಳು. ರಾಜನೂ ಜೈನಧರ್ಮವನ್ನು ಬಿಟ್ಟು ಬೌದ್ಧಧರ್ಮವನ್ನು ಅಂಗೀಕರಿಸಿದನೆಂದು ಮೊದಲೇ ಬರೆದಿರುವೆವಷ್ಟೇ ? ಆದ್ದರಿಂದ ರಾಜನು ಆಕೆಯ ಮನಸ್ಸಿಗೆ ವಿರೋಧವಾಗದಂತೆ ಅವಳ ಇಚ್ಛೆಯನ್ನು ಪೂರ್ತಿಮಾಡುತ್ತಿದ್ದನು.

ಅತ್ತ ರಾಜನ ಪಟ್ಟರಾಣಿಯಾದ ಊರ್ವಿಲೆಯು ಮಾತ್ರ ದಿನೇ ದಿನೇ ಕಠಿನಾವಸ್ಥೆಯನ್ನು ಹೊಂದುತ್ತಿದ್ದಳು. ಆಕೆಯನ್ನು ಯಾರು ವಿಚಾರಿಸುತ್ತಾರೆ! ರಾಜನು ಬುದ್ಧದಾಸಿಯ ಮೋಹಪಾಶದಲ್ಲಿ ಮಗ್ನನಾಗಿ, ಎಲ್ಲಿ ನೋಡಿದರೂ ಅಲ್ಲಿ ಬುದ್ಧದಾಸಿಯ ಪ್ರಭಾವವೇ ವ್ಯಾಪಕವಾಗಿತ್ತು. ಆದರೂ ಊರ್ವಿಲೆಯು ಸವತಿಮತ್ಸರವನ್ನು ಮಾಡದೆ ತನ್ನ ಪತಿಯಲ್ಲಿ ನಿಷ್ಕಪಟ ಪ್ರೇಮದಿಂದ ವರ್ತಿಸುತ್ತಾ, ಪೂರ್ವದಂತೆ ದಾನಪೂಜಾದಿಗಳಲ್ಲಿ ನಿರತಳಾಗಿದ್ದಳು. ಪತಿವ್ರತೆಯರು ಸವತಿಮತ್ಸರದಿಂದ ತನ್ನ ಯಜಮಾನನ ಮೇಲಿರುವ ಶುದ್ಧಪ್ರೇಮವನ್ನು ಕಮ್ಮಿಯಾಗುವಂತೆ ಮಾಡುವುದಿಲ್ಲವು. ಆದಕಾರಣ ಅವರೇ ಧನ್ಯವಾದಕ್ಕೆ ಅರ್ಹರು.

ಅನಂತರ ಫಾಲ್ಗುಣ ಮಾಸದ ಅಷ್ಟಾಹ್ನಿಕದಲ್ಲಿ ನಿತ್ಯಕ್ರಮದಂತೆ ಮಹಾಪೂಜೆಯ ಸಮಯದಲ್ಲಿ ಮೆರವಣಿಗೆಗೋಸ್ಕರ ತಯಾರಿಸಿರುವುದೂ ಸುವರ್ಣನಿರ್ಮಿತವೂ ಛತ್ರಚಾಮರ ಮೊದಲಾದವುಗಳಿಂದಲಂಕೃತವೂ ರತ್ನನಿರ್ಮಿತವಾದ ಜಿನಪ್ರತಿಮೆಯಿಂದ ವಿರಾಜಿಸಲ್ಪಟ್ಟುದೂ ಆದ ಊರ್ವಿಲೆಯ ರಥವನ್ನು ನೋಡಿ, ಬುದ್ಧದಾಸಿಯು ಮತ್ಸರದಿಂದ ರಾಜನನ್ನು ಕುರಿತು, “ಸ್ವಾಮಿ! ನಗರದಲ್ಲಿ ಮೊದಲು ನನ್ನ ರಥದ ಮೆರವಣಿಗೆಯಾಗಬೇಕು. ಆ ಮೇಲೆ ಊರ್ವಿಲೆಯ ರಥವು ಹೋಗಬೇಕೆಂ”ದಳು. ರಾಜನೂ ಆಕೆಯ ಮಾತನ್ನು ಲಾಲಿಸಿ, ಅನುಮತಿಯನ್ನಿತ್ತನು.

ಇತ್ತ ಜಿನಪೂಜೆಯಲ್ಲಿ ತಲ್ಲೀನಳಾಗಿದ್ದ ಊರ್ವಿಲೆಗೆ ಈ ಸಮಾಚಾರವು ತಿಳಿದ ಕೂಡಲೇ, " ಯದ್ಯಪಿ ತನ್ನ ರಥದ ಮೆರವಣಿಗೆಯು ಮೊದಲು ಆದರೆ ಮಾತ್ರ ನಾನು ಅನ್ನಪಾನಗಳನ್ನು ಗ್ರಹಣಮಾಡುವುದಲ್ಲದೆ ಅನ್ಯಥಾ ಮಾಡಲಾರೆನು" ಎಂದು ಪ್ರತಿಜ್ಞೆಯನ್ನು ಮಾಡಿ ಕೂಡಲೇ ಕ್ಷತ್ರಿಯವೆಂಬ ಗುಹೆಯಲ್ಲಿರುವ ಸೋಮದತ್ತ ಮುನಿ ಮತ್ತು ವಜ್ರಕುಮಾರಮುನಿ ಸಮೀಪಕ್ಕೆ ಹೋಗಿ ಅವರಿಗೆ ನಮಸ್ಕಾರ ಮಾಡಿ ಈ ಸಮಾಚಾರವನ್ನೆಲ್ಲಾ ತಿಳಿಸಿದಳು. ಇಷ್ಟರಲ್ಲಿ ಆಕೆಯ ಪುಣ್ಯಪ್ರಭಾವದಿಂದ ಅಲ್ಲಿಗೆ ಮುನಿಗಳ ದರ್ಶನನಿಮಿತ್ತವಾಗಿ ದಿವಾಕರದೇವನು ಮೊದಲಾದ ವಿದ್ಯಾಧರರು ಬಂದಿದ್ದರು ಆಗ ವಜ್ರಕುಮಾರಮುನಿಗಳು ಈ ವಾರ್ತೆಯನ್ನು ಅವರಿಗೆ ತಿಳಿಸಿ, ಈಗ ನೀವೆಲ್ಲರೂ ಬೇಗನೇ ಮಥುರಾನಗರಕ್ಕೆ ಹೋಗಿ ಸಮ್ಯಕ್ತ್ವವತಿಯಾದ ಊರ್ವಿಳೆಯ ರಥದ ಮೆರವಣಿಗೆಯನ್ನು ಮೊದಲು ಮಾಡಿಸಿ ಜೈನಧರ್ಮದ ಪ್ರಭಾವನೆಯನ್ನು ಮಾಡಿ ಬರಬೇಕೆಂದರು ಅದನ್ನು ಕೇಳುತ್ತಲೇ ಶೂರರಾದ ವಿದ್ಯಾಧರರು ಮುನಿಗಳಿಗೆ ನಮಸ್ಕಾರವನ್ನು ಮಾಡಿ ಮಥುರಾನಗರಕ್ಕೆ ಹೊರಟು ಬಂದು, ಬುದ್ಧದಾಸಿಯ ರಥವನ್ನೆಲ್ಲಾ ನಾಶಮಾಡಿ ಆಕೆಯ ಗರ್ವವನ್ನು ಅಪಹರಿಸಿ, ನಿರ್ಮಲ ಸಮ್ಯಕ್ತ್ವವತಿಯಾದ ಊರ್ವಿಲೆಯ ರಥವನ್ನು ಬಹಳ ವಿಜೃಂಭಣೆಯಿಂದ ವಿದ್ಯಾಧರರು ಮೆರವಣಿಗೆ ಮಾಡಿಸಿದರು. ಆಗ ಆ ರಥೋತ್ಸವದ ಶೋಭೆಯು ಬಹಳ ಪ್ರಶಂಸನೀಯವಾಗಿತ್ತು. ನಾನಾ ವಿಧದ ವಾದ್ಯಧ್ವನಿಗಳಿಂದ ದಶದಿಕ್ಕುಗಳೂ ಗುಂಜಾಯಮಾನವಾಗಿದ್ದುವು. ಒಂದೆಡೆ ಭವ್ಯಜೀವರ ಜಯಜಯಕಾರವೂ ಇನ್ನೊಂದೆಡೆ ಗಂಧರ್ವರ ಮನೋಹರವಾದ ಗಾಯನವೂ, ಸರ್ವತ್ರ ಪುಷ್ಪವೃಷ್ಟಿಯೂ, ಮತ್ತೊಂದೆಡೆ ಅಪ್ಸರಸ್ತ್ರೀಯರ ನರ್ತನವೂ ಇವುಗಳಿಂದ ಮೆರವಣಿಗೆಯು ಅತಿ ಶೋಭಾಯಮಾನವಾಗಿದ್ದಿತು. ಈ ರಥದ ಮಧ್ಯಭಾಗದಲ್ಲಿ ಭಗವಂತನ ಮೂರ್ತಿಯು ವಿರಾಜಮಾನವಾಗಿದ್ದು, ರಥದ ಉಭಯಪಾರ್ಶ್ವದಿಂದಲೂ ಬಹಳ ಭಕ್ತಿಯಿಂದ ಜಯಘೋಷಣೆಯನ್ನು ಮಾಡುತ್ತಾ ಹೋಗುತ್ತಿರುವ ಭವ್ಯಸಮೂಹವನ್ನು ನೋಡಿ ಊರ್ವಿಲಾಮಹಾರಾಣಿಗೂ ಇತರ ಭವ್ಯ

ಜನರಿಗೂ ಅತ್ಯಧಿಕವಾದ ಆನಂದವಾಯಿತು. ಈ ರೀತಿಯಾಗಿ ಪೂತಿಗಂಧ ರಾಜನೂ ಬುದ್ಧದಾಸಿಯೂ ಜೈನಧರ್ಮದ ಪ್ರಭಾವನೆಯನ್ನು ನೋಡಿ ತಮ್ಮ ಮಿಥ್ಯಾಧರ್ಮವನ್ನು ಬಿಟ್ಟು ಬಹಳ ಭಕ್ತಿಯಿಂದ ಜೈನಧರ್ಮವನ್ನು ಅಂಗೀಕರಿಸಿದರು. ಈ ರಥೋತ್ಸವದಿಂದ ನಗರವಾಸಿಗಳೆಲ್ಲರಿಗೂ ಅತ್ಯಾನಂದವಾಯಿತು. ಅನಂತರ ದಿವಾಕರದೇವ ಮೊದಲಾದ ವಿದ್ಯಾಧರರು ರಾಜನ ಮತ್ತು ಊರ್ವಿಲೆಯಅಪ್ಪಣೆಯನ್ನು ತೆಗೆದುಕೊಂಡು ಸ್ವಸ್ಥಾನಕ್ಕೆ ತೆರಳಿದರು.

ಈ ರೀತಿಯಾಗಿ ಧರ್ಮವತ್ಸಲರಾದ ವಜ್ರಕುಮಾರಮುನಿಗಳು ಜೈನಧರ್ಮದ ಪ್ರಭಾವನೆಯನ್ನು ಮಾಡಿದಂತೆ, ಇತರ ಭವ್ಯಜೀವರೂ ಮುಕ್ತಿ ಸುಖದಾಯಕವಾದ ಜಿನಧರ್ಮದ ಪ್ರಭಾವನೆಯನ್ನು ಮಾಡಬೇಕೆಂದು ಅಭಿಪ್ರಾಯವು.

**೮ ಅಂಗಗಳಲ್ಲಿ ಪ್ರಸಿದ್ಧಿಯನ್ನು ಪಡೆದವರ ಹೆಸರು.**

**ತಾವದಂಜನಚೌರೋಂಗೇ। ತತೋಽನಂತಮತೀಸ್ಮೃತಾ ॥**
**ಉದ್ದಾಯನಸ್ತೃತೀಯೇಪಿ । ತುರೀಯೇ ರೇವತೀ ಮತಾ ॥೧೯॥**
**ತತೋಜಿನೇಂದ್ರಭಕ್ತೋನ್ಯೋ। ವಾರಿಷೇಣಸ್ತತಃ ಪರಃ ॥**
**ವಿಷ್ಣುಶ್ಚ ವಜ್ರನಾಮಾ ಚ। ಶೇಷಯೋರ್ಲಕ್ಷ್ಯತಾಂ ಗತೌ ॥೨೦॥**

**ಅನ್ವಯಾರ್ಥ-** ತಾವತ್ ಅಂಗೇ—ಮೊದಲಿನ ಅಂಗದಲ್ಲಿ ಅಂಜನಚೌರ—ಅಂಜನಚೋರನೂ. ತತಃ-ಎರಡನೇ ಅಂಗದಲ್ಲಿ ಅನಂತಮತೀ—ಅನಂತಮತಿಯೂ. ಸ್ಮೃತಾ—ಸ್ಮರಿಸಲ್ಪಟ್ಟಳು. ತೃತೀಯೇ—ಮೂರನೇ ಅಂಗದಲ್ಲಿ ಉದ್ದಾಯನಃ—ಉದ್ದಾಯನಮಹಾರಾಜನೂ ಅಪಿ-- ಮತ್ತು ತುರೀಯೇ—ನಾಲ್ಕನೆಯ ಅಂಗದಲ್ಲಿ ರೇವತೀ—ರೇವತೀರಾಣಿಯೂ. ಮತಾ—ಪ್ರಸಿದ್ಧಳಾದಳು. ತತಃ—ಐದನೇ ಅಂಗದಲ್ಲಿ. ಜಿನೇಂದ್ರಭಕ್ತಃ—ಜಿನೇಂದ್ರಭಕ್ತಶ್ರೇಷ್ಠಿಯೂ. ತತಃ ಪರಃ—ಆ ಮೇಲೆ. ಅನ್ಯಃ—ಆರನೇ ಅಂಗದಲ್ಲಿ. ವಾರಿಷೇಣಃ—ವಾರಿಷೇಣಕುಮಾರನೂ. ಚ ಮತ್ತು ಶೇಷಯೋಃ—ಉಳಿದ ಏಳು ಮತ್ತು ಎಂಟನೇ ಅಂಗದಲ್ಲಿ. ವಿಷ್ಣು—ವಿಷ್ಣುಕುಮಾರಮುನಿಯೂ ಚ—ಮತ್ತೆ ವಜ್ರನಾಮಾ—ವಜ್ರಕುಮಾರಮುನಿಯೂ. ಲಕ್ಷ್ಯತಾಂ—ಪ್ರಸಿದ್ಧಿಯನ್ನು, ಗತೌ—ಹೊಂದಿದರು.

**ತಾತ್ಪರ್ಯ:**—ಮೊದಲನೇ ನಿಃಶಂಕಿತಾಂಗದಲ್ಲಿ ಅಂಜನಚೋರನೂ ಎರಡನೇ ನೀಕಾಂಕ್ಷಿತಾಂಗದಲ್ಲಿ ಅನಂತಮತಿಯೆಂಬ ಶ್ರೇಷ್ಠಿಪುತ್ರಿಯೂ ಮೂರನೇ ನಿರ್ವಿಚಿಕಿತ್ಸಾಂಗದಲ್ಲಿ ಉದ್ದಾಯನಮಹಾರಾಜನೂ ನಾಲ್ಕನೇ ಅಮೂಢದೃಷ್ಟಿಯೆಂಬ ಅಂಗದಲ್ಲಿ ರೇವತೀಮಹಾರಾಣಿಯೂ ಐದನೇ ಉಪಗೂಹನಾಂಗದಲ್ಲಿ ಜಿನೇಂದ್ರಭಕ್ತಶ್ರೇಷ್ಠಿಯೂ ಆರನೇ ಸ್ಥಿತಿಕರಣಾಂಗ ದಲ್ಲಿ ವಾರಿಷೇಣನೆಂಬ ಶ್ರೇಣಿಕರಾಜನ ಪುತ್ರನೂ ಏಳನೇ ವಾತ್ಸಲ್ಯವೆಂಬ ಅಂಗದಲ್ಲಿ ವಿಷ್ಣುಕುಮಾರಮುನಿಯೂ ಎಂಟನೇ ಪ್ರಭಾವನಾ ಅಂಗದಲ್ಲಿ ವಜ್ರಕುಮಾರಮುನಿಯೂ, ಈ ಪ್ರಕಾರವಾಗಿ ಸಮ್ಯಕ್ತ್ವದ ಎಂಟು ಗುಣಗಳಲ್ಲಿ ಎಂಟು ಮಂದಿ ಪ್ರಸಿದ್ಧಿಯನ್ನು ಪಡೆದರು, ಅವರ ಕಥೆಯು ಪೂರ್ವೋಕ್ತಪ್ರಕಾರವಾಗಿದೆ.

**ಸಮ್ಯಕ್ತ್ವಕ್ಕೆ ಎಂಟು ಅಂಗಗಳ ಅವಶ್ಯಕತೆ.**

**ನಾಂಗಹೀನಮಲಂ ಛೆತ್ತುಂ । ದರ್ಶನಂ ಜನ್ಮಸಂತತಿಂ ॥**
**ನ ಹಿ ಮಂತ್ರೋಕ್ಷರನ್ಯೂನೋ । ನಿಹಂತಿ ವಿಷವೇದನಾಂ ॥೨೧॥**

**ಅನ್ವಯಾರ್ಥ:**—'ಯಥಾ' ಹೇಗೆ ಅಕ್ಷರನ್ಯೂನ–ಒಂದಕ್ಷರದಿಂದ ಕಡಮೆಯಾದ ಮಂತ್ರ—ಮಂತ್ರವು ವಿಷವೇದನಾಂ—ವಿಷದ ವೇದನೆಯನ್ನು ಹಿ—ನಿಶ್ಚಯವಾಗಿ ನ ನಿಹಂತಿ- ನಾಶಮಾಡಲಾರದೋ 'ತಥಾ'- ಹಾಗೆಯೇ ಅಂಗಹೀನಂ—ಒಂದಂಗದಿಂದ ಕಡಿಮೆಯಾದ ದರ್ಶನಂ—ಸಮ್ಯಗ್ದರ್ಶನವು ಜನ್ಮಸಂತತಿಂ—ಸಂಸಾರದ ಪರಂಪರೆಯನ್ನು ಛೇತ್ತುಂ–ನಾಶಮಾಡುವುದಕ್ಕೆ ಅಲಂ—ಸಮರ್ಥವಾಗಿ- ನ—ಆಗಲಾರದು.

**ತಾತ್ಪರ್ಯ:**—ವಿಷಾಪಹಾರ ಮೊದಲಾದ ಮಂತ್ರಗಳಲ್ಲಿ ಅಕ್ಷರ ಗಳು ನ್ಯೂನಾಧಿಕಗಳಾಗಿ—ಅಶುದ್ಧಗಳಾಗಿದ್ದರೆ ಹೇಗೆ ಸರ್ಪ ಮೊದಲಾದು ವುಗಳ ವಿಷವು ನಿವಾರಣೆಯಾಗಲಾರದೋ, ಅದರಂತೆ ನಿಃಶಂಕಿತ ಮೊದಲಾದ ಎಂಟು ಗುಣಗಳಲ್ಲಿ ಒಂದು ಗುಣವು ಕಡಮೆಯಾದರೆ ಅಂತಹ ಸಮ್ಯಕ್ತ್ವ ದಿಂದ ಸಂಸಾರದ ಪರಿಭ್ರಮಣೆಯು ನಾಶವಾಗಲಾರದೆಂದು ಅಭಿಪ್ರಾಯವು.

## ಲೋಕಮೂಢದ ವರ್ಣನೆ.

**ಆಪಗಾಸಾಗರಸ್ನಾನಮುಚ್ಚಯಃ ಸಿಕತಾಶ್ಮನಾಂ ||**
**ಗಿರಿಪಾತೋಗ್ನಿಪಾತಶ್ಚ ! ಲೋಕಮೂಢಂ ನಿಗದ್ಯತೇ ||೨೨||**

**ಅನ್ವಯಾರ್ಥಃ**—ಆಪಗಾಸಾಗರಸ್ನಾನಂ—ಗಂಗಾ ಯಮುನಾ ಮೊದಲಾದ ನದಿಗಳಲ್ಲಿ ಮತ್ತು ಸಮುದ್ರಗಳಲ್ಲಿ ಸ್ನಾನಮಾಡುವಿಕೆಯು ಸಿಕತಾಶ್ಮನಾಂ—ಮರಳು ಮತ್ತು ಕಲ್ಲುಗಳ ಉಚ್ಚಯಃ—ರಾಶಿ ಮಾಡುವಿಕೆಯು. ಗಿರಿಪಾತ—ಪರ್ವತದಿಂದ ಬೀಳುವಿಕೆಯು ಚ—ಮತ್ತು ಅಗ್ನಿಪಾತಃ—ಬೆಂಕಿಯಲ್ಲಿ ಬೀಳುವಿಕೆಯು ಲೋಕಮೂಢಂ—ಲೋಕಮೂಢವೆಂದು ನಿಗದ್ಯತೇ—ಹೇಳಲ್ಪಡುತ್ತದೆ.

**ತಾತ್ಪರ್ಯ:**—ಲೋಕದಲ್ಲಿ ಅನೇಕ ಮಿಥ್ಯಾದೃಷ್ಟಿಗಳು ಗಂಗಾ ಯಮುನಾ ಮೊದಲಾದ ನದಿಗಳಲ್ಲಿ ಮತ್ತು ಸಮುದ್ರಗಳಲ್ಲಿ ಸ್ನಾನ ಮಾಡುವಿಕೆಯು ಪವಿತ್ರವಾದ ಧರ್ಮಕಾರ್ಯವೆಂದೂ, ಮರಳು ಮತ್ತು ಕಲ್ಲುಗಳನ್ನು ರಾಶಿಮಾಡಿ ದೇವರೆಂದು ಪೂಜಿಸುವಿಕೆಯು ಧರ್ಮಕಾರ್ಯವೆಂದೂ ಕೈಲಾಸ ಮೊದಲಾದ ಪರ್ವತಗಳಿಂದ ಕೆಳಗೆ ಬಿದ್ದು ಆತ್ಮಘಾತವನ್ನು ಮಾಡಿಕೊಳ್ಳುವಿಕೆಯೂ ಧರ್ಮಕಾರ್ಯವೆಂದೂ ಹೇಳುವಿಕೆಯು ಲೋಕಮೂಢವೆಂದಭಿಪ್ರಾಯವು. ಈ ಭಾರತವರ್ಷದಲ್ಲಿ ಅನೇಕ ಏಕಾಂತ ಮಿಥ್ಯಾದೃಷ್ಟಿಗಳು ಗಂಗಾಸ್ನಾನ ಸಮುದ್ರಸ್ನಾನ ಮೊದಲಾದುವುಗಳು ಪವಿತ್ರವೂ ಪುಣ್ಯಕರವೂ ಮೋಕ್ಷದಾಯಕವೂ ಎಂದು ಹೇಳುತ್ತಾರೆ. ಪರಂತು ಆತ್ಮನು ಅಮೂರ್ತಿಯಾದವನು. ಈ ಬಾಹ್ಯಸ್ನಾನದಿಂದ ಕೆಲವು ಸಮಯಗಳ ವರೆಗೆ ದೇಹವು ಶುದ್ಧಿಯಾದೀತಲ್ಲದೆ, ಆತ್ಮನು ಪರಿಶುದ್ಧನಾಗಲಿಕ್ಕಿಲ್ಲವು. ಯದ್ಯಪಿ ಶರೀರವು ಸದಾ ಅಪವಿತ್ರವಾದುದು. ನವದ್ವಾರಗಳಿಂದ ನಿರಂತರವೂ ಮಲಮೂತ್ರಗಳೂ ಸುರಿಯುತ್ತಿರುತ್ತವೆ. ಅದಲ್ಲದೆ ಎಲ್ಲಾ ರೋಮಕೂಪಗಳಿಂದ ದುರ್ಗಂಧವಾದ ಸ್ವೇದಜಲವು ಪ್ರತಿಕ್ಷಣದಲ್ಲಿ ಪ್ರಸವಿಸುತ್ತಿರುತ್ತದೆ. ಹೀಗಿರಲು ಇಂತಹ ಅಪವಿತ್ರವಾದ ದೇಹವು ಗಂಗಾನದಿ ಮೊದಲಾದ ಸ್ನಾನಗಳಿಂದ ಅದು ಹೇಗೆ ಪವಿತ್ರವಾಗುವುದು? ಯದ್ಯಪಿ ಒಮ್ಮೆ ಸ್ನಾನದಿಂದ ಪವಿತ್ರತೆಯನ್ನು ಹೊಂದಿದರೂ ಪುನಃ ಅಪವಿತ್ರವಾದ

ವಸ್ತುಗಳ ಸಂಸರ್ಗದಿಂದ ಅಶುಚಿಯಾಗುವುದಿಲ್ಲವೇನು? ಅದಲ್ಲದೆ ಗಂಗಾ ಮೊದಲಾದ ನದಿಗಳಲ್ಲಿ ನಿರಂತರ ಕಪ್ಪೆ, ಏಡಿ, ಆಮೆ, ಮೀನು ಮೊದಲಾದ ಜಲಚರಪ್ರಾಣಿಗಳು ಸಾಯುತ್ತಿರುತ್ತವೆ. ಅವುಗಳ ಮಾಂಸ ಎಲುಬು ಮೊದಲಾದ ಅಪವಿತ್ರವಾದ ವಸ್ತುಗಳ ಸಂಬಂಧದಿಂದಲೂ, ಅನವರತವೂ ತ್ರಸಜೀವಗಳ ಹಿಂಸೆಯಾಗುತ್ತಿರುವುದರಿಂದಲೂ ನದಿ ಮೊದಲಾದುವುಗಳ ನೀರು ಅಪವಿತ್ರವಾಗಿರುತ್ತದೆ. ಇಂತಹ ಮಹಾನಿಂದ್ಯಕರವಾದ ಗಂಗಾ ಮೊದಲಾದ ನದಿಗಳಲ್ಲಿ ಸ್ನಾನವನ್ನು ಮಾಡುವುದರಿಂದ ಪುಣ್ಯಪ್ರಾಪ್ತಿಯಾಗುವುದೆಂದು ಹೇಳುವಿಕೆಯು ಮಿಥ್ಯಾದರ್ಶನವು. ಯದ್ಯಪಿ ಗಂಗಾ ನದಿಯಲ್ಲಿ ಸ್ನಾನಮಾಡುವುದರಿಂದ ಮೋಕ್ಷದ ಪ್ರಾಪ್ತಿಯಾಗುವುದಾದರೆ ಧೀವರ [ಬೇಸ್ತರ] ನಿಗೂ ಮುಕ್ತಿಯಾಗಬೇಕು. ಇತರ ದಾನಪೂಜಾದಿಗಳಿಂದ ಫಲವೇನು? ಜಲಸ್ನಾನವು ವ್ಯವಹಾರ ಶುದ್ಧಿಗೆ ಒಂದು ನಿಮಿತ್ತಕಾರಣವಾಗಿದೆ. ಇದರಿಂದ ಲೌಕಿಕಶುದ್ಧಿಯಾದೀತಲ್ಲದೆ ಎಂದೂ ಮೋಕ್ಷವು ದೊರೆಯಲಾರದು. [೧] ಕಾಲಶುದ್ಧಿ, [೨] ಅಗ್ನಿಶುದ್ಧಿ, [೩.] ಭಸ್ಮಶುದ್ಧಿ, [೪] ಮೃತ್ತಿಕಾಶುದ್ಧಿ, [೫] ಗೋಮಯಶುದ್ಧಿ, [೬] ಜಲಶುದ್ಧಿ, [೭] ಪವನಶುದ್ಧಿ, [೮] ಜ್ಞಾನಶುದ್ಧಿಯೆಂದು ಲೌಕಿಕಶುದ್ಧಿಯು ಎಂಟು ವಿಧವಾಗಿದೆ. ಲೋಕವ್ಯವಹಾರದಲ್ಲಿ ಜನನ ಮರಣ ನಿಮಿತ್ತವಾದ ಸೂತಕವು ೧೦, ೧೨, ೧೪, ದಿವಸಗಳವರೆಗೂ, ರಜಸ್ವಲಾ ಸ್ತ್ರೀಯ ಅಶೌಚವು ಮೂರು ದಿವಸಗಳ ವರೆಗೂ ಇದ್ದು ಆ ಮೇಲೆ ಶುದ್ಧಿಯಾಗುವುದು ಎಂದು ಹೇಳುವುದಕ್ಕೆ 'ಕಾಲಶುದ್ಧಿ'ಯೆಂದು ಹೆಸರು. ಶೂದ್ರರ ಸಂಬಂಧವಾದ ಅಶುದ್ಧವಾದ ತಾಮ್ರದ ಮೊದಲಾದ ಪಾತ್ರೆಗಳನ್ನು ಅಗ್ನಿಸಂಸ್ಕಾರದಿಂದ ಶುದ್ಧ ಮಾಡುವುದಕ್ಕೆ 'ಅಗ್ನಿಶುದ್ಧಿ'ಯೆಂದು ಹೆಸರು. ಉಚ್ಛಿಷ್ಟ ಮೊದಲಾದವುಗಳಿಂದ ಮಲಿನವಾದ ಪಾತ್ರೆಗಳನ್ನು ಬೂದಿಯಿಂದ ಶುದ್ಧ ಮಾಡುವುದಕ್ಕೆ 'ಭಸ್ಮಶುದ್ಧಿ'ಯೆಂದು ಹೆಸರು. ಮಲಮೂತ್ರಾದಿಗಳ ಸ್ಪರ್ಶದಿಂದ ಅಪವಿತ್ರವಾದ ಹಸ್ತಪಾದಗಳನ್ನು ಮಣ್ಣಿನಿಂದ ಪ್ರಕ್ಷಾಲಿಸಿಕೊಳ್ಳುವುದಕ್ಕೆ 'ಮೃತ್ತಿಕಾಶುದ್ಧಿ'ಯೆಂದು ಹೆಸರು. ಗೋಮಯದಿಂದ ಭೂಮಿಯನ್ನು ಸಾರಿಸಿ ಶುದ್ಧಮಾಡುವುದಕ್ಕೆ 'ಗೋಮಯಶುದ್ಧಿ'ಯೆಂದು ಹೆಸರು. ಜಲ

ದಿಂದ ಸ್ನಾನಮಾಡಿ ದೇಹವನ್ನು ಶುದ್ಧಿ ಮಾಡಿಕೊಳ್ಳುವುದಕ್ಕೆ 'ಜಲಶುದ್ಧಿ' ಯೆಂದು ಹೆಸರು. ಕೆಲವು ಭೂಮಿ ಶಿಲೆ ಕವಾಟು ಬಾಗಿಲು ಮೊದಲಾದು ವುಗಳನ್ನು ವಾಯುವಿನಿಂದ ಗುಡಿಸಿ ಶುದ್ಧಿ ಮಾಡುವುದಕ್ಕೆ 'ಪವನಶುದ್ಧಿ' ಯೆಂದು ಹೆಸರು. ಕೆಲವು ವಸ್ತುಗಳು ತನ್ನ ಜ್ಞಾನಕ್ಕೆ ಅಪವಿತ್ರವಾದು ದೆಂಬೀ ಸಂಕಲ್ಪವುಂಟಾಗದಿರುವುದಕ್ಕೆ 'ಜ್ಞಾನಶುದ್ಧಿ'ಯೆಂದು ಹೆಸರು. ಈ ಪ್ರಕಾರವಾದ ಲೌಕಿಕಶುದ್ಧಿಗಳಿಂದ ಆತ್ಮನೂ ಈ ದೇಹವೂ ಎಂದೂ ಪವಿತ್ರವಾಗಲಾರದು. ಮತ್ತು ಮುಕ್ತಿಯುಂಟಾಗಲಾರದು. ಯಾವನು ಪರಧನ, ಮತ್ತು ಪರಸ್ತ್ರೀಯರನ್ನು ಅಪೇಕ್ಷಿಸದೆ ಜೀವಹಿಂಸೆಯನ್ನು ಮಾಡು ವುದಿಲ್ಲವೋ, ಆತನೇ ಪವಿತ್ರನು. ಯದ್ಯಪಿ ಗೃಹಸ್ಥನಿಗೆ ಸ್ನಾನವಿಲ್ಲದೆ ಬಾಹ್ಯಶುದ್ಧಿಯಾಗುವುದಿಲ್ಲವಾದರೂ ಇವುಗಳಿಂದ ಪರಮಾತ್ಮನೆಂದೂ ಪವಿ ತ್ರವಾಗಲಾರನು. ಆದಕಾರಣ ಪ್ರಾಜ್ಞರು ಪರಮಾತ್ಮಭಾವನೆಯೆಂಬ ತೀರ್ಥದಲ್ಲಿ ಸ್ನಾನಮಾಡಿರಿ. ವ್ಯರ್ಥವಾಗಿ ಗಂಗಾ ಮೊದಲಾದ ನದಿಗಳಿ ಗೇಕೆ ಓಡುವಿರಿ ? ಆದುದರಿಂದ ಗಂಗಾ ಮೊದಲಾದ ನದಿ ಸಮುದ್ರಗಳಲ್ಲಿ ಸ್ನಾನಮಾಡಿದರೆ ಮೋಕ್ಷ ಪ್ರಾಪ್ತಿಯಾಗುವುದೆನ್ನುವುದು ಲೋಕಮೂಢವು. ಅದರಂತೆಯೇ ಕೆಲವರು ಹ್ಯೆಗೆ ಕಲ್ಲು ಮೊದಲಾದುವುಗಳನ್ನು ರಾಶಿ ಮಾಡಿ ದೇವರೆಂದು ಪೂಜಿಸುವಿಕೆಯೂ ಸಹಗಮನವೂ ಹಿಮಾಲಯ ಮೊದಲಾದ ಪರ್ವತಗಳಿಂದ ಕೆಳಗೆ ಬೀಳುವಿಕೆಯೂ ಇವುಗಳೆಲ್ಲವೂ ಪುಣ್ಯ ಕರವೆಂದು ತಿಳಿಯುವುದಕ್ಕೆ ಲೋಕಮೂಢವೆಂದು ಹೆಸರು. ದೇವರೆಂದು †ಸೂರ್ಯನಿಗೆ ಅರ್ಘ್ಯವನ್ನು ಕೊಡುವಿಕೆಯು, ಗ್ರಹಣವಾದ ನಂತರ ಸ್ನಾನಮಾಡುವಿಕೆಯು' ಸಂಕ್ರಾಂತಿಯ ದಿವಸ ದಾನ ಮಾಡುವಿಕೆಯು, ಸಂಧ್ಯಾಕಾಲದಲ್ಲಿ ಮೌನದಿಂದಿರುವಿಕೆಯು, ಅಗ್ನಿಯನ್ನು ಪೂಜಿಸುವಿಕೆಯು, ಮೃತಕ ಶರೀರವನ್ನು ಅಲಂಕರಿಸಿ, ಪೂಜಿಸುವಿಕೆಯು ಗೃಹಪೂಜೆಯು,

---

†ಸೂರ್ಯಾರ್ಘ್ಯೋಗ್ರಹಣಸ್ನಾನಂ, ಸಂಕ್ರಾಂತೌ ದ್ರವಿಣವ್ಯಯಃ ॥ ಗೋಪೃಷ್ಠಾಂ ಸಂಧ್ಯಾಸೇವಾಗ್ನಿಸತ್ಕಾರೋ, ದೇಹಗೇಹಾರ್ಚನಾವಿಧಿಃ ॥ ಗೋಪೃಷ್ಠಾಂ ತನಮಸ್ಕಾರಃ, ತನ್ಮೂತ್ರಸ್ಯ ನಿಷೇವಣಂ ॥ ರತ್ನವಾಹನಭೂವೃಕ್ಷಶಸ್ತ್ರ ಶೈಲಾದಿಸೇವನಂ ॥

ದನದ ಪೃಷ್ಟಭಾಗಕ್ಕೆ ನಮಸ್ಕಾರವನ್ನು ಮಾಡುವಿಕೆಯು, ಅದರ ಮೂತ್ರವನ್ನು ಸೇವಿಸುವಿಕೆಯು, ರತ್ನ ಬೆಳ್ಳಿ ಬಂಗಾರ ಧನ ವಾಹನ ಭೂಮಿ ಮರ ಆಯುಧ ಪರ್ವತ ಮೊದಲಾದುವುಗಳನ್ನು ಪೂಜಿಸುವಿಕೆಯು ಇವುಗಳಿಗೆ ಲೋಕಮೂಢವೆಂದು ಹೆಸರು. ಅದಲ್ಲದೆ ಪಶುಯಜ್ಞದಿಂದ ಸ್ವರ್ಗಪ್ರಾಪ್ತಿಯಾಗುವುದೆಂದು ಹೇಳುವಿಕೆಯು, ಪಿತೃತರ್ಪಣ, ಶ್ರಾದ್ಧ, ಮಹಾಲಯ ಕಾರ್ಯ ಮೊದಲಾದುವುಗಳನ್ನು ಮಾಡುವುದಕ್ಕೆ ಸಹ ಲೋಕಮೂಢವೆಂದು ಹೆಸರು. ಅನಾದಿ ಮಿಥ್ಯಾದೃಷ್ಟಿಗಳಾದ ಅಜ್ಞಾನಿಗಳ ಇಂತಹ ವರ್ತನೆಯನ್ನು ನೋಡಿಕೊಂಡು ನಾವು ಅದರಂತೆ ವರ್ತಿಸಬಾರದೆಂದು ಅಭಿಪ್ರಾಯವು.

## ದೇವಮೂಢದ ವರ್ಣನೆ.

**ವರೋಪಲಿಪ್ಸಯಾಶಾವಾನ್ । ರಾಗದ್ವೇಷಮಲೀಮಸಾಃ ॥**
**ದೇವತಾ ಯದುಪಾಸೀತ । ದೇವತಾಮೂಢಮುಚ್ಯತೇ ॥೨೩॥**

**ಅನ್ವಯಾರ್ಥಃ**— ಆಶಾವಾನ್–ಐಹಿಕಫಲಾಭಿಲಾಷೆಯುಳ್ಳವನು ವರೋಪಲಿಪ್ಸಯಾ-ಇಷ್ಟಾರ್ಥವನ್ನು ಪಡೆಯಬೇಕೆಂಬ ಇಚ್ಛೆಯಿಂದ ರಾಗದ್ವೇಷಮಲೀಮಸಾಃ-ರಾಗದ್ವೇಷಗಳಿಂದ ಮಲಿನರಾದ ದೇವತಾಃ–ದೇವತೆಗಳನ್ನು ಯತ್–ಯಾವದು ಉಪಾಸೀತ–ಸೇವಿಸಲ್ಪಡುತ್ತದೆಯೋ 'ತತ್'—ಅದು ದೇವತಾಮೂಢಂ–ದೇವತಾಮೂಢವೆಂದು ಉಚ್ಯತೇ–ಹೇಳಲ್ಪಡುತ್ತದೆ.

**ತಾತ್ಪರ್ಯಃ**— ಈ ಲೋಕದಲ್ಲಿ ಬಹಿರಾತ್ಮನು ರಾಜಸಂಪತ್ತಿ, ಸ್ತ್ರೀ, ಪುತ್ರ, ಆಭರಣ, ವಸ್ತ್ರ, ವಾಹನ, ಧನ, ಧಾನ್ಯ ಮೊದಲಾದ ಅಭೀಷ್ಟ ಪದಾರ್ಥಗಳ ಪ್ರಾಪ್ತಿಗೋಸ್ಕರ ರಾಗದ್ವೇಷಗಳಿಂದ ಯುಕ್ತರಾದ ಚಕ್ರೇಶ್ವರೀ ಪದ್ಮಾವತೀ ಕ್ಷೇತ್ರಪಾಲ ಮೊದಲಾದ ದೇವತೆಗಳನ್ನು ವರಾಭಿಲಾಷೆಯಿಂದ ಪೂಜಿಸುವುದಕ್ಕೆ 'ದೇವತಾದೂಢ'ವೆಂದು ಹೆಸರು. ರಾಜ್ಯಸಂಪತ್ತಿ ಮೊದಲಾದುವುಗಳು ಅವರವರ ಸಾತಾವೇದನೀಯ ಕರ್ಮದ ಉದಯದಿಂದ ಉಂಟಾಗುತ್ತವೆ. ಲಾಭಾಂತರಾಯ ಕರ್ಮದ ಕ್ಷಯೋಪಶಮಗಳಿಂದ ಇಷ್ಟವಸ್ತುಗಳ ಪ್ರಾಪ್ತಿಯೂ ಭೋಗ ಮತ್ತು ಉಪಭೋಗ ಅಂತರಾಯಕರ್ಮಗಳ ಕ್ಷಯೋಪಶಮದಿಂದ ಭೋಗೋಪಭೋಗಗಳೂ

ಉಂಟಾಗುವುದಲ್ಲದೆ ದೇವತೆಗಳು ಅವುಗಳನ್ನು ಕೊಡುವುದಕ್ಕೂ ಅಪಹ ರಿಸುವುದಕ್ಕೂ ಸಮರ್ಥರಲ್ಲವು. ಹಾಗಾದರೆ, ಶ್ರಾವಕರು ಜಿನಶಾಸನ ದೇವತೆಗಳನ್ನು ಪೂಜಿಸುವುದರಿಂದ ಸಮ್ಯಕ್ತ್ವಕ್ಕೆ ಹಾನಿಯುಂಟಾಗುವುದಿ ಲ್ಲವೇ? ಎಂಬೀ ಪ್ರಶ್ನೆಯುಂಟಾಗುವುದು ಸಹಜವಾಗಿದೆ. ಪರಂತು, ವರಾಭಿಲಾಷೆಯಿಂದ ಆ ದೇವತೆಗಳನ್ನು ಪೂಜಿಸಿದರೆ ಅವಶ್ಯವಾಗಿಯೂ ದೋಷವುಂಟಾಗುವುದು. ಆದರೆ "ಜಿನಶಾಸನದೇವತೆಗಳು, ಜಿನಭಕ್ತರು ಜಿನಸೇವಾನಿರತರು.-ಜೈನಧರ್ಮದಪ್ರಭಾವಕರು, ಆದ್ದರಿಂದ ಅವರು ಸತ್ಕಾರ ಮಾಡುವುದಕ್ಕೆ ಯೋಗ್ಯರು" ಎಂದು ಅವರನ್ನು ಪೂಜಿಸಿದರೆ ಸಮ್ಯಗ್ದ ರ್ಶನಕ್ಕೆ ಅತಿಚಾರವು ಉಂಟಾಗಲಾರದು. ಕೆಲವರು ಶಾಸನದೇವತೆಗಳನ್ನು ಏಕೆ ಪೂಜಿಸಬೇಕು? ಎಂದು ಕೇಳುತ್ತಾರೆ. ಇದಕ್ಕೆ ಉತ್ತರವೇನಂದರೆ? ಹೇಗೆ ಚಕ್ರವರ್ತಿ—ರಾಜರು ಮೊದಲಾದವರುಗಳ ಸೇವಕರನ್ನು-ಸಂತೋ ಷಪಡಿಸದೆ ನಮ್ಮ ಇಷ್ಟಸಿದ್ಧಿಯು ಆಗುವುದಿಲ್ಲವೋ, ಅದರಂತೆ ಈ ಜಿನ ಶಾಸನದೇವತೆಗಳ ಸತ್ಕಾರವನ್ನು ಮಾಡದೆ ನಿರ್ವಿಘ್ನವಾಗಿ ನಮ್ಮ ಅಭೀ ಷ್ಟಸಿದ್ಧಿಯಾಗಲಾರದು ಆದ್ದರಿಂದ ವರವನ್ನು ಪಡೆಯಬೇಕೆಂಬ ಇಚ್ಛೆಯಿ ಲ್ಲದೆ ಅವರವರ ಯೋಗ್ಯತೆಗೆ ಅನುಸಾರವಾಗಿ ಜಿನಶಾಸನದೇವತೆಗಳನ್ನು ಪೂಜಿಸುವುದರಿಂದ ಸಮ್ಯಕ್ತ್ವಕ್ಕೆ ಹಾನಿಯುಂಟಾಗಲಾರದೆಂದು ಭಾವವು. ಗಣಪತಿ, ಹನುಮಂತ ಚತುರ್ಮುಖ, ಷಣ್ಮುಖ, ಯೋನಿ, ಲಿಂಗ ಮೊದ ಲಾದ ತಿರ್ಯಂಚಪ್ರಾಣಿಗಳ ಆಕಾರವನ್ನು ಮಾಡಿ ಪೂಜಿಸುವಿಕೆಯೂ ದೇವತಾಮೂಢವೆಂದು ಅಭಿಪ್ರಾಯವು.

## ಪಾಷಂಡಿ [ಗುರು] ಮೂಢದ ವರ್ಣನೆ.

**ಸಗ್ರಂಥಾರಂಭಹಿಂಸಾನಾಂ। ಸಂಸಾರಾವರ್ತವರ್ತಿನಾಂ॥**
**ಪಾಖಂಡಿನಾಂ ಪುರಸ್ಕಾರೋ। ಜ್ಞೇಯಂಪಾಖಂಡಿಮೋಹನಂ॥**

**ಅನ್ವಯಾರ್ಥಃ**—ಸಗ್ರಂಥಾರಂಭಹಿಂಸಾನಾಂ-ಪರಿಗ್ರಹವು ಆರಂ ಭವು ಹಿಂಸೆಯು ಇವುಗಳಿಂದ ಕೂಡಿದ, ಸಂಸಾರಾವರ್ತವರ್ತಿನಾಂ— ಸಂಸಾರಚಕ್ರದಲ್ಲಿ ಭ್ರಮಿಸುತ್ತಿರುವ, ಪಾಖಂಡಿನಾಂ—ಮಿಥ್ಯಾತಪಸ್ವಿಗಳಿಗೆ ಪುರಸ್ಕಾರಃ—ಆದರ—ಸತ್ಕಾರವನ್ನು ಮಾಡುವಿಕೆಯು, ಪಾಖಂಡಿಮೋ ಹನಂ—ಗುರುಮೂಢವೆಂದು, ಜ್ಞೇಯಂ—ತಿಳಿಯತಕ್ಕದ್ದು.

ತಾತ್ಪರ್ಯ:—ಅನೇಕ ವಿಧವಾದ ಪರಿಗ್ರಹಗಳು ಕೃಷಿ ಮೊದಲಾದ ಆರಂಭಗಳು ಜೀವಹಿಂಸೆ, ಮೊದಲಾದುವುಗಳಿಂದ ಕೂಡಿದವರೂ ಸಂಸಾರ ಮೋಹಪಾಶದಲ್ಲಿ ಮಗ್ನರಾದವರೂ ಆದ ಮಿಥ್ಯಾತಪಸ್ವಿಗಳಿಗೆ ಪಾಖಂಡಿ ಅಥವಾ ಪಾಷಂಡಿತಪಸ್ವಿಗಳೆಂದು ಹೆಸರು. ಅಂತಹ ಮಿಥ್ಯಾಗುರುಗಳ ಸೇವೆ—ಶುಶ್ರೂಷೆ, ಭಕ್ತಿ-ಆದರ—ಸತ್ಕಾರ ಮೊದಲಾದುವುಗಳನ್ನು ಮಾಡುವುದಕ್ಕೆ ಗುರುಮೂಢವೆಂದಭಿಪ್ರಾಯವು.

## ಅಷ್ಟಮದಗಳ ವರ್ಣನೆ.

**ಜ್ಞಾನಂ ಪೂಜಾಂ ಕುಲಂ ಜಾತಿಂ। ಬಲಮೃದ್ಧಿಂ ತಪೋವಪುಃ ॥**
**ಅಷ್ಟಾವಾಶ್ರಿತ್ಯಮಾನಿತ್ವಂ। ಸ್ಮಯಮಾಹುರ್ಗತಸ್ಮಯಾಃ ॥೨೫॥**

ಅನ್ವಯಾರ್ಥ:—ಜ್ಞಾನಂ-ವಿದ್ಯೆಯನ್ನು ಪೂಜಾಂ—ಸಂಸ್ಕಾರವನ್ನು ಕುಲಂ—ಪಿತೃವಂಶವನ್ನು ಜಾತಿಂ-ಮಾತೃವಂಶವನ್ನು ಬಲಂ-ಶಕ್ತಿಯನ್ನು ಋದ್ಧಿಂ—ಐಶ್ವರ್ಯವನ್ನು ವ್ರತಃ-ವ್ರತಾಚರಣೆಯನ್ನು ವಪುಃ-ಶರೀರವನ್ನು 'ಏತಾನ್'—ಈ ಅಷ್ಟೌ—ಎಂಟನ್ನು ಆಶ್ರಿತ್ಯ—ಹೊಂದಿ, ಮಾನಿತ್ವಂ—ಗರ್ವಪಡುವಿಕೆಯು 'ಯತ್—ಯಾವದೋ 'ತತ್'—ಅದನ್ನು ಗತಸ್ಮಯಾಃ—ಗಣಧರರು ಮೊದಲಾದ ಆಚಾರ್ಯರು ಸ್ಮಯಂ—ಮದವೆಂದು ಆಹುಃ—ಹೇಳುತ್ತಾರೆ.

ತಾತ್ಪರ್ಯ:—ಮಾನಕಷಾಯದ ಉದಯದಿಂದ ಗರ್ವಪಡುವುದಕ್ಕೆ ಮದವೆಂದು ಹೆಸರು. ಆ ಮದದಲ್ಲಿ ಜ್ಞಾನಮದ, ಪೂಜಾಮದ, ಕುಲಮದ, ಜಾತಿಮದ, ಬಲಮದ ಐಶ್ವರ್ಯಮದ, ತಪೋಮದ ಮತ್ತು ಶರೀರಮದಗಳೆಂದು ಎಂಟು ಭೇದಗಳಿವೆ, ಜ್ಞಾನ—ವಿದ್ಯೆಯಲ್ಲಿ ನನಗೆ ಸರಿ ಸಮಾನರಾದವರು ಯಾರೂ ಇಲ್ಲ. ನಾನೇ ಶ್ರೇಷ್ಠನೆಂದು ಅಹಂಕಾರವನ್ನು ತೋರಿಸುವುದಕ್ಕೆ 'ಜ್ಞಾನಮದ'ವೆಂದು ಹೆಸರು. ನನಗೆ ಎಲ್ಲರೂ ಹೆಚ್ಚಿನ ಆದರ—ಸತ್ಕಾರವನ್ನು ಮಾಡುತ್ತಾರೆ. ನಾನೇ ಧನ್ಯನೆಂದು ಅಭಿಮಾನವನ್ನು ಪಡುವುದಕ್ಕೆ 'ಪೂಜಾಮದ'ವೆಂದು ಹೆಸರು. ತನ್ನ ಪಿತೃವಂಶಕ್ಕೆ ಕುಲವೆಂದು ಹೆಸರು. ನನ್ನ ತಂದೆಯ ವಂಶವು ಶ್ರೇಷ್ಠವಾದುದೆಂದು ಅಹಂ

ಭಾವವನ್ನು ತೋರಿಸುವುದಕ್ಕೆ 'ಕುಲಮದ'ವೆಂದು ಹೆಸರು. ತನ್ನ ಮಾತೃ ವಂಶವು ಅತ್ಯುತ್ತಮವಾದುದೆಂದು ಗರ್ವಪಡುವುದಕ್ಕೆ ,ಜಾತಿಮದ'ವೆಂದು ಹೆಸರು. ಶಕ್ತಿಯಲ್ಲಿ ನನಗೆ ಸರಿಸಮಾನರು ಯಾರೂ ಇಲ್ಲ. ನಾನೇ ಬಲಿಷ್ಠನೆಂದು ಪರಾಕ್ರಮವನ್ನು ತೋರಿಸುವುದಕ್ಕೆ 'ಬಲಮದ'ವೆಂದು ಹೆಸರು. ಸಂಪತ್ತಿನಲ್ಲಿ ನನಗೆ ಮಿಗಿಲಾದವರಿಲ್ಲ. ನಾನೇ ಧನಕುಬೇರನೆಂದು ಅಹಂಭಾವಕ್ಕೆ 'ಋದ್ಧಿಮದ'ವೆಂದು ಹೆಸರು. ನಾನು ಘೋರ ತಪಸ್ವಿಯು ನನ್ನಂತೆ ವ್ರತಾಚರಣೆ ಉಪವಾಸಾದಿಗಳನ್ನು ಮಾಡುವವರು ಯಾರೂ ಇಲ್ಲವು, ಎಂದು ಅಹಂಭಾವಕ್ಕೆ 'ತಪೋಮದ'ವೆಂದು, ನಾನು ಒಳ್ಳೇ ರೂಪವಂತನು—ಸುಂದರನು ಯೌವನಸಂಪನ್ನನು ಎಂದು, ಮದ—ಗರ್ವಕ್ಕೆ 'ವಪುಮದ'ವೆಂದು ಹೆಸರು. ಈ ಪ್ರಕಾರವಾದ ಎಂಟು ವಿಷಯಗಳನ್ನು ಕುರಿತು ಅಹಂಭಾವವನ್ನು ತೋರಿಸುವುದಕ್ಕೆ ಅಷ್ಟಮದಗಳೆಂದು ಗಣಧರಾದಿ—ಆಚಾರ್ಯರು ಪ್ರತಿಪಾದಿಸುತ್ತಾರೆ. ಸಮ್ಯಗ್ದೃಷ್ಟಿಯು ಇವುಗಳ ವಿಷಯವಾಗಿ ಮದ—ಗರ್ವವನ್ನು ಪಡಬಾರದೇಂದು ಮುಖ್ಯಾಭಿಪ್ರಾಯವು.

## ಗರ್ವದಿಂದುಂಟಾಗುವ ಹಾನಿ.

**ಸ್ಮಯೇನ ಯೋನ್ಯಾನತ್ಯೇತಿ । ಧರ್ಮಸ್ಥಾನ್ ಗರ್ವಿತಾಶಯಃ ॥**
**ಸೋತ್ಯೇತಿ ಧರ್ಮಮಾತ್ಮೀಯಂ। ನ ಧರ್ಮೋ ಧಾರ್ಮಿಕೈರ್ವಿನಾ॥೨೬॥**

**ಅನ್ವಯಾರ್ಥಃ**—ಯಃ-ಯಾವನು ಗರ್ವಿತಾಶಯಃ-ಗರ್ವಿಷ್ಠನಾಗಿ ಸ್ಮಯೇನ-ಮದದಿಂದ ಅನ್ಯಾನ್-ಇತರರಾದ ಧರ್ಮಸ್ಥಾನ್-ಧರ್ಮಾತ್ಮರನ್ನು ಅತ್ಯೇತಿ-ತಿರಸ್ಕರಿಸುತ್ತಾನೆಯೋ ಸಃ—ಅವನು ಆತ್ಮೀಯಂ—ತನ್ನ ಧರ್ಮಂ-ಅತ್ಯೇತಿ-ತಿರಸ್ಕರಿಸುತ್ತಾನೆ. 'ಯತಃ' ಯಾಕಂದರೆ ಧಾರ್ಮಿಕೈ ಧರ್ಮವನ್ನು ಅತ್ಯೇತಿ-ತಿರಸ್ಕರಿಸುತ್ತಾನೆ. 'ಯತಃ' ಯಾಕಂದರೆ ಧಾರ್ಮಿಕೈ ವಿನಾ-ಧರ್ಮಾತ್ಮರಿಂದಲ್ಲದೆ ಧರ್ಮಃ—ಧರ್ಮವು ನ-ಇರಲಾರದು.

**ತಾತ್ಪರ್ಯಃ**—ಯಾವನು ಮದ-ಗರ್ವದಿಂದ ಧರ್ಮಾತ್ಮರನ್ನು ತಿರಸ್ಕರಿಸುತ್ತಾನೋ ಅವನು ತನ್ನ ರತ್ನತ್ರಯರೂಪವಾದ ಧರ್ಮವನ್ನೇ ತಿರಸ್ಕರಿಸಿದಂತೆ ಆಗುವುದು. ಧರ್ಮಾತ್ಮರಿಗೆ ಅಪಮಾನವನ್ನು ಮಾಡುವುದರಿಂದ ಅವರು ಧರ್ಮಕಾರ್ಯದಲ್ಲಿ ಶಿಥಿಲರಾಗುತ್ತಾರೆ. ಮತ್ತು ಅವ

ರನ್ನು ಇತರರೂ ತಿರಸ್ಕರಿಸುತ್ತಾರೆ. ಲೋಕದಲ್ಲಿ ಧರ್ಮಾತ್ಮರಿಲ್ಲದೆ ಧರ್ಮವು ಸ್ಥಿರವಾಗಿರಲಾರದು. ಆದ್ದರಿಂದ ಮಾನಕಷಾಯಕ್ಕೆ ವಶೀಭೂತ ರಾಗಿ ಅಹಂಕಾರದಿಂದ ಧರ್ಮಾತ್ಮರಿಗೆ ತಿರಸ್ಕಾರ—ಅಪಮಾನಗಳನ್ನು ಮಾಡಬಾರದೆಂದು ಮುಖ್ಯಾಭಿಪ್ರಾಯವು.

**ಈ ಬಾಹ್ಯಸಂಪತ್ತಿನ ನಿಷ್ಪ್ರಯೋಜನತೆ.**

**ಯದಿ ಪಾಪನಿರೋಧೋನ್ಯ-ಸಂಪದಾ ಕಿಂ ಪ್ರಯೋಜನಂ ||**
**ಅಥ ಪಾಪಾಸ್ರವೋಸ್ತ್ಯನ್ಯ-ಸಂಪದಾ ಕಿಂ ಪ್ರಯೋಜನಂ || ೨೭ ||**

**ಅನ್ವಯಾರ್ಥ**— ಯದಿ—ಒಂದು ವೇಳೆ ಪಾಪನಿರೋಧಃ—ಕರ್ಮ ಗಳ ಬರದಿರುವಿಕೆಯು 'ತರ್ಹಿ'—ಆದರೆ ಅನ್ಯಸಂಪದಾ—ಇತರ ಇಂದ್ರಾದಿ ವಿಭೂತಿಗಳಿಂದ ಕಿಂ ಪ್ರಯೋಜನಂ ? ಪ್ರಯೋಜನವೇನು ? ಅಥ—ಮತ್ತು ಪಾಪಾಸ್ರವ:—ಕರ್ಮಗಳ ಬರುವಿಕೆಯು ಅಸ್ತಿ-'ತರ್ಹಿ'-ಇದ್ದರೆ ಅನ್ಯಸಂಪ ದಾ—ಇತರ ಸಂಪತ್ತುಗಳಿಂದ, ಕಿಂ ಪ್ರಯೋಜನಂ?—ಪ್ರಯೋಜನವೇನು!

**ತಾತ್ಪರ್ಯ**—ಸಮ್ಯಗ್ದೃಷ್ಟಿಯು ಯೋಚಿಸುತ್ತಾನೆ ಏನೆಂದರೆ, ಜ್ಞಾನಾವರಣಾದಿ—ಶುಭಾಶುಭ—ಕರ್ಮಗಳ ಆಸ್ರವವು ಉಂಟಾಗದಿದ್ದರೆ ಇತರ ದೇವೇಂದ್ರ—ಧರಣೇಂದ್ರ—ಚಕ್ರವರ್ತಿ ಮೊದಲಾದವರ ಐಶ್ವರ್ಯ ಗಳಿಂದ ನನಗೆ ಪ್ರಯೋಜನವೇನು ? ಸಮಸ್ತವಾದ ಕರ್ಮಕ್ಷಯದಿಂದ ನಿರ್ವಾಣಸಂಪತ್ತೀ ಲಭಿಸುತ್ತಿರಲು ಇತರ ಸಂಪತ್ತುಗಳಿಂದ ಏನೂ ಪ್ರಯೋಜನವಿಲ್ಲವೆಂದು ಭಾವವು. ಆದರೆ, ಅನ್ಯಾಯ ಮೋಸಗಾರಿಕೆ ಕಳ್ಳತನ ಮೊದಲಾದವುಗಳಿಂದ ಪಾಪಾಸ್ರವವು ಆಗುತ್ತಿದ್ದರೆ ಅಂತಹ ಸಂಪತ್ತಿನಿಂದ ಫಲವೇನು? ಅದನ್ನು ಅನುಭವಿಸುವರ್ಯಾರು ? ಅವನು ಇಹಲೋಕದಲ್ಲಿ ಅನೇಕವಿಧವಾದ ದುಃಖಗಳಿಗೆ ಭಾಜನಾಗಿ ಪರಜನ್ಮ ದಲ್ಲಿಯೂ ನರಕಾದಿದುಃಖಗಳಿಗೆ ಭಾಗಿಯಾಗುವನು. ಆದ್ದರಿಂದ ಅಂತಹ ಅನ್ಯಾಯದಿಂದ ಸಂಪಾದಿಸಲ್ಪಟ್ಟ ಸಂಪತ್ತಿನಿಂದ ಇಹಪರಗಳಲ್ಲಿ ಸುಖ ವಿಲ್ಲವೆಂದು ಭಾವವು. ಸಾಮಾನ್ಯವಾಗಿ ಸಮ್ಯಕ್ತ್ವವು ವ್ಯವಹಾರ ನಿಶ್ಚ ಯಭೇದದಿಂದ ಎರಡು ಪ್ರಕಾರವಾಗಿದೆ. " ಇಪ್ಪತ್ತೈದು ಮಲ—-ದೋಷ

ಗಳಿಂದ ರಹಿತವಾದ ನಿರ್ಮಲ ಸಮ್ಯಕ್ತ್ವಕ್ಕೆ ವ್ಯವಹಾರಸಮ್ಯಗ್ದರ್ಶನ
ವೆಂದು ಹೆಸರು. ಈ ದೋಷವನ್ನು ಹಿಂದೆ ಇದೇ ಪುಸ್ತಕದಲ್ಲಿ ವರ್ಣಿ
ಸಲ್ಪಟ್ಟರೂ ಇಲ್ಲಿ ಅವುಗಳ ಸಂಕ್ಷೇಪನಾಮಮಾತ್ರವನ್ನು ವಿವರಿಸುವೆವು.
ಲೋಕಮೂಢ, ದೇವಮೂಢ, ಗುರುಮೂಢಗಳೆಂಬ ಮೂಢತ್ರಯಗಳೂ,
ಜ್ಞಾನ, ಪೂಜೆ ಮೊದಲಾದ ಎಂಟು ಮದಗಳೂ, ಸಮ್ಯಕ್ತ್ವಮೊದಲಾದ
ಗುಣಗಳಿಗೆ ಆಶ್ರಯಭೂತವಾಗಿರುವುದಕ್ಕೆ ಆಯತನವೆಂದು ಹೆಸರು.
ಇದಕ್ಕೆ ವಿಪರೀತವಾದುದೇ ಅನಾಯತನವು. ಈ ಅನಾಯತನವು ಮಿಥ್ಯಾ
ದೇವರು, ಮಿಥ್ಯಾದೇವಭಕ್ತರು, ಮಿಥ್ಯಾಗುರು, ಮಿಥ್ಯಾಗುರುಭಕ್ತರು
ಮಿಥ್ಯಾಶಾಸ್ತ್ರ, ಮಿಥ್ಯಾಶಾಸ್ತ್ರಜ್ಞರು ಎಂಬದಾಗಿ ಆರು ಪ್ರಕಾರವಾಗಿದೆ
ಈ ಅನಾಯತನಗಳ ಉಪಾಸನೆಗೆ ಅನಾಯತನಸೇವೆಯೆಂದು ಹೆಸರು.
ಹೀಗೆ ಆರು ಅನಾಯತನಸೇವೆಗಳೂ, ಶಂಕಾದಿ ದೋಷಗಳೆಂಟು:-
ಸರ್ವಜ್ಞರಿಂದ ಪ್ರತಿಪಾದಿಸಲ್ಪಟ್ಟ ತತ್ವದಲ್ಲಿ ಸಂದೇಹವನ್ನು ಪಡುವು
ದಕ್ಕೆ ಶಂಕಾದೋಷವೆಂದು ಹೆಸರು. ಕರ್ಮಾಧೀನವೂ ಅನಿತ್ಯವೂ ದುಃಖ
ಮಿಶ್ರಿತವೂ ಆದ ಸಾಂಸಾರಿಕ ಸುಖಾಭಿಲಾಷೆಗೆ ಕಾಂಕ್ಷೆಯೆಂದು ಹೆಸರು.
ರತ್ನತ್ರಯಗಳಿಂದ ಪರಿಶುದ್ಧರಾದ ವ್ರತಿಗಳ ದೇಹಾಶುಚಿಯನ್ನು ನೋಡಿ
ಅಸಹ್ಯಪಡುವುದಕ್ಕೆ ವಿಚಿಕಿತ್ಸೆಯೆಂದು ಹೆಸರು. ಮಿಥ್ಯಾದೃಷ್ಟಿಗಳಲ್ಲಿ
ಅಜ್ಞಾನದಿಂದ ಭಕ್ತಿಯನ್ನು ಮಾಡುವುದಕ್ಕೆ ಮೂಢದೃಷ್ಟಿಯೆಂದು ಹೆಸರು.
ಅಜ್ಞಾನಿಗಳಿಂದಲೂ ಅಶಕ್ತಜನರಿಂದಲೂ ಜಿನಧರ್ಮಕ್ಕೆ ಉಂಟಾಗುವ
ದೂಷಣೆಯನ್ನು ಹೋಗಲಾಡಿಸದಿರುವುದಕ್ಕೆ ಅನುಪಗೂಹನದೋಷವೆಂದು
ಹೆಸರು. ತನ್ನ ಮೋಹನೀಯಕರ್ಮದ ವಶದಿಂದ ರತ್ನತ್ರಯಗಳನ್ನು
ತ್ಯಜಿಸುವವರನ್ನು ಪುನಃ ಅದೇ ಧರ್ಮದಲ್ಲಿ ಸ್ಥಿರಪಡಿಸದಿರುವುದಕ್ಕೆ
ಅಸ್ಥಿತೀಕರಣದೋಷವೆಂದು ಹೆಸರು. ಧಾರ್ಮಿಕರಲ್ಲಿ ಪ್ರೀತಿಯನ್ನು
ಮಾಡದಿರುವುದಕ್ಕೆ ಅವಾತ್ಸಲ್ಯದೋಷವೆಂದು ಹೆಸರು. ಜನಗಳ ಅಜ್ಞಾನ
ವನ್ನು ದೂರ ಮಾಡದೆ ಜಿನಧರ್ಮವನ್ನು ಪ್ರಕಾಶ ಪಡಿಸದಿರುವುದಕ್ಕೆ
ಅಪ್ರಭಾವನಾದೋಷವೆಂದು ಹೆಸರು. ಈ ರೀತಿಯಾಗಿ ೩+೮+೬+೮ =೨೫

§ ದೋಷಗಳಿಂದ ವ್ಯವಹಾರಸಮ್ಯಕ್ತ್ವವು ರಹಿತವಾಗಿರಬೇಕು. ನಿಶ್ಚಯದಿಂದ ತನ್ನ ಶುದ್ಧಾತ್ಮತತ್ವದಲ್ಲಿ ನಂಬಿಕೆಯನ್ನಿಡುವುದಕ್ಕೆ ನಿಶ್ಚಯಸಮ್ಯಕ್ತ್ವವೆಂದು ಹೆಸರು. ಇಂತಹ ಉಭಯ ಸಮ್ಯಕ್ತ್ವಗಳಿಂದ ಪಾಪಾಸ್ರವಗಳನ್ನು ನಾಶಮಾಡುತ್ತಿರುವ ಭವ್ಯಾತ್ಮನಿಗೆ ಸಾಂಸಾರಿಕಜನ್ಯವಾದ ಯಾವ ಸಂಪತ್ತಿನಿಂದಲೂ ಪ್ರಯೋಜನವಿಲ್ಲವೆಂದು ಮುಖ್ಯಾಭಿಪ್ರಾಯವು.

### ಸಮ್ಯಗ್ದರ್ಶನದ ಮಹಿಮೆಯ ವರ್ಣನೆ.

**ಸಮ್ಯಗ್ದರ್ಶನಸಂಪನ್ನಮಪಿ ಮಾತಂಗದೇಹಜಂ ||**
**ದೇವಾ ದೇವಂ ವಿದುರ್ಭಸ್ಮ-ಗೂಢಾಂಗಾರಾಂತರೌಜಸಂ || ೨೮ ||**

**ಅನ್ವಯಾರ್ಥ:**— ದೇವಾಃ— ಗಣಧರಾದಿಗಳು ಸಮ್ಯಗ್ದರ್ಶನಸಂಪನ್ನಂ— ಸಮ್ಯಗ್ದರ್ಶನದಿಂದ ಕೂಡಿರುವ ಮಾತಂಗದೇಹಜಂ--ಅಪಿ–ಚಾಂಡಾಲನನ್ನು ಕೂಡ ಭಸ್ಮಗೂಢಾಂಗಾರಾಂತರೌಜಸಂ'ಇವ'–ಬೂದಿಯಿಂದ ಮುಚ್ಚಲ್ಪಟ್ಟ ಕೆಂಡದ ಪ್ರಕಾಶದಂತೆ ದೇವಂ—ದೇವತೆಗಳಿಗೆ ಸಮಾನನೆಂದು ವಿದುಃ— ಹೇಳುತ್ತಾರೆ.

ತಾತ್ಪರ್ಯ—ಭಸ್ಮದಿಂದ ಆಚ್ಛಾದಿಸಲ್ಪಟ್ಟು ಗುಪ್ತವಾಗಿರುವ ಕೆಂಡವು ಒಳಗೆ ದೇದೀಪ್ಯಮಾನವಾಗಿರುವಂತೆ ಚಾಂಡಾಲನ ಜನ್ಮದಲ್ಲಿ ಜನಿಸಿರುವ ಮಾದಿಗನೂ ಸಮ್ಯಕ್ತ್ವವಂತನಾಗಿದ್ದರೆ—ಅಂತರಂಗದಲ್ಲಿ ಸಮ್ಯಗ್ದರ್ಶನದ ಪ್ರಭಾವದಿಂದ ಆತನನ್ನು ದೇವತೆಗಳೂ ಪೂಜಿಸುತ್ತಾರೆ. ಪ್ರಥಮಾನುಯೋಗಶಾಸ್ತ್ರದಲ್ಲಿ ಇಂತಹ ದೃಷ್ಟಾಂತಗಳು ಹಲವು ಉಪಲಬ್ಧವಾಗುತ್ತಿವೆ. ಆದುದರಿಂದ ಅವನನ್ನು ಗಣಧರರು ದೇವತುಲ್ಯನೆಂದು ಹೇಳುತ್ತಾರೆ.

### ಧರ್ಮಾಧರ್ಮದ ಸ್ವರೂಪ ವರ್ಣನೆ.

**ಶ್ವಾಪಿ ದೇವೋಽಪಿ ದೇವ: ಶ್ವಾ। ಜಾಯತೇ ಧರ್ಮಕಿಲ್ಬಿಷಾತ್ ||**
**ಕಾಪಿ ನಾಮ ಭವೇದನ್ಯಾ । ಸಂಪದ್ಧರ್ಮಾಚ್ಛರೀರಿಣಾಂ || ೨೯ ||**

---

§ ಮೂಢತ್ರಯಂ ಮದಾಶ್ಚಾಷ್ಟೌ, ತಥಾನಾಯತನಾನಿ ಷಟ್ ||
ಅಷ್ಟೌ ಶಂಕಾದಯಶ್ಚೇತಿ' ದೃಗ್ದೋಷಾಃ ಪಂಚವಿಂಶತಿಃ ||

**ಅನ್ವಯಾರ್ಥ**— ಧರ್ಮಕಿಲ್ಬಿಷಾತ್-ಪುಣ್ಯ ಮತ್ತು ಪಾಪದಿಂದ ಶ್ವಾ—ಅಪಿ—ನಾಯಿಯು ಕೂಡ ದೇವಃ-ದೇವನಾಗಿಯೂ, ಅಪಿ—ಮತ್ತು ದೇವಃ—ದೇವನು ಶ್ವಾ—ನಾಯಿಯಾಗಿಯೂ ಜಾಯತೆ—ಆಗುತ್ತಾನೆ. ಧರ್ಮಾತ್- ಧರ್ಮಕ್ಕಿಂತಲೂ ಶರೀರಿಣಾಂ-ಪ್ರಾಣಿಗಳಿಗೆ ಅನ್ಯಾ—ಬೇರೆಯಾದ ಕಾಪಿ ನಾಮ ಸಂಪತ್—ಯಾವ ಸಂಪತ್ತು ತಾನೇ ಭವೇತ್—ಉಂಟಾದೀತು ?

**ತಾತ್ಪರ್ಯ**:- ಪುಣ್ಯದ ಪ್ರಭಾವದಿಂದ ಶ್ವಾನನೂ ಸ್ವರ್ಗದಲ್ಲಿ ದೇವನಾಗಿ ಜನಿಸುತ್ತಾನೆ. ಪಾಪದ ಫಲದಿಂದ ಮಹಾಋದ್ಧಿಧಾರಿಯಾದ ದೇವನೂ ಸಹ ನಾಯಿಯಾಗಿ ಉದ್ಭವಿಸುತ್ತಾನೆ. ಧರ್ಮದ ಪ್ರಭಾವದಿಂದ ಅವಿನಾಶಿಯಾದ ಸಾಕ್ಷಾನ್ಮೋಕ್ಷವೇ ಪ್ರಾಪ್ತಿಯಾಗುವಾಗ ಈ ದೇವಸಂಪತ್ತಿನ ಪ್ರಾಪ್ತಿಯಲ್ಲೇನಾಶ್ಚರ್ಯ ! ಆದುದರಿಂದ ಭವ್ಯಾತ್ಮರಿಗೆ ಧರ್ಮಕಾರ್ಯಕ್ಕೆ ಸಮಾನವಾದ ಬೇರೆ ಸಂಪತ್ತಿ ಯಾವುದಿದೆ? ಅಂದರೆ ಧರ್ಮಕ್ಕೆ ಸಮಾನವಾದ ಇತರ ಸಂಪತ್ತಿಲ್ಲವೆಂಬು ಭಾವವು.

**ಸಮ್ಯಗ್ದೃಷ್ಟಿಗಳು ತ್ಯಜಿಸಬೇಕಾದುದು.**

**ಭಯಾಶಾಸ್ನೇಹಲೋಭಾಚ್ಚ । ಕುದೇವಾಗಮಲಿಂಗಿನಾಂ ॥**
**ಪ್ರಣಾಮಂ ವಿನಯಂ ಚೈವ । ನ ಕುರ್ಯ್ಯು: ಶುದ್ಧದೃಷ್ಟಯಃ ॥**

**ಅನ್ವಯಾರ್ಥಃ**—ಶುದ್ಧದೃಷ್ಟಯಃ—ನಿರ್ಮಲವಾದಸಮ್ಯಕ್ತ್ವವಂತರು ಭಯಾಶಾಸ್ನೇಹಲೋಭಾತ್-ಭೀತಿ ಆಶೆ-ಪ್ರೀತಿ ಮತ್ತು ಲೋಭ ಇವುಗಳಿಂದ ಕುದೇವಾಗಮಲಿಂಗಿನಾಂ—ಮಿಥ್ಯಾದೇವರು. ಮಿಥ್ಯಾಶಾಸ್ತ್ರ, ಮಿಥ್ಯಾಗುರು ಇವರುಗಳಿಗೆ ಪ್ರಣಾಮಂ-— ನಮಸ್ಕಾರವನ್ನು ಚ—ಮತ್ತು ವಿನಯಂ ಚೈವ—ವಿನಯವನ್ನು ಕೂಡ ನ ಕುರ್ಯ್ಯುಃ— ಮಾಡಬಾರದು.

**ತಾತ್ಪರ್ಯ**—ಪೂರ್ವೋಕ್ತವಾದ ೨೫ ಅತಿಚಾರ—ದೋಷಗಳಿಂದ ರಹಿತವಾದ ಶುದ್ಧಸಮ್ಯಗ್ದೃಷ್ಟಿಗಳು, ಭಯ ಆಶೆ ಸ್ನೇಹ ಮತ್ತು ಲೋಭಗಳಿಂದ ಕುದೇವ ಕುಶಾಸ್ತ್ರ ಕುಲಿಂಗ ಇವರುಗಳಿಗೆ ನಮಸ್ಕಾರವನ್ನೂ ವಿನಯ—ಸತ್ಕಾರವನ್ನೂ ಮಾಡಬಾರದು. ಕಾಮ ಕ್ರೋಧ ಮದ ಮಾ-

ತ್ಸರ್ಯ ರಾಗ ದ್ವೇಷ ಮೋಹ ಭಯ ನಿದ್ರೆ ಜನ್ಮ ಜರಾ ಮರಣ ಕ್ಷುಧಾ ತೃಷೆ ಮೊದಲಾದ ದೋಷಗಳಿಂದ ಯುಕ್ತರಾದವರಿಗೆ ಕುದೇವರೆಂದು ಹೆಸರು. ವೀತರಾಗ ಸರ್ವಜ್ಞರನ್ನು ಹೊರತು ಉಳಿದವರನ್ನು ಕುದೇವರೆಂದು ತಿಳಿಯಬೇಕು. ಹಿಂಸೆ ರಾಗ ದ್ವೇಷ ಮೋಹವನ್ನುಂಟು ಮಾಡುವುದೂ ಪೂರ್ವಾಪರದೋಷಗಳಿಂದ ಯುಕ್ತವೂ ಕೃಷ್ಯಾದ್ಯಾರಂಭಗಳನ್ನು ಪ್ರತಿಪಾದಿಸುವುದೂ ಪ್ರತ್ಯಕ್ಷಪರೋಕ್ಷ ಪ್ರಮಾಣಗಳಿಂದ ವಿರೋಧವುಳ್ಳುದು ಆದ ಶಾಸ್ತ್ರಕ್ಕೆ 'ಕು ಆಗಮ'ವೆಂದು ಹೆಸರು. ೨೮÷ ಮೂಲಗುಣಗಳಿಂದ ಕೂಡಿದವರೂ ಆಂರಭ ಮತ್ತು ಪರಿಗ್ರಹಗಳಿಲ್ಲದವರೂ ದೇಹದಲ್ಲಿ ಮಮತೆಯಿಲ್ಲದವರೂ ಧ್ಯಾನಾಧ್ಯಯನ ತಪಸ್ಸುಗಳಲ್ಲಿ ಅಸಕ್ತರೂ ರತ್ನತ್ರಯಗಳಿಗೆ ಸಹಕಾರಿಯಾದ ಶರೀರದ ರಕ್ಷಣೆಗೋಸ್ಕರ ಮೌನದಿಂದ ಏಕಾಶನವನ್ನು ಮಾಡುವವರೂ ಆದ ದಿಗಂಬರ ಮುನಿಲಿಂಗ, ಒಂದು ವಸ್ತ್ರ ಅಥವಾ ಕೌಪೀನವನ್ನು ಧರಿಸಿರುವ ಕ್ಷುಲ್ಲಕಲಿಂಗ, ಮತ್ತು ಒಂದು ವಸ್ತ್ರವನ್ನು ಧರಿಸಿರುವ ಅರ್ಜಿಕೆಯರ ಲಿಂಗ, ಈಮೂರನ್ನು ಹೊರತು ಉಳಿದ ವೇಷಗಳಿಗೆ 'ಕುಲಿಂಗ'ವೆಂದು ಹೆಸರು. ಇಲ್ಲಿ ಲಿಂಗವೆಂದರೆ ಚಿಹ್ನೆ ಅಥವಾ ವೇಷವೆಂದು ತಿಳಿಯಬೇಕು. ಆದ್ದರಿಂದ ಇಂತಹ ಮಿಥ್ಯಾದೇವ ಶಾಸ್ತ್ರ ಗುರುಗಳಿಗೆ ರಾಜರ ಭಯದಿಂದಾಗಲಿ, ವರಾಭಿಲಾಷೆಯಿಂದವಾಗಲಿ ಮಿತ್ರಸ್ನೇಹದಿಂದಾಗಲಿ ಅಥವಾ ಲೋಭದಿಂದಾಗಲಿ ಸಮ್ಯಗ್ದೃಷ್ಟಿಯು ನಮಸ್ಕಾರವನ್ನೂ ವಿನಯ—ಸತ್ಕಾರ—ಭಕ್ತಿ ಮೊದಲಾದುವುಗಳನ್ನೂ ಮಾಡಬಾರದೆಂದು ಮುಖ್ಯಾಭಿಪ್ರಾಯವು. ಇಲ್ಲಿ ಆಶೆ ಮತ್ತು ಲೋಭ ಈ ಎರಡು ಪದಗಳು ಏಕಾರ್ಥಪರ್ಯಾಯವಾಚಿಗಳಾಗಿದ್ದರೂ

---

÷ಅಹಿಂಸಾದಿ ಪಂಚಮಹಾವ್ರತಗಳು, ಈರ್ಯಾಸಮಿತಿ ಮೊದಲಾದ ಪಂಚ ಸಮಿತಿಗಳು, ಸಾಮಾಯಿಕಾದಿ ಷಡಾವಶ್ಯಕಕ್ರಿಯೆಗಳು, ಪಂಚೇಂದ್ರಿಯನಿಗ್ರಹ, ಕೇಶೋತ್ಪಾಟನ, ನಗ್ನತ್ವ, ಅಸ್ನಾನ, ಭೂಮಿಶಯನ, ಅದಂತಧಾವನ, ಸ್ಥಿತಿ ಭೋಜನ, ಮತ್ತು ಏಕಾಶನ ಇವುಗಳು ಮುನಿಗಳ ೨೮ ಮೂಲಗುಣಗಳು.

ಮುಂದಕ್ಕೆ ಉಂಟಾಗುವ ವಸ್ತುವಿನ ಆಕಾಂಕ್ಷೆಗೆ ಆಶೆಯೆಂದೂ, ಈಗ ಲಭಿಸಿರುವ ದ್ರವ್ಯದಲ್ಲಿ ಅತ್ಯಾಶೆಯನ್ನು ಮಾಡುವುದಕ್ಕೆ ಲೋಭವೆಂದೂ ತಿಳಿಯಬೇಕು.

**ಸಮ್ಯಗ್ದರ್ಶನದ ಪ್ರಾಮುಖ್ಯತೆ.**

**ದರ್ಶನಂ ಜ್ಞಾನಚಾರಿತ್ರಾತ್ಸಾಧಿಮಾನಮುಪಾಶ್ನುತೇ ||**
**ದರ್ಶನಂ ಕರ್ಣಧಾರಂ ತನ್ಮೋಕ್ಷಮಾರ್ಗೇ ಪ್ರಚಕ್ಷ್ಯತೇ ||೩೧||**

**ಅನ್ವಯಾರ್ಥ:**—ಜ್ಞಾನಚಾರಿತ್ರಾತ್—ಜ್ಞಾನ ಮತ್ತು ಚಾರಿತ್ರಕ್ಕಿಂತಲೂ, ದರ್ಶನಂ—ಸಮ್ಯಗ್ದರ್ಶನವು ಸಾಧಿಮಾನಂ- ಪ್ರಧಾನವೆಂದು ಉಪಾಶ್ನುತೇ—ಹೇಳಲ್ಪಡುತ್ತದೆ. 'ಯತಃ'-ಯಾಕಂದರೆ ತತ್ ದರ್ಶನಂ-ಆ ಸಮ್ಯಗ್ದರ್ಶನವು ಮೋಕ್ಷಮಾರ್ಗೇ—ಮೋಕ್ಷೋಪಾಯದಲ್ಲಿ ಕರ್ಣಧಾರಂ—ನಾವಿಕನೆಂದು ಪ್ರಚಕ್ಷ್ಯತೇ—ಹೇಳಲ್ಪಡುತ್ತದೆ.

**ತಾತ್ಪರ್ಯ:**—ಜ್ಞಾನ ಮತ್ತು ಚಾರಿತ್ರಾಪೇಕ್ಷೆಯಿಂದ ಸಮ್ಯಗ್ದರ್ಶನವು ಶ್ರೇಷ್ಠವಾದುದು. ಸಮುದ್ರದ ಪಾರವನ್ನು ಹೊಂದಬೇಕಾದರೆ ಹಡಗನ್ನು ನಡೆಯಿಸುವ ನಾವಿಕನು ಪ್ರಾಧಾನ್ಯನಾಗಿ ಬೇಕಾಗುವಂತೆ, ಸಂಸಾರವೆಂಬ ಸಮುದ್ರದಲ್ಲಿ ರತ್ನತ್ರಯರೂಪವಾದ ಹಡಗನ್ನು ಪಾರಗೊಳಿಸುವರೇ ಸಮ್ಯಗ್ದರ್ಶನವು ಕರ್ಣಧಾರನಂತಿರುವುದು. ಆದುದರಿಂದಲೇ ಮೋಕ್ಷೋಪಾಯದಲ್ಲಿ ಸಮ್ಯಗ್ದರ್ಶನವು ಮುಖ್ಯವಾದುದೆಂದಭಿಪ್ರಾಯವು.

**ವಿದ್ಯಾವೃತ್ತಸ್ಯ ಸಂಭೂತಿಸ್ಥಿತಿವೃದ್ಧಿಫಲೋದಯಾಃ ||**
**ನ ಸಂತ್ಯಸತಿ ಸಮ್ಯಕ್ತ್ವೇ | ಬೀಜಾಭಾವೇ ತರೋರಿವ ||೩೨||**

**ಅನ್ವಯಾರ್ಥಃ**—ಸಮ್ಯಕ್ತ್ವೇ—ಸಮ್ಯಗ್ದರ್ಶನವು ಅಸತಿ—ಇಲ್ಲದೆ ಬೀಜಾಭಾವೇ—ಬೀಜವಿಲ್ಲದೆ ತರೋಃಇವ—ಮರದಂತೆ ವಿದ್ಯಾವೃತ್ತಸ್ಯ—ಜ್ಞಾನ ಮತ್ತು ಚಾರಿತ್ರಗಳ ಸಂಭೂತಿಸ್ಥಿತಿವೃದ್ಧಿಫಲೋದಯಾ—ಉತ್ಪತ್ತಿ ಸ್ಥಿತಿ— ವೃದ್ಧಿ—ಫಲ ಇವುಗಳು ನ ಸಂತಿ—ಉಂಟಾಗಲಾರದು.

**ತಾತ್ಪರ್ಯಃ**—ವೃಕ್ಷಗಳ ಉತ್ಪತ್ತಿಗೆ ಬೀಜವು ಅತ್ಯಾವಶ್ಯಕವಾದುದು. ಬೀಜವಿಲ್ಲದಿದ್ದರೆ ಅವುಗಳ ಉತ್ಪತ್ತಿಯೂ ಇರುವಿಕೆಯೂ ಬೆಳೆ

ಯುವಿಕೆಯೂ ಫಲವನ್ನು ಕೊಡುವಿಕೆಯೂ ಹೇಗೆ ಉಂಟಾಗಲಾರದೋ, ಅದರಂತೆ ಸಮ್ಯಗ್ದರ್ಶನವಿಲ್ಲದೆ ಇರುವ ಜ್ಞಾನ ಮತ್ತು ಚಾರಿತ್ರಗಳು ಮಿಥ್ಯಾಜ್ಞಾನಚಾರಿತ್ರಗಳೆಂದು ಹೇಳಲ್ಪಡುತ್ತವೆ. ಸಮ್ಯಗ್ದರ್ಶನವಿಲ್ಲದೆ ಜ್ಞಾನ ಮತ್ತು ಚಾರಿತ್ರಗಳ ಉತ್ಪತ್ತಿ, ಇರುವಿಕೆ, ಅಭಿವೃದ್ಧಿ, ಫಲಪ್ರಾಪ್ತಿ ಇವುಗಳು ಉಂಟಾಗಲಾರವು. ಇದೇ ಅಭಿಪ್ರಾಯವನ್ನು ಶ್ರೀಗುಣಭದ್ರಾಚಾರ್ಯರೂ ತನ್ನ ಆತ್ಮಾನುಶಾಸನವೆಂಬ ಗ್ರಂಥದಲ್ಲಿ ಪ್ರತಿಪಾದಿಸಿರುತ್ತಾರೆ. "ಶಮಬೋಧವೃತ್ತತಪಸಾಂ ಪಾಷಾಣಸ್ಯೇವ ಗೌರವಂ ಪುಂಸಃ|| ಪೂಜ್ಯಂ ಮಹಾಮಣೇರಿವ ತದೇವ ಸಮ್ಯಕ್ತ್ವಸಂಯುಕ್ತಂ"— ಕಷಾಯಗಳ ಉಪಶಮದಿಂದ ಉಂಟಾದ ಜ್ಞಾನಚಾರಿತ್ರ ತಪಸ್ಸು ಇವುಗಳು ಪುರುಷರಿಗೆ ಪಾಷಾಣದಂತೆ ಭಾರವಾದುದು. ಅವುಗಳೇ ಸಮ್ಯಕ್ತ್ವ ಸಹಿತಗಳಾಗಿದ್ದರೆ ಅಮೂಲ್ಯರತ್ನದಂತೆ ಭೂಷಣಾರ್ಹವಾಗುತ್ತದೆ.

**ಮೋಹೀ ಮತ್ತು ನಿರ್ಮೋಹಿಗಳಿಗಿರುವ ಭೇದ.**

**ಗೃಹಸ್ಥೋ ಮೋಕ್ಷಮಾರ್ಗಸ್ಥೋ । ನಿರ್ಮೋಹೋ ನೈವ ಮೋಹವಾನ್ ॥ ಅನಗಾರೋ ಗೃಹೀ ಶ್ರೇಯಾನ್ । ನಿರ್ಮೋಹೋ ಮೋಹಿನೋ ಮುನೇಃ ||೩೩||**

**ಅನ್ವಯಾರ್ಥಃ**— ನಿರ್ಮೋಹಃ—ಮೋಹರಹಿತನಾದ ಗೃಹಸ್ಥಃ— ಶ್ರಾವಕನು ಮೋಕ್ಷಮಾರ್ಗಸ್ಥಃ—ಮೋಕ್ಷಮಾರ್ಗದಲ್ಲಿರತಕ್ಕವನು ಮೋಹವಾನ್—ಮೋಹವುಳ್ಳ ಅನಗಾರಃ ಏವ—ಮುನಿಯೂ ಕೂಡ ನ—ಮೋಕ್ಷಮಾರ್ಗದಲ್ಲಿರತಕ್ಕವನಲ್ಲವು 'ಅತಏವ' ಆದ್ದರಿಂದಲೇ ಮೋಹಿನಃ—ದ್ರವ್ಯಲಿಂಗಿಯಾದ ಮುನೇಃ—ಮುನಿಗಿಂತಲೂ ನಿರ್ಮೋಹಃ—ಮೋಹರಹಿತನಾದ ಗೃಹೀ—ಸಮ್ಯಕ್ತ್ವವಂತನಾದ ಗೃಹಸ್ಥನು ಶ್ರೇಯಾನ್—ಶ್ರೇಷ್ಠನು.

**ತಾತ್ಪರ್ಯಃ**—ಯಾವನಲ್ಲಿ ದರ್ಶನಮೋಹನೀಯದ ಭೇದವಾದ ಮಿಥ್ಯಾತ್ವವು ಇಲ್ಲವೋ ಅಂತಹ ಅವಿರತಸಮ್ಯಗ್ದೃಷ್ಟಿಯಾದ ಗೃಹಸ್ಥನು ಮೋಕ್ಷಮಾರ್ಗದಲ್ಲಿರತಕ್ಕವನು. ಅಂದರೆ, ಏಳೆಂಟು ಭವಗಳೊಳಗೆ ಮೋಕ್ಷವನ್ನು ಹೊಂದತಕ್ಕವನೆಂದು ಭಾವವು. ಪರಂತು, ಮೋಹ—ಮಿಥ್ಯಾತ್ವವುಳ್ಳ ಮುನಿಯು ಮೋಕ್ಷಮಾರ್ಗದಲ್ಲಿರತಕ್ಕವನಲ್ಲವು. ಸಂಸಾರದಲ್ಲಿಯೇ ಪರಿ

ಭ್ರಮಿಸುವವನೆಂದು ಭಾವವು. ಆದಕಾರಣ ಮೋಹವುಳ್ಳ ಯತಿಗಿಂತಲೂ ಮೋಹರಹಿತನಾದ ಗೃಹಸ್ಥನು ಶ್ರೇಷ್ಠನೆಂಬಭಿಪ್ರಾಯವು. *"ಸಮ್ಯಗ್ದರ್ಶನದಿಂದ ಭ್ರಷ್ಟ [ಮಲಿನ] ರಾದವರು ಯಾವಾಗಲೂ ಭ್ರಷ್ಟರೇ, ಅವರಿಗೆ ಎಂದೂ ಮುಕ್ತಿಯಾಗಲಾರದು. ಯದ್ಯಪಿ, ಚಾರಿತ್ರದಿಂದ ಭ್ರಷ್ಟರಾದರೂ ಮೋಕ್ಷವನ್ನು ಹೊಂದುತ್ತಾರೆ. ಸಮ್ಯಗ್ದರ್ಶನದಿಂದ ರಹಿತರಾದವರು ಮೋಕ್ಷವನ್ನು ಹೊಂದಲಿಕ್ಕಿಲ್ಲವು." ಎಂದು ದರ್ಶನಪಾಹುಡ ಗ್ರಂಥದಲ್ಲಿ ಶ್ರೀಕುಂದಕುಂದಾಚಾರ್ಯರು ಪ್ರತಿಪಾದಿಸಿರುತ್ತಾರೆ.

## ಸಮ್ಯಕ್ತ್ವ ಮತ್ತು ಮಿಥ್ಯಾತ್ವದ ವರ್ಣನೆ.

**ನ ಸಮ್ಯಕ್ತ್ವಸಮಂ ಕಿಂಚಿತ್ತ್ರೈಕಾಲ್ಯೇ ತ್ರಿಜಗತ್ಯಪಿ ||**
**ಶ್ರೇಯೋಽಶ್ರೇಯಶ್ಚ ಮಿಥ್ಯಾತ್ವಸಮಂ ನಾನ್ಯತ್ತನೂಭೃತಾಂ ||೩೪||**

**ಅನ್ವಯಾರ್ಥಃ**—ತ್ರೈಕಾಲ್ಯೇ—ಮೂರುಕಾಲದಲ್ಲಿ ತ್ರಿಜಗತಿ—ಮೂರು ಲೋಕದಲ್ಲಿ ತನೂಭೃತಾಂ—ಪ್ರಾಣಿಗಳಿಗೆ ಸಮ್ಯಕ್ತ್ವಸಮಂ—ಸಮ್ಯಕ್ತ್ವಕ್ಕೆ ಸಮಾನವಾದ ಕಿಂಚಿತ್—ಅಪಿ—ಸ್ವಲ್ಪವು ಕೂಡ ಶ್ರೇಯಃ—ಮಂಗಳಕರವು ನ—ಇಲ್ಲವು ಚ—ಮತ್ತು ಮಿಥ್ಯಾತ್ವಸಮಂ—ಮಿಥ್ಯಾತ್ವಕ್ಕೆ ಸಮಾನವಾದ ಅಶ್ರೇಯಃ—ಅಮಂಗಲಕರವು ನ—ಇಲ್ಲವು.

**ತಾತ್ಪರ್ಯ**:—ಪ್ರಾಣಿಗಳಿಗೆ ಭೂತಭವಿಷ್ಯದ್ವರ್ತಮಾನರೂಪವಾದ ಮೂರು ಕಾಲಗಳಲ್ಲಿ ಊರ್ಧ್ವಾಧೋಮಧ್ಯಭೇದವಾದ ಮೂರು ಲೋಕಗಳಲ್ಲಿ ಸಮ್ಯಕ್ತ್ವಕ್ಕೆ ಸಮಾನವಾದ ಕಲ್ಯಾಣಪ್ರದವೂ ಉಪಕಾರಕವೂ ಆದ ವಸ್ತುವು ಮತ್ತೊಂದಿಲ್ಲವು. ಮಿಥ್ಯಾತ್ವಕ್ಕೆ ಸಮಾನವಾದ ಅಮಂಗಲಕರವೂ ಅಪಕಾರಕವೂ ಆದ ಪದಾರ್ಥವು ಇನ್ನೊಂದಿಲ್ಲವೆಂದಭಿಪ್ರಾಯವು.

## ಸಮ್ಯಗ್ದರ್ಶನದ ಮಹತ್ವ ವರ್ಣನೆ.

**ಸಮ್ಯಗ್ದರ್ಶನಶುದ್ಧಾ ನಾರಕತಿರ್ಯಙ್ನಪುಂಸಕಸ್ತ್ರೀತ್ವಾನಿ ||**
**ದುಷ್ಕುಲವಿಕೃತಾಲ್ಪಾಯುರ್ದರಿದ್ರತಾಂ ಚ ವ್ರಜಂತಿ ನಾಪ್ಯವ್ರತಿಕಾಃ ||**

---

*ದಂಸಣಭಟ್ಠಾ ಭಟ್ಠಾ, ದಂಸಣಭಟ್ಠಾಣ ಣತ್ಥಿ ಣಿವ್ವಾಣಂ ||
ಸಿಜ್ಝಂತಿ ಚರಿಯಭಟ್ಠಾ, ದಂಸಣಭಟ್ಠಾ ಣ ಸಿಜ್ಝಂತಿ ||

**ಅನ್ವಯಾರ್ಥ**:—ಸಮ್ಯಗ್ದರ್ಶನಶುದ್ಧಾ–ಸಮ್ಯಗ್ದರ್ಶನದಿಂದ **ಪವಿತ್ರ** ರಾದವರು ಅವ್ರತಿಕಾ ಅಪಿ—ವ್ರತಹೀನರಾದರೂ ನಾರಕತಿರ್ಯಙ್ನಪುಂಸಕ ಸ್ತ್ರೀತ್ವಾನಿ-ನರಕ ತಿರ್ಯಂಚ ನಪುಂಸಕ ಮತ್ತು ಸ್ತ್ರೀಪರ್ಯಾಯ ಚ–ಮತ್ತು ದುಷ್ಕುಲವಿಕೃತಾಲ್ಪಾಯುಃ–ನೀಚಕುಲ ವಿಕಲಾಂಗ ಮತ್ತು ಅಲ್ಪಾಯುಷ್ಯ ವನ್ನು ದರಿದ್ರತಾಂ- ದರಿದ್ರತ್ವವನ್ನು ನ ವ್ರಜಂತಿ—ಹೊಂದುವುದಿಲ್ಲವು.

**ತಾತ್ಪರ್ಯ**:—ಶುದ್ಧಸಮ್ಯಗ್ದೃಷ್ಟಿಗಳು ವ್ರತಹೀನರಾದರೂ ನರಕ ಮತ್ತು ತಿರ್ಯಂಚಗತಿ ನಪುಂಸಕತ್ವ ಸ್ತ್ರೀಪರ್ಯಾಯ ನೀಚಕುಲ ವಿಕಾರವಾದ ಶರೀರ ಅಲ್ಪಾಯುಷ್ಯ ದಾರಿದ್ರ್ಯ—ಇವುಗಳನ್ನು ಹೊಂದುವುದಿಲ್ಲ. ಅಂದರೆ- ಸಮ್ಯಗ್ದೃಷ್ಟಿಗಳಿಗೆ ೧ ಮಿಥ್ಯಾತ್ವ ೨ ಹುಂಡಕ ಸಂಸ್ಥಾನ ೩. ನಪುಂಸಕವೇದ ೪ ಅಸಂಪ್ರಾಪ್ತ ಅಸೃಪಾಟಕಸಂಹನನ ೫ ಏಕೇಂದ್ರಿಯ ೬ ಸ್ಥಾವರ ೭ ಆತಪ ೮ ಸೂಕ್ಷ್ಮತ್ವ ೯ ಅಪರ್ಯಾಪ್ತ ೧೦ ದ್ವೀಂದ್ರಿಯ ೧೧ ತ್ರೀಂದ್ರಿಯ ೧೨ ಚತು ರಿಂದ್ರಿಯ ೧೩ ಸಾಧಾರಣ ೧೪ ನರಕಗತಿ ೧೫ ನರಕಗತ್ಯಾನುಪೂರ್ವಿ ೧೬ ನರಕಾಯು ೧೭ ಅನಂತಾನುಬಂಧಿಕ್ರೋಧ ೧೮ ಮಾನ ೧೯ ಮಾಯಾ ೨೦ ಲೋಭ ೨೧ ಸ್ತ್ಯಾನಗೃದ್ಧಿ ೨೨ ನಿದ್ರಾನಿದ್ರಾ ೨೩ ಪ್ರಚಲಾಪ್ರಚಲಾ ೨೪ ದುರ್ಭಗ ೨೫ ದುಸ್ವರ ೨೬ ಅನಾದೇಯ ೨೭ ನ್ಯಗ್ರೋಧಪರಿಮಂಡಲಸಂಸ್ಥಾನ ೨೮ ಸ್ವಾತಿಸಂಸ್ಥಾನ ೨೯ ಕುಬ್ಜಸಂಸ್ಥಾನ ೩೦ ವಾಮನಸಂಸ್ಥಾನ ೩೧ ವಜ್ರನಾರಾಚಸಂಹನನ ೩೨ ನಾರಾಚಸಂಹನನ ೩೩ ಅರ್ಧನಾರಾಚಸಂಹನನ ೩೪ ಕೀಲಿತಸಂಹನನ ೩೫ ಅಪ್ರಶಸ್ತವಿಹಾಯೋಗತಿ ೩೬ ಸ್ತ್ರೀವೇದ ೩೭ ನೀಚಗೋತ್ರ ೩೮ ತಿರ್ಯಗ್ಗತಿ ೩೯ ತಿರ್ಯಗ್ಗತ್ಯಾನುಪೂರ್ವಿ ೪೦ ತಿರ್ಯಂಚಾಯು ೪೧ ಉದ್ಯೋತಗಳೆಂಬೀ ನಾಲ್ವತ್ತೊಂದು ಕರ್ಮಪ್ರಕೃತಿಗಳು ಬಂಧವಾಗುವುದಿಲ್ಲವು.

**ಓಜಸ್ತೇಜೋವಿದ್ಯಾವೀರ್ಯ್ಯಯಶೋವೃದ್ಧಿವಿಜಯವಿಭವ**
**ಸನಾಥಾ: || ಮಹಾಕುಲಾ ಮಹಾರ್ಥಾ ಮಾನವತಿಲಕಾ ಭವಂತಿ**
**ದರ್ಶನಪೂತಾ: ||೩೬||**

**ಅನ್ವಯಾರ್ಥ**:—ದರ್ಶನಪೂತಾಃ—ಸಮ್ಯಗ್ದರ್ಶನದಿಂದ ಪವಿತ್ರ

ರಾದವರು ಓಜಸ್ತೇಜೋವಿದ್ಯಾವೀರ್ಯಯಶೋವೃದ್ಧಿ ವಿಜಯವಿಭವಸ ನಾಥಾಃ—ಪರಾಕ್ರಮ, ಕಾಂತಿ, ವಿದ್ಯೆ, ಶಕ್ತಿ, ಕುಲವೃದ್ಧಿ' ಐಶ್ವರ್ಯ ಇವುಗಳಿಂದ ಕೂಡಿದವರೂ ಮಹಾಕುಲಾಃ—ಉಚ್ಚ ಕುಲದಲ್ಲಿ ಉದ್ಭವಿ ಸುವವರೂ ಮಹಾರ್ಥಾ:—ಪುರುಷಾರ್ಥಚತುಷ್ಟಯಗಳನ್ನು ಸಾಧಿಸುವ ವರೂ ಮಾನವತಿಲಕಾಃ- ಮನುಷ್ಯರಲ್ಲಿ ಶ್ರೇಷ್ಠರೂ ಭವಂತಿ—ಆಗುತ್ತಾರೆ.

**ತಾತ್ಪರ್ಯ:**—ಶುದ್ಧಸಮ್ಯಗ್ದೃಷ್ಟಿಗಳು ಪರಾಕ್ರಮ ಕಾಂತಿ ವಿದ್ಯೆ ಶಕ್ತಿ ಕೀರ್ತಿ ಅಭಿವೃದ್ಧಿ ಐಶ್ವರ್ಯಸಂಪನ್ನರಾಗಿ ಉಚ್ಚಕುಲದಲ್ಲಿ ಉದ್ಭವಿಸಿ ಧರ್ಮಾರ್ಥಕಾಮಮೋಕ್ಷಗಳೆಂಬ ಪುರುಷಾರ್ಥಚತುಷ್ಟಯಗಳನ್ನು ಸಾಧಿಸಿ ಮಾನವರಲ್ಲಿ ಶಿರೋಮಣಿಗಳೆನಿಸುತ್ತಾರೆ.

**ಅಷ್ಟಗುಣಪುಷ್ಟಿತುಷ್ಟಾ ದೃಷ್ಟಿವಿಶಿಷ್ಟಾಃ ಪ್ರಕೃಷ್ಟಶೋಭಾ ಜುಷ್ಟಾ: ॥ ಅಮರಾಪ್ಸರಸಾಂ ಪರಿಷದಿ ಚಿರಂ ರಮಂತೇ ಜಿನೇಂದ್ರ ಭಕ್ತಾ: ಸ್ವರ್ಗೇ ॥೩೭॥**

**ಅನ್ವಯಾರ್ಥ:**—ದೃಷ್ಟಿವಿಶಿಷ್ಟಾಃ—ಸಮ್ಯಗ್ದೃಷ್ಟಿಗಳು ಸ್ವರ್ಗೇ—ಸ್ವರ್ಗದಲ್ಲಿ ಜಿನೇಂದ್ರಭಕ್ತಾಃ—ಜಿನಭಕ್ತರೂ ಅಷ್ಟಗುಣಪುಷ್ಟಿತುಷ್ಟಾ:—ಅಣಿಮಾದಿ ಅಷ್ಟಋದ್ಧಿಗಳಿಂದ ಸಂತುಷ್ಟರೂ, ಪ್ರಕೃಷ್ಟಶೋಭಾಜುಷ್ಟಾ: 'ಸಂತ:—ಅತಿಶಯವಾದ ಶೋಭಾಯುಕ್ತರೂ ಆಗಿ, ಅಮರಾಪ್ಸರಸಾಂ—ದೇವತಾಸ್ತ್ರೀಯರ ಪರಿಷದಿ—ಸಭೆಯಲ್ಲಿ ಚಿರಂ—ಬಹುಕಾಲದವರೆಗೆ ರಮಂತೇ—ಕ್ರೀಡಿಸುತ್ತಾರೆ.

**ತಾತ್ಪರ್ಯ:**—ಸಮ್ಯಗ್ದೃಷ್ಟಿಗಳು ಸ್ವರ್ಗದಲ್ಲಿ ಉದ್ಭವಿಸಿ, ಜಿನೇಶ್ವರರಲ್ಲಿ ಭಕ್ತಿವುಳ್ಳವರಾಗಿ ಅಣಿಮಾದಿ ಅಷ್ಟಋದ್ಧಿಗಳಿಂದ ಕೂಡಿ ಅತಿಶಯವಾದ ಶೋಭಾಯುಕ್ತರಾಗಿ ಅಪ್ಸರಸ್ತ್ರೀಯರ ಸಭೆಯಲ್ಲಿ ಬಹುಕಾಲ ಕ್ರೀಡಿಸುತ್ತಾ ಸಂತೋಷದಿಂದಿರುತ್ತಾರೆ. ಋದ್ಧಿಗಳೆಂಟು:—"†ಅಣಿಮಾ ಮಹಿಮಾ ಗರಿಮಾ ಲಘಿಮಾ ಪ್ರಾಪ್ತಿ ಪ್ರಾಕಾಮ್ಯ ಈಶಿತ್ವ ವಶಿತ್ವ" ಅಣಿಮಾ ಸಣ್ಣದಾದ ಅಣುವಿನ ಆಕಾರವನ್ನು ಧರಿಸಿಕೊಳ್ಳುವ ಶಕ್ತಿಗೆ ಅಣಿಮಾ

---

†ಅಣಿಮಾ ಮಹಿಮಾ ಚೈವ ಗರಿಮಾ ಲಘಿಮಾ ತಥಾ ॥
ಪ್ರಾಪ್ತಿ: ಪ್ರಾಕಾಮ್ಯಮೀಶಿತ್ವಂ ವಶಿತ್ವಂ ಚಾಷ್ಟಭೂತಯ: ॥

ಋದ್ಧಿಯೆಂದು ಹೆಸರು. ಪರ್ವತದಂತೆ ಸ್ಥೂಲವಾದ ಶರೀರವನ್ನು ಮಾಡಿಕೊಳ್ಳುವ ಶಕ್ತಿಗೆ ಮಹಿಮಾಋದ್ಧಿಯೆಂದು ಹೆಸರು. ಕಬ್ಬಿಣದಂತೆ ಭಾರವಾದ ಶರೀರವನ್ನು ಧರಿಸುವ ಶಕ್ತಿಗೆ ಗರಿಮಾಋದ್ಧಿಯೆಂದು ಹೆಸರು. ಅರಳೆಯಂತೆ ಹಗುರವಾದ ಶರೀರಧಾರಣಾಶಕ್ತಿಗೆ ಲಘಿಮಾಋದ್ಧಿಯೆಂದು ಹೆಸರು. ಭೂಮಿಯಲ್ಲಿದ್ದು ಬೆರಳಿನಿಂದ ಸೂರ್ಯಚಂದ್ರಾದಿಗಳನ್ನು ಮುಟ್ಟುವ ಶಕ್ತಿಗೆ ಪ್ರಾಪ್ತಿಋದ್ಧಿಯೆಂದು ಹೆಸರು. ನೀರಿನಲ್ಲಿ ಪ್ರವೇಶಿಸುವಂತೆ ಭೂಮಿಯೊಳಗೆ ಪ್ರವೇಶಮಾಡುವ ಶಕ್ತಿಗೆ ಪ್ರಾಕಾಮ್ಯಋದ್ಧಿಯೆಂದು ಹೆಸರು. ಎಲ್ಲಾ ದೇವತೆಗಳಿಗೆ ಒಡೆಯನಾಗಿರುವ ಶಕ್ತಿಗೆ ಈಶಿತ್ವಋದ್ಧಿಯೆಂದು ಹೆಸರು. ಎಲ್ಲರನ್ನೂ ತನ್ನಾಧೀನರನ್ನಾಗಿ ಮಾಡಿಕೊಳ್ಳುವ ಶಕ್ತಿಗೆ ವಶಿತ್ವಋದ್ಧಿಯೆಂದು ಹೆಸರು. ಇವು ದೇವತೆಗಳಿಗುಂಟಾಗುವ ಎಂಟು ವಿಕ್ರಿಯಾಋದ್ಧಿಗಳೆಂದರ್ಥವು.

**ನವನಿಧಿಸಪ್ತದ್ವಯರತ್ನಾಧಿಶಾಃ ಸರ್ವಭೂಮಿಪತಯಶ್ಚಕ್ರಂ |**
**ವರ್ತಯಿತುಂ ಪ್ರಭವಂತಿ ಸ್ಪಷ್ಟದೃಶ: ಕ್ಷತ್ರಮೌಲಿಶೇಖರಚರಣಾಃ**

**ಅನ್ವಯಾರ್ಥಃ**—ಸ್ಪಷ್ಟದೃಶಃ–ನಿರ್ಮಲವಾದ ಸಮ್ಯಕ್ತ್ವವುಳ್ಳವರು ನವನಿಧಿಸಪ್ತದ್ವಯರತ್ನಾಧಿಶಾಃ—ನವನಿಧಿಗಳು ಹದಿನಾಲ್ಕು ರತ್ನಗಳು ಇವುಗಳಿಗೆ ಒಡೆಯರಾಗಿಯೂ, ಸರ್ವಭೂಮಿಪತಯಃ—ಷಟ್ಖಂಡಕ್ಕೆ ಅಧಿಪತಿಗಳಾಗಿಯೂ, ಕ್ಷತ್ರಮೌಲಿಶೇಖರಚರಣಾಃ—ರಾಜರ ಕಿರೀಟದ ಅಗ್ರ ಭಾಗವು ಪಾದಗಳಲ್ಲಿ ಉಳ್ಳವರಾಗಿಯೂ, ಚಕ್ರಂ–ಚಕ್ರರತ್ನವನ್ನು ವರ್ತ್ತಯಿತುಂ—ನಡೆಯಿಸುವುದಕ್ಕೆ ಪ್ರಭವಂತಿ—ಸಮರ್ಥರಾಗುತ್ತಾರೆ.

**ತಾತ್ಪರ್ಯಃ**—ಸಮ್ಯಗ್ದೃಷ್ಟಿಗಳು ಸಮ್ಯಕ್ತ್ವದ ಪ್ರಭಾವದಿಂದ ಚಕ್ರವರ್ತಿಗಳಾಗುತ್ತಾರೆ. ಅವರಿಗೆ ಸಾವಿರಾರು ಯಕ್ಷದೇವತೆಗಳಿಂದ ರಕ್ಷಿಸಲ್ಪಡುತ್ತಿರುವ ಕಾಲ—ಮಹಾಕಾಲ—ಪಾಂಡು–ಮಾಣವ ಶಂಖ–ನೈಸರ್ಪ—ಪದ್ಮ–ಪಿಂಗಲ—ನಾನಾರತ್ನಗಂಳೆಬ ನವ○ನಿಧಿಗಳೂ ಚಕ್ರ–ಛತ್ರ–

---

○ ರಕ್ಷಿತಯಕ್ಷಸಹಸ್ರಾಃ ಕಾಲಮಹಾಕಾಲಪಾಂಡುಮಾಣವಶಂಖಾಃ|| ನೈಸರ್ಪಪದ್ಮಪಿಂಗಳನಾನಾರತ್ನಾಶ್ಚ ನವನಿಧಯ: || ಋತುಯೋಗ್ಯವಸ್ತುಭಾಜನ ಧಾನ್ಯಾಯುಧತೂರ್ಯಹರ್ಮ್ಯವಸ್ತ್ರಾಣಿ || ಆಭರಣರತ್ನನಿಕರಾನ್ ಕ್ರಮೇಣ ನಿಧಯ: ಪ್ರಯಚ್ಛಂತಿ ||

ಅಸಿ-ದಂಡ-ಮಣಿ-ಚರ್ಮ-ಕಾಕಿಣೀ—ಗೃಹಪತಿ-ಸೇನಾಪತಿ—ತಕ್ಷಪತಿ—ಪುರೋಹಿತ—ಅಶ್ವ-ಗಜ—ಸ್ತ್ರೀರತ್ನಗಳೆಂಬ ಹದಿನಾಲ್ಕು ರತ್ನಗಳೂ ಇರುತ್ತವೆ. ಮತ್ತು ಷಟ್ಖಂಡಚಕ್ರವರ್ತಿಗಳಾಗಿ ಎಲ್ಲಾ ರಾಜರುಗಳಿಂದ ಎರಗಿಸಲ್ಪಡುವವರಾಗಿ ಚಕ್ರಾಯುಧವನ್ನು ನಡಿಸಲು ಸಮರ್ಥರಾಗುತ್ತಾರೆ. ಇಷ್ಟಾರ್ಥವನ್ನು ಕೊಡುವ ಸಂಪತ್ತಿಗೆ ನಿಧಿಯೆಂದು ಹೆಸರು. ಷಡೃತುಗಳಿಗೆ ಯೋಗ್ಯವಾದ ಪದಾರ್ಥಗಳನ್ನು ಕೊಡುವ ನಿಧಿಗೆ ಕಾಲನಿಧಿಯೆಂದು ಹೆಸರು. ನಮಗಿಷ್ಟವಾದ ಭಾಜನ-ಪಾತ್ರಗಳನ್ನು ಕೊಡುವ ನಿಧಿಗೆ ಮಹಾಕಾಲನಿಧಿಯೆಂದು ಹೆಸರು. ಬೇಕಾದ ಹೊಸಧಾನ್ಯಗಳನ್ನು ಕೊಡುವ ನಿಧಿಗೆ ಪಾಂಡುನಿಧಿಯೆಂದು ಹೆಸರು. ಖಡ್ಗ ಮೊದಲಾದ ಆಯುಧಗಳನ್ನು ಕೊಡುವನಿಧಿಗೆ ಮಾಣವನಿಧಿಯೆಂದು ಹೆಸರು. ಎಲ್ಲಾ ವಿಧದ ಸಂಗೀತ ವಾದ್ಯ ಮೊದಲಾದುವುಗಳನ್ನು ಕೊಡುವ ನಿಧಿಗೆ ಶಂಖನಿಧಿಯೆಂದು ಹೆಸರು. ನಾನಾವಿಧವಾದ ಉಪ್ಪರಿಗೆಯ ಮನೆಗಳನ್ನು ಕೊಡುವ ನಿಧಿಗೆ ನೈಸರ್ಪನಿಧಿಯೆಂದು ಹೆಸರು. ಬಹುಮೂಲ್ಯವುಳ್ಳ ವಸ್ತ್ರಗಳನ್ನು ಕೊಡುವ ನಿಧಿಗೆ ಪದ್ಮನಿಧಿಯೆಂದು ಹೆಸರು. ಸ್ತ್ರೀಪುರುಷರಿಗೆ ಯೋಗ್ಯವಾದ ಆಭರಣಗಳನ್ನು ಕೊಡುವ ನಿಧಿಗೆ ಪಿಂಗಲನಿಧಿಯೆಂದು ಹೆಸರು. ಕೆಂಪು ವಜ್ರ ಮೊದಲಾದ ರತ್ನಗಳ ಸಮೂಹವನ್ನು ಕೊಡುವ ನಿಧಿಗೆ ನಾನಾರತ್ನನಿಧಿಯೆಂದು ಹೆಸರು. ಈ ರೀತಿಯಾಗಿ ಒಂಬತ್ತು ವಿಧವಾದ ಸಂಪತ್ತುಗಳು ಚಕ್ರವರ್ತಿಗಳಿಗಿರುತ್ತವೆ. ಶ್ರೇಷ್ಠವಾದ ಪದಾರ್ಥಕ್ಕೆ ರತ್ನವೆಂದು ಹೆಸರು. ರತ್ನಗಳು ●ಹದಿನಾಲ್ಕು ಚಕ್ರರತ್ನ, ಛತ್ರರತ್ನ, ಖಡ್ಗರತ್ನ, ದಂಡರತ್ನ, ಮಣಿರತ್ನ, ಚರ್ಮರತ್ನ, ಕಾಕಿಣಿರತ್ನ, ಇವು ಏಳು ಅಜೀವರತ್ನಗಳು. ಗೃಹಪತಿರತ್ನ, ಸೇನಾಪತಿರತ್ನ, ತಕ್ಷಪತಿ [ವಿಶ್ವಕರ್ಮ] ರತ್ನ, ಪುರೋಹಿತರತ್ನ, ಅಶ್ವರತ್ನ, ಗಜರತ್ನ ಮತ್ತು ಸ್ತ್ರೀರತ್ನಗಳೆಂಬ ಏಳು ಜೀವರತ್ನಗಳು. ಇವುಗಳಿಗೆ ಚಕ್ರವರ್ತಿಯು ಒಡೆಯನಾಗಿರುತ್ತಾನೆಂದಭಿಪ್ರಾಯವು.

---

●ಚಕ್ರಂ ಛತ್ರಮಸಿರ್ದಂಡೋ ಮಣಿಶ್ಚರ್ಮಚ ಕಾಕಿಣೀ ||
ಗೃಹಸೇನಾಪತೀ ತಕ್ಷಪುರೋಧೋಶ್ಚ ಗಜಸ್ತ್ರಿಯಃ ||

**ಅಮರಾಸುರನರಪತಿಭಿರ್ಯಮಧರಪತಿಭಿಶ್ಚ ನೂತಪಾದಾಂಭೋಜಾಃ||**
**ದೃಷ್ಟ್ಯಾ ಸುನಿಶ್ಚಿತಾರ್ಥಾ ವೃಷಚಕ್ರಧರಾ ಭವಂತಿ ಲೋಕಶರಣ್ಯಾಃ||**

**ಅನ್ವಯಾರ್ಥಃ**— ದೃಷ್ಟ್ಯಾ-ಸಮ್ಯಗ್ದರ್ಶನದಿಂದ ಸುನಿಶ್ಚಿತಾರ್ಥಾ— ಚನ್ನಾಗಿ ನಿಶ್ಚೈಸಲ್ಪಟ್ಟ ಜೀವಾದಿಪದಾರ್ಥಗಳುಳ್ಳವರೂ, 'ತಥಾ'— ಹಾಗೆಯೇ, ಅಮರಾಸುರನರಪತಿಭಿಃ—ಇಂದ್ರ—ಧರಣೇಂದ್ರ ಚಕ್ರವರ್ತಿ ಇವರುಗಳಿಂದ ಚ—ಮತ್ತು ಯಮಧರಪತಿಭಿಃ—ಗಣಧರರಿಂದ ನೂತಪಾದಾಂಭೋಜಾಃ—ಸಮಸ್ಕರಿಸಲ್ಪಟ್ಟ ಚರಣಕಮಲಗಳುಳ್ಳವರಾಗಿ ವೃಷಚಕ್ರಧರಾಃ—ಧರ್ಮಚಕ್ರಪ್ರವರ್ತಕರೂ, ಲೋಕಶರಣ್ಯಾಃ— ಭವ್ಯಜೀವರನ್ನು ರಕ್ಷಿಸುವವರೂ ಭವಂತಿ—ಆಗುತ್ತಾರೆ.

**ತಾತ್ಪರ್ಯಃ**—ಸಮ್ಯಗ್ದೃಷ್ಟಿಗಳು ಸಮಸ್ತ ಶಾಸ್ತ್ರಗಳನ್ನು ತಿಳಿದವರಾಗಿ ದೇವೇಂದ್ರ ಧರಣೇಂದ್ರ ಚಕ್ರವರ್ತಿ ಮತ್ತು ಗಣಧರರು ಇವರುಗಳಿಂದ ಸ್ತುತಿಸಲ್ಪಡುವವರೂ ಧರ್ಮಚಕ್ರಪ್ರವರ್ತಕರೂ ಮೂರು ಲೋಕದ ಭವ್ಯ ಪ್ರಾಣಿಗಳಿಗೆ ರಕ್ಷಕರೂ ಆದ ತೀರ್ಥಂಕರರಾಗಿ ಆಗುತ್ತಾರೆ. ಸಮ್ಯಕ್ತ್ವವಂತರು ತೀರ್ಥಂಕರರಾಗುತ್ತಾರೆಂದು ಭಾವವು.

**ಶಿವಮಜರಮರುಜಮಕ್ಷಯಮವ್ಯಾಬಾಧಂ ವಿಶೋಕಭಯಶಂಕಂ ||**
**ಕಾಷ್ಠಾಗತಸುಖವಿದ್ಯಾವಿಭವಂ ವಿಮಲಂ ಭಜಂತಿ ದರ್ಶನಶರಣಾ:||೪೦||**

**ಅನ್ವಯಾರ್ಥಃ**-ದರ್ಶನಶರಣಾ:-ಸಮ್ಯಕ್ತ್ವವಂತರು ಅಜರಂ-ಮುಪ್ಪಿಲ್ಲದ ಅರುಜಂ-ರೋಗವಿಲ್ಲದ ಅಕ್ಷಯಂ-ನಾಶವಿಲ್ಲದ ಅವ್ಯಾಬಾಧಂ-ಬಾಧೆಯಿಲ್ಲದ ವಿಶೋಕಭಯಶಂಕಂ-ಶೋಕ ಭಯ ಸಂಶಯಗಳಿಲ್ಲದ, ಕಾಷ್ಠಾಗತ ಸುಖವಿದ್ಯಾವಿಭವಂ-ಪರಮಪ್ರಕರ್ಷತೆಯನ್ನು ಹೊಂದಿದ ಸುಖ-ಜ್ಞಾನೈಶ್ವರ್ಯಗಳುಳ್ಳ ವಿಮಲಂ-ನಿರ್ಮಲವಾದ ಶಿವಂ-ಮೋಕ್ಷವನ್ನು ಭಜಂತಿ-ಹೊಂದುತ್ತಾರೆ.

**ತಾತ್ಪರ್ಯಃ**—ಸಮಸ್ತವಾದ ಕರ್ಮಮಲಗಳ ಅತ್ಯಂತಾಭಾವಕ್ಕೆ ಮೋಕ್ಷವೆಂದು ಹೆಸರು. ಮುಪ್ಪು ರೋಗ ಮೊದಲಾದುವುಗಳು ಕರ್ಮಜನ್ಯವಾದವುಗಳು. ಆದಕಾರಣ ಮುಕ್ತಾತ್ಮರಿಗೆ ಮುಪ್ಪು ರೋಗ ಮರಣ

ಕ್ಷುಧಾದಿಬಾಧೆ ಶೋಕ ಭಯ ಸಂಶಯ ಮೊದಲಾದುವುಗಳಿಲ್ಲ. ಅಲ್ಲಿ ಅನಂತಜ್ಞಾನದರ್ಶನಸುಖವೀರ್ಯಗಳೆಂಬ ಸಂಪತ್ತಿನಿಂದ ಮುಕ್ತಾತ್ಮರು ವಿರಾಜಮಾನರಾಗಿರುತ್ತಾರೆ. ಸಮ್ಯಗ್ದೃಷ್ಟಿಗಳು ಅಂತಹ ಮೋಕ್ಷವನ್ನು ಹೊಂದುತ್ತಾರೆಂದು ಮುಖ್ಯಾಭಿಪ್ರಾಯವು.

**ಸಮ್ಯಕ್ತ್ವಾಧಿಕಾರದ ಉಪಸಂಹಾರ.**

**ದೇವೇಂದ್ರಚಕ್ರಮಹಿಮಾನಮಮೇಯಮಾನಂ |**
**ರಾಜೇಂದ್ರಚಕ್ರಮವನೀಂದ್ರಶಿರೋರ್ಚನೀಯಂ ||**
**ಧರ್ಮೇಂದ್ರಚಕ್ರಮಧರೀಕೃತಸರ್ವಲೋಕಂ |**
**ಲಬ್ಧ್ವಾ ಶಿವಂ ಚ ಜಿನಭಕ್ತಿರುಪೈತಿ ಭವ್ಯಃ ||೪೧||**

**ಅನ್ವಯಾರ್ಥಃ**—ಜಿನಭಕ್ತಿಃ—ಜಿನೇಶ್ವರರಲ್ಲಿ ಭಕ್ತಿಯುಳ್ಳ ಭವ್ಯಃ–ಭವ್ಯಜೀವನು ಅಮೇಯಮಾನಂ—ಅಪರಿಮಿತವಾದ ದೇವೇಂದ್ರಚಕ್ರಮಹಿಮಾನಂ—ದೇವೇಂದ್ರಪದವಿಯ ಮಹಿಮೆಯನ್ನೂ ಅವನೀಂದ್ರ ಶಿರೋರ್ಚನೀಯಂ—ರಾಜರ ಮಸ್ತಕದಿಂದ ಪೂಜಿಸುವುದಕ್ಕೆ ಯೋಗ್ಯವಾದ ರಾಜೇಂದ್ರಚಕ್ರಂ—ಚಕ್ರವರ್ತಿಯ ಚಕ್ರರತ್ನವನ್ನೂ, ಅಧರೀಕೃತಸರ್ವಲೋಕಂ—ಕೀಳು ಮಾಡಲ್ಪಟ್ಟ ಸಮಸ್ತಲೋಕವುಳ್ಳ ಧರ್ಮೇಂದ್ರಚಕ್ರಂ—ತೀರ್ಥಂಕರರ ಧರ್ಮಚಕ್ರವನ್ನೂ, ಲಬ್ಧ್ವಾ—ಹೊಂದಿ ಶಿವಂ ಚ—ಮೋಕ್ಷವನ್ನೂ ಉಪೈತಿ—ಹೊಂದುತ್ತಾನೆ.

**ತಾತ್ಪರ್ಯಃ**—ಸಮ್ಯಗ್ದೃಷ್ಟಿಯಾದ ಭವ್ಯನು ಹೆಚ್ಚಾದ ಮಹಿಮೆ
ಯುಳ್ಳ ದೇವೇಂದ್ರಪದವಿಯನ್ನೂ ರಾಜರ ಮಸ್ತಕದಿಂದ ಪೂಜಿಸುವುದಕ್ಕೆ
ಯೋಗ್ಯವಾದ ಚಕ್ರವರ್ತಿಯ ಪದವಿಯನ್ನು ಲೋಕದಲ್ಲಿ ಶ್ರೇಷ್ಠವಾದ
ಧರ್ಮಚಕ್ರವನ್ನೂ ಪಡೆದು, ಆ ಮೇಲೆ ಕ್ರಮೇಣ ಮೋಕ್ಷವನ್ನು ಹೊಂ
ದುತ್ತಾನೆ. ಅಂದರೆ ಸಮ್ಯಕ್ತ್ವವಂತನು ದೇವೇಂದ್ರ, ಚಕ್ರವರ್ತಿ, ತೀರ್ಥಂ
ಕರ ಮತ್ತು ಮೋಕ್ಷ ಈ ವಿಭೂತಿಗಳನ್ನು ಹೊಂದುತ್ತಾನೆಂದು ಮುಖ್ಯಾ
ಪ್ರಾಯವು.

ಇತಿ ಶ್ರೀಸಮಂತಭದ್ರವಿರಚಿತೇ ರತ್ನಕರಂಡನಾಮ್ನಿ ಉಪಾಸಕಾಧ್ಯಯನೇ ಸಮ್ಯಗ್ದರ್ಶನವ್ಯಾವರ್ಣನಂ ನಾಮ ಪ್ರಥಮಪರಿಚ್ಛೇದಃ

# ಅಥ ದ್ವಿತೀಯ ಪರಿಚ್ಛೇದಃ

## ಸಮ್ಯಗ್ಜ್ಞಾನದ ಸ್ವರೂಪ ವರ್ಣನೆ.

ಅನ್ಯೂನಮನತಿರಿಕ್ತಂ ಯಾಥಾತಥ್ಯಂ ವಿನಾ ಚ ವಿಪರೀತಾತ್ ||
ನಿಃಸಂದೇಹಂ ವೇದ ಯದಾಹುಸ್ತಜ್ಜ್ಞಾನಮಾಗಮಿನ: ||೪೨||

**ಅನ್ವಯಾರ್ಥ:**—ಯತ್—ಯಾವದು, 'ವಸ್ತುಸ್ವರೂಪಂ' —ಪದಾರ್ಥಗಳ ಆಕಾರವನ್ನು ಅನ್ಯೂನಂ—ಕಡಿಮೆಯಿಲ್ಲದೆ ಅನತಿರಿಕ್ತಂ—ಅಧಿಕವಿಲ್ಲದೆ ಚ—ಮತ್ತು ವಿಪರೀತಾತ್ ವಿನಾ—ವಿಪರೀತವಿಲ್ಲದೆ ಯಾಥಾತಥ್ಯಂ—ಇದ್ದಂತೆ ನಿಃಸಂದೇಹಂ-ಸಂಶಯವಿಲ್ಲದೆ ವೇದ—ತಿಳಿಯುತ್ತದೋ ತತ್—ಆಗಮಿನ:—ಶಾಸ್ತ್ರಜ್ಞರು ಜ್ಞಾನಂ—ಸಮ್ಯಗ್ಜ್ಞಾನವೆಂದು ಆಹು:-ಹೇಳುತ್ತಾರೆ.

**ತಾತ್ಪರ್ಯ:**—ಅಧಿಕವಾದುದನ್ನು ಕಡಮೆಯೆಂದು ತಿಳಿಯುವುದಕ್ಕೆ ನ್ಯೂನಜ್ಞಾನವೆಂದೂ, ನ್ಯೂನವಾದುದನ್ನು ಅಧಿಕವೆಂದು ತಿಳಿಯುವುದಕ್ಕೆ ಅಧಿಕಜ್ಞಾನವೆಂದೂ, ಹಗ್ಗವನ್ನು ನೋಡಿ ಸರ್ಪವೆಂದು ತಿಳಿಯುವುದಕ್ಕೆ ವಿಪರೀತಜ್ಞಾನವೆಂದೂ, ಇದು ಮರವೋ ? ಪುರುಷನೋ ? ಎಂದು ವಿಚಾರ ಮಾಡುವ ಜ್ಞಾನಕ್ಕೆ ಸಂಶಯವೆಂದೂ ಹೆಸರು. ಹೇಗೆಂದರೆ ? ಹದಿನಾರನ್ನು ಐದರಿಂದ ಗುಣಿಸಿದರೆ ೮೦ ಸಂಖ್ಯೆಯಾಗುವುದು. ಅದನ್ನು ೭೮ ಎಂದು ತಿಳಿದರೆ ನ್ಯೂನವೂ, ೮೨ ಎಂದು ತಿಳಿದರೆ ಅಧಿಕವೂ, ೮೦ ನ್ನು ಐದೆಂದು ತಿಳಿದರೆ ವಿಪರೀತವೂ, ಹದಿನಾರನ್ನು ೫ ರಿಂದ ಗುಣಿಸಿದರೆ ಎಂಬತ್ತು ಸಂಖ್ಯೆಯಾಗುವುದೊ ? ಯಾ ಎಪ್ಪತ್ತೆಂಟೋ ? ಎಂಬ ಜ್ಞಾನಕ್ಕೆ ಸಂಶಯವೆಂದೂ ಹೆಸರು. ಇವು ನಾಲ್ಕು ಮಿಥ್ಯಾಜ್ಞಾನಗಳಾಗಿವೆ. ಇವುಗಳಿಲ್ಲದೆ ವಸ್ತುಸ್ವರೂಪವಿದ್ದಂತೆ ತಿಳಿಯುವಂತಹ ಜ್ಞಾನಕ್ಕೆ ಸಮ್ಯಗ್ಜ್ಞಾನವೆಂದು ಶಾಸ್ತ್ರಜ್ಞರು ಹೇಳುತ್ತಾರೆ.

## ಪ್ರಥಮಾನುಯೋಗಶಾಸ್ತ್ರದ ವರ್ಣನೆ.

**ಪ್ರಥಮಾನುಯೋಗಪುರ್ಥಾಖ್ಯಾನಂ ಚರಿತಂ ಪುರಾಣಮಪಿ ಪುಣ್ಯಂ || ಬೋಧಿಸಮಾಧಿನಿಧಾನಂ ಬೋಧತಿ ಬೋಧಃ ಸಮೀಚೀನಃ ||೪೩||**

**ಅನ್ವಯಾರ್ಥಃ**—ಸಮೀಚೀನಃ ಭೋಧ:-ಸಮ್ಯಗ್ಜ್ಞಾನವು, ಅರ್ಥಾಖ್ಯಾನಂ— ಪರಮಾರ್ಥ ವಿಷಯುಗಳನ್ನು ಅಥವಾ ಧರ್ಮಾರ್ಥ ಕಾಮಮೋಕ್ಷಗಳನ್ನು ಪ್ರತಿಪಾದಿಸುವ ಚರಿತಂ—ಏಕಪುರುಷಾಶ್ರಯವಾದ ಕಥೆಯನ್ನು ಪುರಾಣಂ—ತ್ರಿಷಷ್ಟಿಶಲಾಕಾಪುರುಷರ ಚರಿತ್ರೆಯನ್ನು ಅಪಿ—ಮತ್ತು ಪುರಾಣಂ—ಪುಣ್ಯಕರವೂ ಬೋಧಿಸಮಾಧಿನಿಧಾನಂ—ರತ್ನತ್ರಯ ಮತ್ತು ಧ್ಯಾನಗಳಿಗೆ ನಿಧಿಯಂತಿರುವುದೂ ಆದ ಪ್ರಥಮಾನುಯೋಗಂ—ಪ್ರಥಮಾನುಯೋಗವೆಂಬ ಶಾಸ್ತ್ರವನ್ನು ಬೋಧತಿ—ತಿಳಿಯುತ್ತದೆ.

**ತಾತ್ಪರ್ಯ:**—ಪುರುಷಾರ್ಥಚತುಷ್ಟಯಗಳನ್ನು ಪ್ರತಿಪಾದಿಸುವ ಏಕಪುರುಷಾಶ್ರಯವಾದ ಕಥೆಗೆ ಚರಿತೆಯೆಂದು ಹೆಸರು. ವೃಷಭ ತೀರ್ಥಂಕರರೇ ಮೊದಲಾದ ೨೪ ತೀರ್ಥಂಕರರೂ ಸಂಪದ್ಯುಕ್ತರಾದ ಭರತೇಶ್ವರ ಮೊದಲಾದ ೧೨ ಮಂದಿ ಚಕ್ರವರ್ತಿಗಳೂ ಒಂಭೊಂಭತ್ತು ೨೭ ಮಂದಿ ನಾರಾಯಣ ಪ್ರತಿನಾರಾಯಣ ಬಲಭದ್ರ ಇವರುಗಳೂ ಅರವತ್ತುಮೂರು ಮಂದಿ ಮಹಾಪುರುಷರಿಗೆ ತ್ರಿಷಷ್ಟಿಶಲಾಕಾಪುರುಷರೆಂದು ಹೆಸರು. ಇವರ ಕಥೆಯನ್ನು ಪ್ರತಿಪಾದಿಸುವ ಗ್ರಂಥಗಳಿಗೆ ಪುರಾಣಗಳೆಂದು ಹೆಸರು. ಇಂತಹ ಪುಣ್ಯಕರವೂ ರತ್ನತ್ರಯ ಮತ್ತು ಸಮಾಧಿಧ್ಯಾನ ಇವುಗಳನ್ನು ಪ್ರತಿಪಾದಿಸುವುದೂ ಚರಿತೆ—ಪುರಾಣ ಮೊದಲಾದ ವಿಷಯಗಳುಳ್ಳುದೂ ಆದ ಶಾಸ್ತ್ರಕ್ಕೆ ಪ್ರಥಮಾನುಯೋಗಶಾಸ್ತ್ರವೆಂದು ಹೆಸರು. ಇದನ್ನು ಸಮ್ಯಗ್ಜ್ಞಾನವು ತಿಳಿಯುತ್ತದೆಂದಭಿಪ್ರಾಯವು.

## ಕರಣಾನುಯೋಗಶಾಸ್ತ್ರದ ವರ್ಣನೆ.

**ಲೋಕಾಲೋಕವಿಭಕ್ತೇರ್ಯುಗಪರಿವೃತ್ತೇಶ್ಚತುರ್ಗತೀನಾಂ ಚ ||**
**ಆದರ್ಶಮಿವ ತಥಾಮತಿರವೈತ ಕರಣಾನುಯೋಗಂ ಚ ||೪೪||**

**ಅನ್ವಯಾರ್ಥಃ**— ಚ-ಮತ್ತು ತಥಾಮತಿಃ—ಸಮ್ಯಗ್ಜ್ಞಾನವು ಲೋಕಾಲೋಕವಿಭಕ್ತೇಃ—ಲೋಕಾಲೋಕ ವಿಭಾಗದ ಯುಗಪರಿವೃತ್ತೇಃ—ಯುಗ—ಕಾಲಪರಿವರ್ತನೆಯ ಚ—ಮತ್ತು ಚತುರ್ಗತೀನಾಂ—ನಾಲ್ಕುಗತಿಗಳ ಸ್ವರೂಪವನ್ನು ಆದರ್ಶಮಿವ-ದರ್ಪಣದಂತೆ ಪ್ರಕಾಶಪಡಿಸುವ ಕರಣಾನುಯೋಗಂ—ಕರಣಾನುಯೋಗವೆಂಬ ಶಾಸ್ತ್ರವನ್ನು ಅವೈತಿ—ತಿಳಿಯುತ್ತದೆ.

ತಾತ್ಪರ್ಯ—ಲೋಕಾಲೊಕಗಳ ವಿಭಾಗವನ್ನೂ ಆರಾರು ಭೇದಗಳುಳ್ಳ ಉತ್ಸರ್ಪಿಣೀ ಮತ್ತು ಅವಸರ್ಪಿಣೀ ಕಾಲಗಳ ಪರೀವರ್ತನೆಯನ್ನೂ ನರಕ ತಿರ್ಯಂಚ ಮನುಷ್ಯ ದೇವಗಳೆಂಬ ನಾಲ್ಕು ಗತಿಗಳ ಸ್ವರೂಪವನ್ನೂ ದರ್ಪಣದಂತೆ ಪ್ರಕಾಶಪಡಿ [ ಪ್ರತಿಪಾದಿ ] ಸುವ ಶಾಸ್ತ್ರಕ್ಕೆ ಕರಣಾನುಯೋಗವೆಂದು ಹೆಸರು. ಇದನ್ನು ಸಮ್ಯಗ್ಜ್ಞಾನವು ತಿಳಿಯುತ್ತದೆಂದು ಮುಖ್ಯಾಭಿಪ್ರಾಯವು.

**ಚರಣಾನುಯೋಗಶಾಸ್ತ್ರದ ವರ್ಣನೆ.**

**ಗೃಹಮೇಧ್ಯನಗಾರಾಣಾಂ ಚಾರಿತ್ರೋತ್ಪತ್ತಿವೃದ್ಧಿರಕ್ಷಾಂಗಂ ||**
**ಚರಣಾನುಯೋಗಸಮಯಂ ಸಮ್ಯಗ್ಜ್ಞಾನಂ ವಿಜಾನಾತಿ ||೪೫||**

**ಅನ್ವಯಾರ್ಥಃ**— ಸಮ್ಯಗ್ಜ್ಞಾನಂ - ಸಮ್ಯಗ್ಜ್ಞಾನವು ಗೃಹಮೇಧ್ಯನಗಾರಾಣಾಂ—ಗೃಹಸ್ಥರ ಮತ್ತು ಯತಿಗಳ ಚಾರಿತ್ರೋತ್ಪತ್ತಿವೃದ್ಧಿರಕ್ಷಾಂಗಂ—ಚಾರಿತ್ರದ ಉತ್ಪತ್ತಿ ವೃದ್ಧಿ—ರಕ್ಷಣೆ ಇವುಗಳಿಗೆ ಕಾರಣವಾದ ಚರಣಾನುಯೋಗಸಮಯಂ— ಚರಣಾನುಯೋಗವೆಂಬ ಶಾಸ್ತ್ರವನ್ನು ವಿಜಾನಾತಿ—ತಿಳಿಯುತ್ತದೆ.

**ತಾತ್ಪರ್ಯಃ**—ಶ್ರಾವಕರು ಮತ್ತು ಯತಿಗಳು ಇವರ ಚಾರಿತ್ರದ ಉತ್ಪತ್ತಿಯೂ ಅಭಿವೃದ್ಧಿಯೂ ರಕ್ಷಣೆಯೂ ಆಗುವ ಉಪಾಯವನ್ನು ಪ್ರದಿಪಾದಿಸುವ ಶಾಸ್ತ್ರಕ್ಕೆ ಚರಣಾನುಯೋಗಶಾಸ್ತ್ರವೆಂದು ಹೆಸರು. ಇದನ್ನೂ ಸಮ್ಯಗ್ಜ್ಞಾನವು ತಿಳಿಯತ್ತದೆಂದು ಭಾವವು.

**ದ್ರವ್ಯಾನುಯೋಗಶಾಸ್ತ್ರದ ವರ್ಣನೆ.**

**ಜೀವಾಜೀವಸುತತ್ವೇ ಪುಣ್ಯಾಪುಣ್ಯೇ ಚ ಬಂಧಮೋಕ್ಷೌ ಚ ||**
**ದ್ರವ್ಯಾನುಯೋಗದೀಪಃ ಶ್ರುತವಿದ್ಯಾಲೋಕಮಾತನುತೇ || ೪೬ ||**

**ಅನ್ವಯಾರ್ಥ**—ದ್ರವ್ಯಾನುಯೋಗವೆಂಬ ದೀಪ (ಶಾಸ್ತ್ರ) ವು —ಜೀವಾಜೀವವೆಂಬ ಸಮ್ಯಕ್ತತ್ವಗಳನ್ನು ಪುಣ್ಯಾಪುಣ್ಯೇ—ಪುಣ್ಯಪಾಪಗಳ ಸ್ವರೂಪವನ್ನು ಚ—ಮತ್ತು ಬಂಧಮೋಕ್ಷೌ—ಬಂಧ ಮತ್ತು ಮೋಕ್ಷಗಳ ಸ್ವರೂಪವನ್ನು ಚ—ಮತ್ತು ಶ್ರುತವಿದ್ಯಾಲೋಕಂ—ಭಾವಶ್ರುತವೆಂಬ ಪ್ರಕಾಶವನ್ನು ಆತನುತೇ—ಉಂಟುಮಾಡುತ್ತದೆ.

**ತಾತ್ಪರ್ಯ**—ಭಾವಶ್ರುತ ದ್ರವ್ಯಶ್ರುತಗಳೆಂದು ಶಾಸ್ತ್ರವು ಎರಡು ವಿಧ. ಜ್ಞಾನಾತ್ಮಕವಾದ ಶಾಸ್ತ್ರಕ್ಕೆ ಭಾವಶ್ರುತವೆಂದೂ ಶಬ್ದಾತ್ಮಕವಾದ ಶಾಸ್ತ್ರಕ್ಕೆ ದ್ರವ್ಯಶ್ರುತವೆಂದೂ ಹೆಸರು. ಅವುಗಳಲ್ಲಿ ಅಂಗ ಮತ್ತು ಅಂಗ ಬಾಹ್ಯಶ್ರುತಜ್ಞಾನವೆಂದೆರಡು ವಿಧ. ದೀಪವು ಸಕಲ ಪದಾರ್ಥಗಳನ್ನು ಪ್ರಕಾಶಪಡಿಸುವಂತೆ, ದ್ರವ್ಯಾನುಯೋಗಶಾಸ್ತ್ರವು ಜೀವಾಜೀವ ಪುಣ್ಯ ಪಾಪ ಬಂಧಮೋಕ್ಷಗಳ ಸ್ವರೂಪನ್ನೂ ಮತ್ತು ಭಾವಶ್ರುತವೆಂಬ ಪ್ರಕಾಶವನ್ನುಂಟು ಮಾಡುತ್ತದೆಂದು ಭಾವವು. ಅಂದರೆ ದ್ರವ್ಯಾನುಯೋಗಶಾಸ್ತ್ರದಲ್ಲಿ ಜೀವಾದಿ ಪದಾರ್ಥಗಳ ಸ್ವರೂಪವನ್ನು ಪ್ರತಿಪಾದಿಸುತ್ತಾರೆಂದಭಿಪ್ರಾಯವು. ದ್ವಾದಶಾಂಗ ವೇದರೂಪವಾದ ಜೈನಾಗಮುಗಳನ್ನು ಈ ಪ್ರಕಾರವಾಗಿ ಪ್ರಥಮಾನುಯೋಗ, ಕರಣಾನುಯೋಗ, ಚರಣಾನುಯೋಗ ಮತ್ತು ದ್ರವ್ಯಾನುಯೋಗವೆಂಬ ನಾಲ್ಕು ವೇದರೂಪಗಳಲ್ಲಿಯೂ ಅಂತರ್ಭೂತವಾಗಿ ಮಾಡಬಹುದು. ಹೀಗೆ ಜೈನ ತತ್ವಜ್ಞಾನಿಗಳೂ ಮೇಲೆ ಹೇಳಿದ ಚತುರ್ವೇದಗಳನ್ನು ಪ್ರತಿಪಾದಿಸುತ್ತಾರೆ ಈ ನಾಲ್ಕು ವೇದಗಳಲ್ಲಿ ಸಂಪೂರ್ಣ ಶ್ರುತಜ್ಞಾನವು ಅಡಕವಾಗಿದೆ.

ಶ್ರೀಸಮಂತಭದ್ರಾಚಾರ್ಯವಿರಚಿತೇ ರತ್ನಕರಂಡಕನಾಮ್ನಿ ಉಪಾಸಕಾಧ್ಯಯನೇ ಸಮ್ಯಗ್ಜ್ಞಾನವರ್ಣನಂ ನಾಮ

ದ್ವಿತೀಯ ಪರಿಚ್ಛೇದಃ—

—+—

# ಅಥ ತೃತೀಯ ಪರಿಚ್ಛೇದಃ

## ಸಮ್ಯಕ್ಚಾರಿತ್ರಸ್ವರೂಪವರ್ಣನೆ.

**ಮೋಹತಿಮಿರಾಪಹರಣೇ । ದರ್ಶನಲಾಭಾದವಾಪ್ತಸಂಜ್ಞಾನಃ ॥**
**ರಾಗದ್ವೇಷನಿವೃತ್ತ್ಯೈ ಚರಣಂ ಪ್ರತಿಪದ್ಯತೇ ಸಾಧುಃ ॥೪೭॥**

**ಅನ್ವಯಾರ್ಥಃ**—ಮೋಹತಿಮಿರಾಪಹರಣೇ—ದರ್ಶನಮೋಹನೀಯವೆಂಬ ಕತ್ತಲೆಯು ನಾಶವಾಗುತ್ತಿರಲು ದರ್ಶನಲಾಭಾತ್–ಸಮ್ಯಗ್ದರ್ಶನದ ಪ್ರಾಪ್ತಿಯಾಗುವುದರಿಂದ ಅವಾಪ್ತಸಂಜ್ಞಾನಃ–ಹೊಂದಲ್ಪಟ್ಟ ಸಮ್ಯಗ್ಜ್ಞಾನವುಳ್ಳ ಸಾಧುಃ–ಸಮ್ಯಗ್ದೃಷ್ಟಿಯು ರಾಗದ್ವೇಷನಿವೃತ್ತ್ಯೈ—ರಾಗದ್ವೇಷಗಳ ನಾಶಕ್ಕೋಸ್ಕರ ಚರಣಂ—ಚಾರಿತ್ರವನ್ನು ಪ್ರತಿಪದ್ಯತೇ—ಧರಿಸುತ್ತಾನೆ.

**ತಾತ್ಪರ್ಯಃ**—ಸಮ್ಯಗ್ದರ್ಶನವನ್ನು ಉಂಟಾಗದಂತೆ ಮಾಡುವ ಕರ್ಮಕ್ಕೆ ದರ್ಶನಮೋಹನೀಯವೆಂದು ಹೆಸರು. ಅಂಧಕಾರವು ವ್ಯಾಪಿಸುವುದರಿಂದ ಪದಾರ್ಥಗಳು ಕಾಣದಿರುವಂತೆ, ದರ್ಶನಮೋಹನೀಯ ಕರ್ಮದ ಪ್ರಭಾವದಿಂದ ಸರ್ವಜ್ಞೋಪದಿಷ್ಟವಾದ ತತ್ವಗಳಲ್ಲಿ ನಂಬಿಕೆಯುಂಟಾಗುವುದಿಲ್ಲವು. ಆದಕಾರಣ ದರ್ಶನಮೋಹನೀಯ—ಕರ್ಮದ ಕ್ಷಯ ಅಥವಾ ಉಪಶಮವಾಗುವುದರಿಂದ ಸಮ್ಯಗ್ದರ್ಶನವು ಉಂಟಾಗುತ್ತದೆ. ಆ ಸಮ್ಯಗ್ದರ್ಶನದ ಬಲದಿಂದ ಪ್ರಾಪ್ತವಾದ ಸಮ್ಯಗ್ಜ್ಞಾನ—[ಹೇಯೋಪಾದೇಯಜ್ಞಾನ] ವುಳ್ಳ ಭವ್ಯನು ರಾಗದ್ವೇಷಗಳ ಅಭಾವಕ್ಕೋಸ್ಕರ ಏಕದೇಶಹಿಂಸಾದಿಪಂಚಪಾಪತ್ಯಾಗರೂಪವಾದ ವ್ಯವಹಾರ ಚಾರಿತ್ರವನ್ನು ಧರಿಸಬೇಕೆಂದು ಮುಖ್ಯಾಭಿಪ್ರಾಯವು.

**ರಾಗದ್ವೇಷನಿವೃತ್ತೇರ್ಹಿಂಸಾದಿನಿವರ್ತನಾ ಕೃತಾ ಭವತಿ ॥**
**ಅನಪೇಕ್ಷಿತಾರ್ಥವೃತ್ತಿಃ ಕಃ ಪುರುಷಃ ಸೇವತೇ ನೃಪತೀನ್ ॥೪೮॥**

**ಅನ್ವಯಾರ್ಥಃ**—ರಾಗದ್ವೇಷನಿವೃತ್ತೇಃ—ರಾಗದ್ವೇಷಗಳ ನಾಶದಿಂದ ಹಿಂಸಾದಿನಿವರ್ತನಾ—ಹಿಂಸೆ ಮೊದಲಾದ ಪಾಪಗಳ ನಾಶವು

ಕೃತಾ—ಮಾಡಲ್ಪಟ್ಟದ್ದಾಗಿ ಭವತಿ—ಆಗುತ್ತದೆ. ಅನಪೇಕ್ಷಿತಾರ್ಥವೃತ್ತಿ:—ಜೀವನೋಪಾಯದ ಇಚ್ಛೆಯಿಲ್ಲದಿರುವ, ಕಃ ಪುರುಷಃ—ಯಾವ ಮನುಷ್ಯನು ನೃಪತೀನ್—ರಾಜರನ್ನು ಸೇವತೇ ?—ಆಶ್ರಯಿಸುತ್ತಾನೆ. ?

**ತಾತ್ಪರ್ಯ:**—ಲೋಕದಲ್ಲಿ ದ್ರವ್ಯಾದಿಗಳ ಅಭಿಲಾಷೆಯುಳ್ಳವನು ರಾಜರ ಅಥವಾ ಶ್ರೀಮಂತರ ಸೇವೆ—ಶುಶ್ರೂಷಾದಿಗಳನ್ನು ಮಾಡುತ್ತಾನೆ. ದ್ರವ್ಯಾಪೇಕ್ಷೆಯಿಲ್ಲದ ಮನುಷ್ಯನು ಪರಸೇವೆ ದೈನಭಾವ ಮೊದಲಾದುವುಗಳನ್ನು ಎಂದೂ ಮಾಡುವುದಿಲ್ಲ. ಅದರಂತೆ ಹಿಂಸಾದಿ ಪಂಚಪಾಪಗಳಿಗೆ ರಾದ್ವೇಷಗಳೇ ಕಾರಣಗಳು. ರಾಗದ್ವೇಷಗಳಿಲ್ಲದಿರುವುದರಿಂದ ಆ ಪಂಚ ಪಾಪಗಳಲ್ಲಿ ಪ್ರವರ್ತನಾಗುವುದಿಲ್ಲವೆಂದರ್ಥವು.

### ಸಮ್ಯಕ್ಚಾರಿತ್ರದ ವರ್ಣನೆ.

**ಹಿಂಸಾನೃತಚೌರೇಭ್ಯೋ ಮೈಥುನಸೇವಾಪರಿಗ್ರಹಾಭ್ಯಾಂ ಚ ||**
**ಪಾಪಪ್ರಣಾಲಿಕಾಭ್ಯೋ ವಿರತಿಃ ಸಂಜ್ಞಸ್ಯ ಚಾರಿತ್ರಂ ||೪೯||**

**ಅನ್ವಯಾರ್ಥ:**—ಪಾಪಪ್ರಣಾಲಿಕಾಭ್ಯಃ—ಪಾಪಾಸ್ರವಕ್ಕೆ ದ್ವಾರ ದಂತಿರುವ ಹಿಂಸಾನ್ಯತಚೌರೇಭ್ಯಃ—ಕೊಲೆ ಹುಸಿ ಕಳವು ಇವುಗಳಿಂದ ಚ—ಮತ್ತು ಮೈಥುನಸೇವಾಪರಿಗ್ರಹಾಭ್ಯಾಂ—ಕಾಮಸೇವನೆ ಮತ್ತು ಪರಿಗ್ರಹ ಇವುಗಳಿಂದ ವಿರತಿಃ—ವಿರಕ್ತನಾಗುವಿಕೆಯು ಸಂಜ್ಞಸ್ಯ—ಸಮ್ಯಗ್ಜ್ಞಾನಿಯ ಚಾರಿತ್ರಂ—ಚಾರಿತ್ರವಾಗಿ ಭವತಿ—ಆಗುತ್ತದೆ.

**ತಾತ್ಪರ್ಯ:**—ಚಾರಿತ್ರವು ವ್ಯವಹಾರನಿಶ್ಚಯಭೇದದಿಂದೆರಡುವಿಧ. ಸರೋವರದೊಳಗೆ ಜಲಪ್ರವೇಶ ಮಾಡಲು ದ್ವಾರವಿರುವಂತೆ, ಕರ್ಮಾಸ್ರವಕ್ಕೆ ದ್ವಾರದಂತಿರುವ ಹಿಂಸೆ ಸುಳ್ಳು ಕಳ್ಳತನ ಕಾಮಸೇವನೆ ಪರಿಗ್ರಹಾಭಿಲಾಷೆಗಳೆಂಬ ಪಂಚಪಾಪಗಳ ಏಕದೇಶತ್ಯಾಗವನ್ನು ಮಾಡುವುದಕ್ಕೆ ವ್ಯವಹಾರ ಚಾರಿತ್ರವೆಂದು ಹೆಸರು. ಬಾಹ್ಯಾಭ್ಯಂತರ ಶುಭಾಶುಭಕ್ರಿಯೆಗಳನ್ನು ಬಿಟ್ಟು ಸ್ವಾತ್ಮಾನುಭವರೂಪವಾದ ಶುದ್ಧೋಪಯೋಗದಲ್ಲಿರುವುದಕ್ಕೆ ನಿಶ್ಚಯಚಾರಿತ್ರವೆಂದು ಹೆಸರು. ವ್ಯವಹಾರಚಾರಿತ್ರವಿಲ್ಲದೆ ನಿಶ್ಚಯಚಾರಿತ್ರವಾಗಲಾರದು. ಆದಕಾರಣ ಪಂಚಪಾಪಗಳನ್ನು ಬಿಡಬೇಕೆಂದಭಿಪ್ರಾಯವು.

## ಚಾರಿತ್ರಭೇದ ವರ್ಣನೆ.

**ಸಕಲಂ ವಿಕಲಂ ಚರಣಂ ತತ್ಸಕಲಂ ಸರ್ವಸಂಗವಿರತಾನಾಂ ||**
**ಅನಗಾರಾಣಾಂ ವಿಕಲಂ ಸಾಗಾರಾಣಾಂ ಸಸಂಗಾನಾಂ ||೫೦||**

**ಅನ್ವಯಾರ್ಥಃ**—ತತ್—ಚರಣಂ—ಆ ಚಾರಿತ್ರವು ಸಕಲಂ—ಸಕಲ ಚಾರಿತ್ರವೆಂದೂ, ವಿಕಲಂ—ವಿಕಲಚಾರಿತ್ರವೆಂದೂ ದ್ವಿಭೇದರೂಪಂ—ಎರಡು ವಿಧವು 'ತಸ್ಮಿನ್ಮಧ್ಯೇ' ಅವುಗಳಲ್ಲಿ, ಸರ್ವಸಂಗವಿರತಾನಾಂ—ಸಮಸ್ತ ಪರಿಗ್ರಹಗಳನ್ನು ತೊರೆದಿರುವ ಅನಗಾರಾಣಾಂ—ಮುನಿಗಳಿಗೆ ಸಕಲಂ—ಸಕಲ ಚಾರಿತ್ರವೂ ಸಸಂಗಾನಾಂ—ಪರಿಗ್ರಹದೊಡನೆ ಕೂಡಿರುವ ಸಾಗಾರಾಣಾಂ-ಶ್ರಾವಕರಿಗೆ ವಿಕಲಂ-ವಿರಲಚಾರಿತ್ರವೂ 'ಭವತಿ' ಆಗುತ್ತದೆ.

**ತಾತ್ಪರ್ಯಃ**—ಚಾರಿತ್ರವು ಪುನಃ ಸಕಲ ವಿಕಲ ಭೇದದಿಂದೆರಡುವಿಧ. ೨೪ ವಿಧದ ಪರಿಗ್ರಹಗಳನ್ನು ತೊರೆದಿರುವ ಯತಿಗಳ ಆಚರಣೆಗೆ ಸಕಲ ಚಾರಿತ್ರವೆಂದೂ ಸಮಸ್ತ ಮನೆ ಮೊದಲಾದ ಪರಿಗ್ರಹದೊಡನೆ ಕೂಡಿರುವ ಗೃಹಸ್ಥರ ಆಚರಣೆಗೆ ವಿಕಲಚಾರಿತ್ರವೆಂದೂ ಹೆಸರು. ಪಂಚಪಾಪಗಳನ್ನು ಸಂಪೂರ್ಣವಾಗಿ ಬಿಡುವುದಕ್ಕೆ ಸಕಲಚಾರಿತ್ರವೆಂದೂ, ಏಕದೇಶತ್ಯಾಗಕ್ಕೆ ವಿಕಲಚಾರಿತ್ರವೆಂದೂ ಮುಖ್ಯಾಭಿಪ್ರಾಯವು. ಇದು ಶ್ರಾವಕಾಚಾರವನ್ನು ಪ್ರತಿಪಾದಿಸುವ ಗ್ರಂಥವಾದ್ದರಿಂದ ಇದರಲ್ಲಿ ಗೃಹಸ್ಥರ ಏಕದೇಶತ್ಯಾಗ ರೂಪವಾದ ಚಾರಿತ್ರವನ್ನು ವರ್ಣಿಸುತ್ತಾರೆ.

## ಶ್ರಾವಕಾಚಾರ ಭೇದ ವರ್ಣನೆ.

**ಗೃಹಿಣಾಂ ತ್ರೇಧಾ ತಿಷ್ಠತ್ಯಣುಗುಣಶಿಕ್ಷಾವ್ರತಾತ್ಮಕಂ ಚರಣಂ ||**
**ಪಂಚತ್ರಿಚತುರ್ಭೇದಂ ತ್ರಯಂ ಯಥಾಸಂಖ್ಯಮಾಖ್ಯಾತಂ ||೫೧||**

**ಅನ್ವಯಾರ್ಥಃ**—ಗೃಹಿಣಾಂ—ಗೃಹಸ್ಥರ ಚರಣಂ—ಚಾರಿತ್ರವು ಅಣುಗುಣಶಿಕ್ಷಾವ್ರತಾತ್ಮಕಂ—ಅಣುವ್ರತ ಗುಣವ್ರತ ಶಿಕ್ಷಾವ್ರತವೆಂದು ತ್ರೇಧಾ—ಮೂರು ಪ್ರಕಾರವಾಗಿ ತಿಷ್ಠತಿ—ಇರುತ್ತದೆ 'ತತ್' ತ್ರಯಂ—ಆ ಮೂರು ವಿಧದ ಚಾರಿತ್ರವು ಯಥಾಸಂಖ್ಯಂ—ಕ್ರಮದಿಂದ ಪಂಚತ್ರಿ

ಚತುರ್ಭೇದಂ—ಐದು ಮೂರು ನಾಲ್ಕು ಭೇದಗಳುಳ್ಳುದೆಂದು ಆಖ್ಯಾತಂ—ಹೇಳಲ್ಪಟ್ಟಿದೆ.

**ತಾತ್ಪರ್ಯ:**—ಶ್ರಾವಕರ ಚಾರಿತ್ರದಲ್ಲಿ ಐದು ಅಣುವ್ರತಗಳೂ ಮೂರು ಗುಣವ್ರತಗಳೂ ನಾಲ್ಕು ಶಿಕ್ಷಾವ್ರತಗಳೂ ಸೇರಿ ಹನ್ನೆರಡು ಭೇದಗಳಾಗುತ್ತವೆ. ಇವುಗಳಿಗೆ ದ್ವಾದಶ ಉತ್ತರಗುಣಗಳೆಂದು ಹೆಸರು. ಇವುಗಳ ಸ್ವರೂಪವನ್ನು ಮುಂದೆ ಕ್ರಮದಿಂದ ವಿವರಿಸುತ್ತಾರೆ.

## ಅಣುವ್ರತಸ್ವರೂಪ ವರ್ಣನೆ.

**ಪ್ರಾಣಾತಿಪಾತವಿತಥವ್ಯಾಹರಸ್ತೇಯಕಾಮಮೂರ್ಛ್ಛೇಭ್ಯಃ ||**
**ಸ್ಥೂಲೇಭ್ಯಃ ಪಾಪೇಭ್ಯೋ ವ್ಯುಪರಮಣಮಣುವ್ರತಂ ಭವತಿ ||**

**ಅನ್ವಯಾರ್ಥ:**—ಸ್ಥೂಲೇಭ್ಯಃ ಪಾಪೇಭ್ಯಃ—ಸ್ಥೂಲಪಾಪಗಳಾದ ಪ್ರಾಣಾತಿಪಾತವಿತಥವ್ಯಾಹಾರಸ್ತೇಯಕಾಮಮೂರ್ಛ್ಛೇಭ್ಯಃ—ಕೊಲೆ ಹುಸಿ ಕಳವು ಕಾಮಸೇವನೆ ಮತ್ತು ಪರಿಗ್ರಹ ಇವುಗಳಿಂದ ವ್ಯುಪುರಮಣಂ—ವಿರಕ್ತನಾಗುವುದು ಅಣುವ್ರತಂ—ಅಣುವ್ರತವಾಗಿ ಭವತಿ—ಆಗುತ್ತದೆ.

**ತಾತ್ಪರ್ಯ:**—ಅಣು ಶಬ್ದಕ್ಕೆ 'ಚಿಕ್ಕದು' ಎಂದರ್ಥವಾಗುವುದು. ಗೃಹಸ್ಥನು ಚಿಕ್ಕದಾದ ಅಂದರೆ ಒಂದು ಅಂಶ ವ್ರತವನ್ನು ಪಾಲಿಸತಕ್ಕವನೆಂದು ಹೇಳಿದಂತಾಯಿತು. ಅಂತಹ ಶ್ರಾವಕನಿಗೆ ಅಣುವ್ರತಿಯೆಂದೂ ಅಂತಹ ನಿಯಮಕ್ಕೆ ಅಣುವ್ರತವೆಂದೂ ಹೆಸರು. ಪಂಚಪಾಪಗಳಲ್ಲಿ ಸ್ಥೂಲ ಸೂಕ್ಷ್ಮಗಳೆಂದು ಎರಡು ವಿಧ. ಮುಖ್ಯವಾಗಿ ಪ್ರಾಣಿಗಳಲ್ಲಿ ಏಕೇಂದ್ರಿಯ ದ್ವೀಂದ್ರಿಯ ತ್ರೀಂದ್ರಿಯ ಚತುರಿಂದ್ರಿಯ ಪಂಚೇಂದ್ರಿಯ ಪ್ರಾಣಿಗಳೆಂದೈದು ವಿಧ. ಗಿಡ ಬಳ್ಳಿಮೊದಲಾದುವುಗಳಿಗೆ ಏಕೇಂದ್ರಿಯಪ್ರಾಣಿಗಳೆಂದೂ ಕ್ರಿಮಿ ಶಂಖದ ಹುಳ ಮೊದಲಾದುವುಗಳಿಗೆ ದ್ವೀಂದ್ರಿಯಪ್ರಾಣಿಗಳೆಂದೂ ಇರವೆ ಮೊದಲಾದುವುಗಳಿಗೆ ತ್ರೀಂದ್ರಿಯಪ್ರಾಣಿಗಳೆಂದೂ ನೊಣ ತುಂಬಿ ಮೊದಲಾದುವುಗಳಿಗೆ ಚತುರಿಂದ್ರಿಯ ಪ್ರಾಣಿಗಳೆಂದೂ, ಪಶು ಪಕ್ಷಿ ಮನುಷ್ಯ ಮೊದಲಾದುವುಗಳಿಗೆ ಪಂಚೇಂದ್ರಿಯಪ್ರಾಣಿಗಳೆಂದೂ ಹೆಸರು. ಇವುಗಳಲ್ಲಿ ಏಕೇಂದ್ರಿಯಜೀವಗಳಿಗೆ ಸ್ಥಾವರಜೀವಗಳೆಂದೂ ದ್ವೀಂದ್ರಿಯ

ಮೊದಲ್ಗೊಂಡು ಪಂಚೇಂದ್ರಿಯಗಳ ವರೆಗಿನ ಪ್ರಾಣಿಗಳಿಗೆ ತ್ರಸಜೀವಿಗ ಳೆಂದೂ ಹೆಸರುಂಟು. ಸಂಕಲ್ಪಪೂರ್ವಕವಾಗಿ ತ್ರಸಜೀವಿಗಳಿಗೆ ಬಾಧೆ ಯನ್ನುಂಟು ಮಾಡುವ ಹಿಂಸೆ ಅಸತ್ಯ ಚೌರ್ಯ ಪರಸ್ತ್ರೀಸೇವನೆ ಮತ್ತು ಅತ್ಯಧಿಕವಾದ ಪರಿಗ್ರಹಾಭಿಲಾಷೆ ಇವುಗಳಿಗೆ ಸ್ಥೂಲ ಪಾಪಗಳೆಂದು ಹೆಸರು. ತ್ರಸಜೀವಗಳಿಗೆ ಬಾಧೆಯಿಲ್ಲದಿರುವ ಅಲ್ಪವಾದ ಪಾಪಗಳಿಗೆ ಸೂಕ್ಷ್ಮಪಾಪಗಳೆಂದು ಹೆಸರು. ಅಂತಹ ಸ್ಥೂಲಪಾಪಗಳಾದ ಹಿಂಸೆ ಅಸತ್ಯ ಕಳವು ಪರದಾರಸೇವನೆ ಅತಿಲೋಭ ಇವುಗಳನ್ನು ತ್ಯಾಗಮಾಡು ವುದಕ್ಕೆ ಅಣುವ್ರತವೆಂದು ಮುಖ್ಯಾಭಿಪ್ರಾಯವು.

## ಅಹಿಂಸಾಣುವ್ರತಸ್ವರೂಪ ವರ್ಣನೆ.

**ಸಂಕಲ್ಪಾತ್ಕೃತಕಾರಿತಮನನಾದ್ಯೋಗತ್ರಯಸ್ಯ ಚರಸತ್ವಾನ್ ||**
**ನ ಹಿನಸ್ತಿ ಯತ್ತದಾಹು: ಸ್ಥೂಲವಧಾದ್ವಿರಮಣಂ ನಿಪುಣಾ: ||೫೩||**

**ಅನ್ವಯಾರ್ಥ:**—ಯೋಗತ್ರಯಸ್ಯ ಮನವಚನಕಾಯಗಳೆಂಬ ಯೋಗದ ಸಂಕಲ್ಪಾತ್—ಮಾನಸಿಕ ಕ್ರಿಯೆಯಿಂದಲೂ ಕೃತಕಾರಿತಮನ ನಾತ್—ಕೃತಕಾರಿತಾನುಮೋದನಗಳಿಂದಲೂ ಚರಸತ್ವಾನ್—ತ್ರಸಜೀವ ಗಳನ್ನು ಯತ್—ಯಾವ ಕಾರಣದಿಂದ ನ ಹಿನಸ್ತಿ—ಹಿಂಸಿಸುವುದಿಲ್ಲವೋ ತತ್—ಆದಕಾರಣ ನಿಪುಣಾ:—ಪ್ರಾಜ್ಞರು, ಸ್ಥೂಲವಧಾತ್—ಸ್ಥೂಲ ಹಿಂಸೆಯಿಂದ ವಿರಮಣಂ—ವಿರಕ್ತನಾಗುವುದಕ್ಕೆ—ಅಹಿಂಸಾಣುವ್ರತವೆಂದು ಆಹು:—ಹೇಳುತ್ತಾರೆ.

**ತಾತ್ಪರ್ಯ:**—ಮನವಚನಕಾಯಗಳ ಕ್ರಿಯೆಗೆ ಯೋಗವೆಂದು ಹೆಸರು. ಅವುಗಳಲ್ಲಿ ಮನೋಯೋಗ ವಚನಯೋಗ ಕಾಯಯೋಗಗ ಳೆಂದು ಮೂರು ವಿಧ. ತಾನು ಮಾಡುವುದಕ್ಕೆ 'ಕೃತ'ವೆಂದೂ ಮತ್ತೊ ಬ್ಬರಿಂದ ಮಾಡಿಸುವುದಕ್ಕೆ '**ಕಾರಿತ**'ವೆಂದೂ ಮತ್ತೊಬ್ಬರು ಮಾಡಿದ ಕಾರ್ಯವನ್ನು ನೋಡಿ ಒಡಂಬಡುವುದಕ್ಕೆ 'ಮನನ ಅಥವಾ ಅನುಮೋ ದನ'ವೆಂದೂ ಹೆಸರು. "ಪ್ರಮತ್ತಯೋಗಾತ್ಪ್ರಾಣವ್ಯಪರೋಪಣಂ ಹಿಂಸಾ" ಎಂದು ಹಿಂಸೆಯ ಲಕ್ಷಣವನ್ನು ಸೂತ್ರಕಾರರು ಪ್ರತಿಪಾದಿ

ಸಿರುತ್ತಾರೆ. ಅಂದರೆ ರಾಗದ್ವೇಷಾದಿ ಪರಿಣಾಮಗಳಿಗೆ ಪ್ರಮಾದವೆಂದೂ ಆ ಪ್ರಮಾದಗಳಿಂದ ಯುಕ್ತನಾದವನಿಗೆ ಪ್ರಮತ್ತನೆಂದೂ ಹೆಸರು. ಅಂತಹ ಪ್ರಮತ್ತನ ಮನವಚನಕಾಯ ಕ್ರಿಯೆಗಳಿಗೆ ಯೋಗವೆಂದೂ ಆ ಯೋಗಗಳಿಂದ ಪ್ರಾಣಿಬಾಧೆಯನ್ನುಂಟು ಮಾಡುವುದಕ್ಕೆ ಹಿಂಸೆಯೆಂದೂ ಹೆಸರು. ಹಿಂಸೆಯು ಭಾವಹಿಂಸೆಯೆಂದೂ ದ್ರವ್ಯಹಿಂಸೆಯೆಂದೂ ಎರಡು ವಿಧ. ರಾಗದ್ವೇಷಾದಿ ಭಾವಯುಕ್ತನಾಗಿ ಪರಪ್ರಾಣಿಯನ್ನು ಹಿಂಸಿಸಬೇಕೆಂಬ ಪರಿಣಾಮಕ್ಕೆ ಭಾವಹಿಂಸೆಯೆಂದೂ ಪರಪ್ರಾಣಿಗಳನ್ನು ಘಾತಮಾಡುವುದಕ್ಕೆ ದ್ರವ್ಯಹಿಂಸೆಯೆಂದೂ ಹೆಸರು. ಪುನಃ ಹಿಂಸೆಯಲ್ಲಿ ಸಂಕಲ್ಪಹಿಂಸೆಯೆಂದೂ ಆರಂಭಹಿಂಸೆಯೆಂದೂ ಎರಡು ಮುಖ್ಯ ಭೇದಗಳಿವೆ. ಒಂದು ಪ್ರಾಣಿಯನ್ನು ತಾನು ಹಿಂಸಿಸಬೇಕೆಂದು ಉದ್ದೇಶಪೂರ್ವಕವಾಗಿ ಹಿಂಸಿಸುವುದಕ್ಕೆ ಸಂಕಲ್ಪಹಿಂಸೆಯೆಂದೂ, ಕೃಷಿ ವ್ಯಾಪಾರ ಮೊದಲಾದ ಕೆಲಸಗಳನ್ನು ಮಾಡುವಾಗ ಪರಪ್ರಾಣಿಯನ್ನು ಕೊಲ್ಲಬೇಕೆಂಬ ಸಂಕಲ್ಪವಿರುವುದಿಲ್ಲವಾದರೂ ಪ್ರಾಣಿಹಿಂಸೆಯಾಗುತ್ತದೆ. ಇಂತಹ ಹಿಂಸೆಗೆ ಆರಂಭಹಿಂಸೆಯೆಂದೂ ಹೆಸರು. ಗೃಹಸ್ಥನಿಗೆ ಏಕೇಂದ್ರಿಯ ಜೀವಗಳ ಸಂಕಲ್ಪಹಿಂಸೆಯನ್ನೂ ಆರಂಭಹಿಂಸೆಯನ್ನೂ ಬಿಡಲು ಸಾಧ್ಯವಿಲ್ಲದಿರುವುದರಿಂದ ಆ ಹಿಂಸೆಯು ಆತನಿಂದ ಮಾಡಲ್ಪಡುತ್ತದೆ. ಆದಕಾರಣ ಮನೋವಾಕ್ಕಾಯಗಳ ಸಂಕಲ್ಪದಿಂದಲೂ ಕೃತಕಾರಿತಾನುಮೋದನಗಳಿಂದಲೂ ದ್ವೀಂದ್ರಿಯಾದಿತ್ರಸ-ಜಂಗಮ ಪ್ರಾಣಿಗಳನ್ನು ಹಿಂಸಿಸದಿರುವುದಕ್ಕೆ ಸ್ಥೂಲಹಿಂಸಾತ್ಯಾಗ ಅಥವಾ ಅಹಿಂಸಾಣುವ್ರತವೆಂದು ಮುಖ್ಯಾಭಿಪ್ರಾಯವು.

## ಅಹಿಂಸಾಣುವ್ರತಾತಿಚಾರ ವರ್ಣನೆ.

**ಛೇದನಬಂಧನಪೀಡನಮತಿಭಾರಾರೋಪಣಂ ವ್ಯತೀಚಾರಾಃ ॥**
**ಆಹಾರವಾರಣಾಪಿ ಚ ಸ್ಥೂಲವಧಾದ್ವ್ಯುಪರತೇಃ ಪಂಚ ॥೫೪॥**

**ಅನ್ವಯಾರ್ಥಃ**—ಛೇದನಬಂಧನಪೀಡನಂ—ಛೇದನ—ಕಿವಿ ಮೊದಲಾದುವುಗಳನ್ನು ಕತ್ತರಿಸುವಿಕೆಯು ಬಂಧನ—ಕಟ್ಟಿಹಾಕುವಿಕೆಯು ಪೀಡನ—ಹೊಡೆಯುವಿಕೆಯು ಚ—ಮತ್ತು ಅತಿಭಾರಾರೋಪಣಂ-ಹೆಚ್ಚು

ಭಾರವನ್ನು ಹೊರಿಸುವಿಕೆಯು ಅಪಿ-ಮತ್ತು ಆಹಾರವಾರಣಾ-ಆಹಾರವನ್ನು ಕೊಡದಿರುವಿಕೆಯು 'ಏತೇ' ಪಂಚ-ಇವೈದು ಸ್ಥೂಲವಧಾದ್ಯುಪರತೇಃ—ಅಹಿಂಸಾಣುವ್ರತದ ವ್ಯತೀಚಾರಾಃ-ದೋಷಗಳಾಗಿ 'ಭವಂತಿ'-ಆಗುತ್ತವೆ.

**ತಾತ್ಪರ್ಯಃ**—ವ್ರತ ನಿಯಮಗಳನ್ನು ಮಲಿನ ಮಾಡುವ ಕ್ರಿಯೆಗಳಿಗೆ ದೋಷ ಅಥವಾ ಅತಿಚಾರಗಳೆಂದು ಹೆಸರು. ಪ್ರತಿಯೊಂದು ವ್ರತಗಳಿಗೆ ಐದೈದು ಅತಿಚಾರಗಳಿವೆ. ಅತಿಚಾರಗಳಿಲ್ಲದೆ ವ್ರತಗಳನ್ನು ಪರಿಪಾಲಿಸ [ಧರಿಸ] ಬೇಕು. ಮನುಷ್ಯ ಮತ್ತು ತಿರ್ಯಂಚ ಪ್ರಾಣಿಗಳ ಕಿವಿ ಬಾಲ ಮೊದಲಾದ ಅವಯವಗಳನ್ನು ಕತ್ತರಿಸುವುದಕ್ಕೆ 'ಛೇದನಾತಿಚಾರ' ವೆಂದು ಹೆಸರು. ಪ್ರಾಣಿಗಳನ್ನು ದ್ವೇಷದಿಂದ ಕಾರಾಗೃಹ, ಪಂಜರ ಮೊದಲಾದುವುಗಳಲ್ಲಿ ಬಂಧಿಸುವುದಕ್ಕೆ 'ಬಂಧನಾತಿಚಾರ' ವೆಂದು ಹೆಸರು. ಮನುಷ್ಯ ಮತ್ತು ತಿರ್ಯಂಚ ಪ್ರಾಣಿಗಳಿಗೆ ದ್ವೇಷದಿಂದ ಚಬುಕು ಮೊದಲಾದುವುಗಳಿಂದ ಹೊಡೆಯುವಿಕೆಗೆ 'ಪೀಡನಾತಿಚಾರ' ವೆಂದು ಹೆಸರು. ಮನುಷ್ಯ ಮತ್ತು ತಿರ್ಯಂಚ ಪ್ರಾಣಿಗಳಿಗೆ ತನ್ನ ಶಕ್ತಿಗಿಂತಲೂ ಅಧಿಕವಾದ ಭಾರವನ್ನು ಹೊರಿಸುವುದಕ್ಕೆ 'ಅತಿಭಾರಾರೋಪಣಾತಿಚಾರ'ವೆಂದು ಹೆಸರು. ತಕ್ಕ ಸಮಯಕ್ಕೆ ಯೋಗ್ಯವಾದ ಅನ್ನಪಾನಾದಿ ಆಹಾರಗಳನ್ನು ಕೊಡದಿರುವುದಕ್ಕೆ 'ಆಹಾರವಾರಣಾತಿಚಾರ'ವೆಂದು ಹೆಸರು. ಇವೈದು ಅಹಿಂಸಾಣುವ್ರತದ ಅತಿಚಾರಗಳು. ಇವುಗಳಿಂದ ವ್ರತಗಳು ಏಕಾಂಶ ಮಲಿನವಾಗುವುದೆಂದಭಿಪ್ರಾಯವು.

**ಸತ್ಯಾಣುವ್ರತಸ್ವರೂಪ ವರ್ಣನೆ.**

**ಸ್ಥೂಲಮಲೀಕಂ ನ ವದತಿ ನ ಪರಾನ್ ವಾದಯತಿ ಸತ್ಯಮಪಿ ವಿಪದೇ**
**ಯತ್ತದ್ವದಂತಿ ಸಂತ: ಸ್ಥೂಲಮೃಷಾವಾದವೈರಮಣಂ ||೫೫||**

**ಅನ್ವಯಾರ್ಥಃ**—ಯತ್—ಯಾವ ಕಾರಣದಿಂದ ಸ್ಥೂಲಂ ಅಲೀಕಂ—ಸ್ಥೂಲವಾದ ಅಸತ್ಯವನ್ನು ನ ವದತಿ—ಹೇಳುವುದಿಲ್ಲವೋ ಪರಾನ್—ಇತರರನ್ನು ನ ವಾದಯತಿ—ಹೇಳಿಸುವುದಿಲ್ಲವೋ ವಿಪದೇ—ಪ್ರಾಣಿಹಿಂಸಾನಿಮಿತ್ತವಾಗಿ ಸತ್ಯಮಪಿ—ಸತ್ಯವನ್ನೂ 'ನ ವದತಿ ನ ವಾದಯತಿ' ತಾನು

ಹೇಳುವುದಿಲ್ಲವೋ ಇತರರಿಂದ ಹೇಳಿಸುವುದಿಲ್ಲವೋ ತತ್—ಅದನ್ನು ಸಂತಃ—ಗಣಧರಾದಿಗಳು ಸ್ಥೂಲಮೃಷಾವಾದವೈರಮಣಂ—ಸ್ಥೂಲಾಸತ್ಯದಿಂದ ವಿರಕ್ತನಾಗಿರುವಿಕೆ ಅಥವಾ ಸತ್ಯಾಣುವ್ರತವೆಂದು ವದಂತಿ-ಹೇಳುತ್ತಾರೆ.

**ತಾತ್ಪರ್ಯಃ**—"ಅಸದಭಿಧಾನಮನೃತಂ" ಎಂದು ಸೂತ್ರಕಾರರು ಹೇಳುವಂತೆ ದ್ವೀಂದ್ರಿಯಾದಿ ಪ್ರಾಣಿಹಿಂಸಾಜನಕವೂ ಅಪ್ರಶಸ್ತವೂ ಆದ ವಚನಕ್ಕೆ ಸ್ಥೂಲಾಸತ್ಯವೆಂದು ಹಿಸರು. ಅಂತಹ ವಚನವನ್ನು ತಾನು ಹೇಳದೆಯೂ ಇತರರಿಂದ ಹೇಳಿಸದೆಯೂ ಮತ್ತೊಂದು ಪ್ರಾಣಿಗೆ ಕಷ್ಟ ಅಥವಾ ಹಿಂಸೆಯುಂಟಾಗುವ ಸಂಭವವಿದ್ದರೆ. ಅಂತಹ ಸಂದರ್ಭದಲ್ಲ ಸತ್ಯವಾದ ಮಾತನ್ನೂ ಆಡದಿರುವುದಕ್ಕೆ ಸತ್ಯಾಣುವ್ರತವೆಂದು ಹೆಸರು. ಯದ್ಯಪಿ ಸತ್ಯವಾದ ಮಾತನ್ನು ಆಡದಿರುವುದರಿಂದ ಅಸತ್ಯಜನಕವಾದ ಪಾಪವು ಸಂಭವಿಸುವುದಾದರೂ ಇತರ ಪ್ರಾಣಿಗಳನ್ನು ರಕ್ಷಿಸಬೇಕೆಂಬ ಉದ್ದೇಶವಿರುವುದರಿಂದ ಅಂತಹ ಪಾಪವು ಸಂಭವಿಸಲಾರದೆಂದು ಮುಖ್ಯಾಭಿಪ್ರಾಯವು.

## ಸತ್ಯಾಣುವ್ರತಾತಿಚಾರ ವರ್ಣನೆ.

**ಪರಿವಾದರಹೋಭ್ಯಾಖ್ಯಾ ಪೈಶೂನ್ಯಂ ಕೂಟಲೇಖಕರಣಂ ಚ ||**
**ನ್ಯಾಸಾಪಹಾರಿತಾಪಿ ಚ ವ್ಯತಿಕ್ರಮಾಃ ಪಂಚ ಸತ್ಯಸ್ಯ ||೫೬||**

**ಅನ್ವಯಾರ್ಥಃ**—ಪರಿವಾದರಹೋಭ್ಯಾಖ್ಯಾ—ಪರಿವಾದ-ಮಿಥ್ಯೋಪದೇಶವನ್ನು ಮಾಡುವಿಕೆಯು ರಹೋಭ್ಯಾಖ್ಯಾ—ಗುಪ್ತವಿಷಯವನ್ನು ಪ್ರಕಟಸುವಿಕೆಯು ಪೈಶೂನ್ಯಂ—ಚಾಡಿ ಹೇಳುವಿಕೆಯು ಚ—ಮತ್ತು ಕೂಟಲೇಖಕರಣಂ—ಅಸತ್ಯ ಲೇಖನವನ್ನು ಬರೆಯುವಿಕೆಯು ಅಪಿಚ—ಮತ್ತು ನ್ಯಾಸಾಪಹಾರಿತಾ—ಇಟ್ಟ ದ್ರವ್ಯವನ್ನು ಅಪಹರಿಸುವುದು 'ಏತೇ' ಪಂಚ ಇವೈದು ಸತ್ಯಸ್ಯ—ಸತ್ಯಾಣುವ್ರತದ ವ್ಯತಿಕ್ರಮಾಃ—ಅತಿಚಾರಗಳಾಗಿ 'ಭವಂತಿ'—ಆಗುತ್ತವೆ.

**ತಾತ್ಪರ್ಯಃ**—ಅಭ್ಯುದಯ—ನಿಃಶ್ರೇಯಸ ಸುಖಕ್ಕೆ ಕಾರಣವಾದ ತತ್ವಗಳನ್ನು ವಿಪರೀತವಾಗಿ ಉಪದೇಶಿಸುವಿಕೆಯು ಅಥವಾ ಮಿಥ್ಯಾ

ಶಾಸ್ತ್ರೋಪದೇಶವನ್ನು ಮಾಡುವಿಕೆಯು ಇವುಗಳಿಗೆ ಪರಿವಾದವೆಂದು ಹೆಸರು. ಸ್ತ್ರೀಪುರುಷರ ಗುಪ್ತವಿಷಯಗಳನ್ನು ಪ್ರಕಟಿಸುವುದಕ್ಕೆ ರಹೋಭ್ಯಾಖ್ಯೆಯೆಂದು ಹೆಸರು. ಸುಳ್ಳಾದ ನೋಟು ರಶೀದು ದಸ್ತವೇಜು ಮೊದಲಾದುವುಗಳನ್ನು ಬರೆಯುವುದಕ್ಕೆ ಕೂಟಲೇಖಕರಣವೆಂದು ಹೆಸರು. ಚಾಡಿ ಅಥವಾ ನಿಂದೆಯನ್ನು ಮಾಡುವುದಕ್ಕೆ ಪೈಶೂನ್ಯವೆಂದು ಹೆಸರು. ತೆಗೆದಿಡುವರೇ ಕೊಟ್ಟ ಸುವರ್ಣಾದಿ ದ್ರವ್ಯಗಳ ಮಾಲಿಕನು ವಿಸ್ಮರಣೆಯಿಂದ ಬಿಟ್ಟರೂ ಕೊಡದೆ ಅಪಹರಿಸುವುದಕ್ಕೆ ನ್ಯಾಸಾಪಹಾರವೆಂದು ಹೆಸರು. ಇವೈದು ಸತ್ಯಾಣುವ್ರತದ ಅತಿಚಾರಗಳು.

### ಅಚೌರ್ಯಾಣುವ್ರತಸ್ವರೂಪ ವರ್ಣನೆ.

**ನಿಹಿತಂ ವಾ ಪತಿತಂ ವಾ ಸುವಿಸ್ಮೃತಂ ವಾ ಪರಸ್ವಮವಿಸೃಷ್ಟಂ ||**
**ನ ಹರತಿ ಯನ್ನ ಚ ದತ್ತೇ ತದಕೃಶಚೌರ್ಯಾದುಪಾರಮಣಂ ||೫೭||**

**ಅನ್ವಯಾರ್ಥಃ**—ಯತ್—ಯಾವದು ನಿಹಿತಂ—ಇಟ್ಟಿರುವ ವಾ—ಅಥವಾ ಪತಿತಂ—ಬಿದ್ದಿರುವ ವಾ—ಮತ್ತು ಸುವಿಸ್ಮೃತಂ—ಮರೆತಿರುವ ವಾ—ಅಥವಾ ಅವಿಸೃಷ್ಟಂ—ಕೊಡದಿರುವ ಪರಸ್ವಂ—ಪರದ್ರವ್ಯವನ್ನು ನ ಹರತಿ—ಅಪಹರಿಸುವುದಿಲ್ಲವೋ ಚ ಮತ್ತು 'ಅನ್ಯಸ್ಮೈ'—ಇತರರಿಗೆ ನ ದತ್ತೇ—ಕೊಡುವುದಿಲ್ಲವೋ ತತ್—ಅದು ಅಕೃಶಚೌರ್ಯಾತ್—ಸ್ಥೂಲಚೌರ್ಯದಿಂದ ವ್ಯುಪಾರಮಣಂ—ವಿರಕ್ತನಾಗುವಿಕೆಯೆಂಬ ಅಚೌರ್ಯಾಣುವ್ರತವಾಗಿ 'ಭವತಿ'—ಆಗುತ್ತದೆ.

**ತಾತ್ಪರ್ಯಃ**—ಪರದ್ರವ್ಯವನ್ನು ಅಪಹರಿಸುವುದಿಲ್ಲವೆಂಬ ನಿಯಮಕ್ಕೆ ಅಚೌರ್ಯಾಣುವ್ರತವೆಂದು ಹೆಸರು. ಇತರರು ಭೂಮಿಯಲ್ಲಿ ಸ್ಥಾಪಿಸಿರುವ, ಮಾರ್ಗದಲ್ಲಿ ಬಿದ್ದಿರುವ ಒಂದೆಡೆ ಮರೆತು ಬಿಟ್ಟಿರುವ ಅಥವಾ ಯಾರೂ ನಮಗೆ ಕೊಟದಿರುವ ದ್ರವ್ಯಾದಿ—ಪದಾರ್ಥಗಳಿಗೆ ಪರದ್ರವ್ಯವೆಂದು ಹೆಸರು. ಅಂತಹ ಪರರ ದ್ರವ್ಯವನ್ನು ತಾನು ಅಪಹರಿಸದೆಯೂ ಇತರರಿಗೆ ಕೊಡದೆಯೂ ಇರುವ ನಿಯಮಕ್ಕೆ ಅಚೌರ್ಯಾಣುವ್ರತವೆಂದು ಹೆಸರು. ಪರದ್ರವ್ಯಾಪಹರಣೆಯಿಂದ ಇತರ ಪ್ರಾಣಿಗಳಿಗೆ ಹಿಂಸೆಯುಂಟಾಗುವ ಕಾರಣ ಸ್ಥೂಲಾಚೌರ್ಯವನ್ನು ತ್ಯಜಿಸಬೇಕೆಂದು ಮುಖ್ಯಾಭಿಪ್ರಾಯವು.

## ಅಚೌರ್ಯಾಣುವ್ರತಾತಿಚಾರ ವರ್ಣನೆ.

**ಚೌರಪ್ರಯೋಗಚೌರಾರ್ಥಾದಾನವಿಲೋಪಸದೃಶಸನ್ಮಿಶ್ರಾಃ ||**
**ಹೀನಾಧಿಕವಿನಿಮಾನಂ ಪಂಚಾಸ್ತೇಯೇ ವ್ಯತೀಪಾತಾಃ ||೫೮||**

**ಅನ್ವಯಾರ್ಥ:**—ಚೌರಪ್ರಯೋಗಚೌರಾರ್ಥಾದಾನವಿಲೋಪಸಸದೃಶಸನ್ಮಿಶ್ರಾಃ—ಚೌರಪ್ರಯೋಗ—ಕಳ್ಳತನಕ್ಕೆ ಉಪಾಯವನ್ನು ಹೇಳಿ ಕೊಡುವಿಕೆಯು ಚೌರಾರ್ಥಾದಾನ—ಕಳವಿನ ಪದಾರ್ಥಗಳನ್ನು ತೆಗೆದು ಕೊಳ್ಳುವಿಕೆಯು ವಿಲೋಪ—ರಾಜಾಜ್ಞೆಯನ್ನುಲ್ಲಂಘಿಸುವಿಕೆಯು ಸದೃಶ ಸನ್ಮಿಶ್ರಾಃ—ಸಮಾನವಾದ ವಸ್ತುಗಳನ್ನು ಬೆರಸುವಿಕೆಯು, ಹೀನಾಧಿಕ ವಿನಿಮಾನಂ—ನ್ಯೂನಾಧಿಕವಾದ ಅಳತೆ—ಸೇರು ತ್ರಾಸು ಕಲ್ಲು ಮೊದಲಾದುವುಗಳನ್ನಿಡುವಿಕೆಯು 'ಏತೇ' ಪಂಚ—ಇವೈದು ಅಸ್ತೆಯೇ—ಅಚೌರ್ಯಾಣುವ್ರತದಲ್ಲಿ ವ್ಯತೀಪಾತಾಃ—ದೋಷಗಳಾಗಿ ಭವಂತಿ—ಆಗುತ್ತವೆ.

**ತಾತ್ಪರ್ಯ:**—ತಾನು ಕಳವು ಮಾಡದೆ ಇತರರನ್ನು ಪ್ರೇರೇಪಿಸಿ ಅದಕ್ಕನುಕೂಲವಾದ ಉಪಾಯವನ್ನು ಹೇಳಿಕೊಡುವುದಕ್ಕೆ 'ಚೌರಪ್ರಯೋಗ ವೆಂದು ಹೆಸರು. ಕದ್ದುತಂದ ಪದಾರ್ಥಗಳನ್ನು ತಾನು ತೆಗೆದುಕೊಳ್ಳುವುದಕ್ಕೆ 'ಚೌರಾರ್ಥಾದಾನ'ವೆಂದು ಹೆಸರು. ಅನ್ಯಾಯ ಮಾರ್ಗದಲ್ಲಿ ಪ್ರವರ್ತಿಸುವಿಕೆ ಅಥವಾ ರಾಜಾಜ್ಞೆಯನ್ನು ಮೀರುವಿಕೆ ಇವುಗಳಿಗೆ 'ವಿಲೋಪ' ವೆಂದು ಹಿಸರು. ಅಧಿಕ ಬೆಲೆಯುಳ್ಳ ವಸ್ತುಗಳೊಡನೆ ಕಮ್ಮಿಬೆಲೆಯುಳ್ಳ ವಸ್ತುಗಳನ್ನು ಮಿಶ್ರಮಾಡುವಿಕೆಗೆ 'ಸದೃಶಸನ್ಮಿಶ್ರ'ವೆಂದು ಹೆಸರು. ಹೆಚ್ಚು ಕಡಿಮೆಯಾದ ಅಳತೆ—ತೂಕ—ಮೊದಲಾದುವುಗಳನ್ನು ಮಾಡುವುದಕ್ಕೆ "ಹೀನಾಧಿಕವಿನಿಮಾನ"ವೆಂದು ಹೆಸರು. ಇವೈದು ಅಚೌರ್ಯಾಣುವ್ರತದ ಅತಿಚಾರಗಳು. ವ್ರತಿಕನು ಇವುಗಳನ್ನು ಬಿಡಬೇಕೆಂದಭಿಪ್ರಾಯವು.

## ಪರಸ್ತ್ರೀತ್ಯಾಗಾಣುವ್ರತಸ್ವರೂಪ ವರ್ಣನೆ.

**ನ ತು ಪರದಾರಾನ್ ಗಚ್ಛತಿ ನ ಪರಾನ್ ಗಮಯತಿ ಚ**
**ಪಾಪಭೀತೇರ್ಯತ್ || ಸಾ ಪರದಾರನಿವೃತ್ತಿಃ ಸ್ವದಾರಸಂತೋಷ**
**ನಾಮಾಪಿ ||೫೯||**

**ಅನ್ವಯಾರ್ಥಃ**—'ಯತ್'—ಯಾವದು ಪಾಪಭೀತೇಃ—ಪಾಪದ ಭಯದಿಂದ, ಪರದಾರಾನ್—ಪರಸ್ತ್ರೀಯರನ್ನು ಕುರಿತು ನ ತು ಗಚ್ಛತಿ—ಹೋಗುವುದಿಲ್ಲವೋ ಪರಾನ್—ಇತರರನ್ನು ನ ಗಮಯತಿ—ಹೋಗುವಂತೆ ಪ್ರೇರೇಪಿಸುವದಿಲ್ಲವೋ ಸಾ—ಅದು ಪರದಾರನಿವೃತ್ತಿಃ— ಪರಸ್ತ್ರೀತ್ಯಾಗ ವೆಂದು ಅಪಿ—ಮತ್ತು ಸ್ವದಾರಸಂತೋಷನಾಮ—ಸ್ವಸ್ತ್ರೀಸಂತೋಷವೆಂದು ಹೆಸರುಳ್ಳ ಅಣುವ್ರತವಾಗಿ 'ಭವತಿ'—ಆಗುತ್ತದೆ.

**ತಾತ್ಪರ್ಯ:**—ತನ್ನಿಂದ ವಿವಾಹಿತಳಾದ ಸ್ತ್ರೀಯನ್ನು ಹೊರತು ಇನ್ನುಳಿದ ಇತರ ಸ್ತ್ರೀಯರಿಗೆ ಪರಸ್ತ್ರೀಯರೆಂದು ಹೆಸರು ಪರಸ್ತ್ರೀಗಮನವು ಇಹ ಪರಗಳಲ್ಲಿ ದುಃಖ ಮತ್ತು ಭಯವನ್ನುಂಟು ಮಾಡತಕ್ಕದ್ದೆಂದು ಅರಿದು ಪರಸ್ತ್ರೀ ಸಹವಾಸವನ್ನು ತಾನು ಮಾಡದೆ ಇತರರನ್ನೂ ಮಾಡುವಂತೆ ಪ್ರೇರೇಪಿಸದೆ ತನ್ನ ಸ್ತ್ರೀಯರಲ್ಲಿ ಸಂತೋಷದಿಂದಿರುವುದಕ್ಕೆ ಪರಸ್ತ್ರೀತ್ಯಾಗ ಅಥವಾ ಸ್ವದಾರಸಂತೋಷವೆಂಬ ಅಣುವ್ರತವೆಂದು ಹೆಸರು. ಅಂತಹ ನಿಯಮವುಳ್ಳವನಿಗೆ ಪರಸ್ತ್ರೀತ್ಯಾಗಿ ಅಥವಾ ಸ್ವದಾರಸಂತೋಷಿಯೆಂದು ಹೇಳುತ್ತಾರೆ.

## ಪರಸ್ತ್ರೀತ್ಯಾಗಾಣುವ್ರತಾತಿಚಾರ ವರ್ಣನೆ.

**ಅನ್ಯವಿವಾಹಾಕರಣಾನಂಗಕ್ರೀಡಾವಿಟತ್ವವಿಪುಲತೃಷಃ||**
**ಇತ್ವರಿಕಾಗಮನಂ ಚಾಸ್ಮರಸ್ಯ ಪಂಚವ್ಯತೀಚಾರಾಃ ||೬೦||**

**ಅನ್ವಯಾರ್ಥಃ**—ಅನ್ಯವಿವಾಹಾಕರಣಾನಂಗಕ್ರೀಡಾವಿಟತ್ವವಿಪುಲತೃಷಃ–ಅನ್ಯವಿವಾಹಾಕರಣ—ಪುತ್ರಾದಿಗಳನ್ನು ಹೊರತು ಇತರರಿಗೆ ಲಗ್ನ ಮಾಡುವಿಕೆಯು ಅನಂಗಕ್ರೀಡಾ—ಅಂಗವಲ್ಲದ ಇತರ ಸ್ಥಾನದಲ್ಲಿ ಕ್ರೀಡಿಸುವಿಕೆಯು ವಿಟತ್ವ—ಹಾಶ್ಯಮಿಶ್ರವಾದ ಅಶ್ಲೀಲ ವಚನಗಳನ್ನಾಡುವಿಕೆಯು ವಿಪುಲತೃಷಃ–ಸ್ವಸ್ತ್ರೀಸೇವನೆಯಲ್ಲಿ ಅತ್ಯಾಶೆಯನ್ನುಪಡುವಿಕೆಯು ಚ–ಮತ್ತು ಇತ್ವರಿಕಾಗಮನಂ—ವ್ಯಭಿಚಾರಿಣೀ ಸ್ತ್ರೀಯರ ಮನೆಗೆ ಹೋಗುತ್ತಿರುವಿಕೆಯು 'ಏತೇ' ಪಂಚ—ಇವೈದು ಅಸ್ಮರಸ್ಯ—ಪರಸ್ತ್ರೀತ್ಯಾಗಾಣುವ್ರತದ–ವ್ಯತೀಚಾರಾಃ—ದೋಷಗಳಾಗಿ 'ಭವಂತಿ'—ಆಗುತ್ತವೆ.

**ತಾತ್ಪರ್ಯ:**—ತನ್ನ ಪುತ್ರಪುತ್ರಿಯರನ್ನು ಹೊರತು ಇತರರ ವಿವಾಹವನ್ನು ತಾನು ಮುಂದಾಳಾಗಿ ನಿಂತು ಮಾಡುವುದಕ್ಕೆ ಅನ್ಯವಿವಾಹಕರಣವೆಂದು ಹೆಸರು. ಕಾಮತೃಪ್ತಿಗೆ ಯೋಗ್ಯವಾದ ಅಂಗವನ್ನು ಬಿಟ್ಟು ಗುದಮೈಥುನಾದಿಗಳನ್ನು ಮಾಡುವುದಕ್ಕೆ ಅನಂಗಕ್ರೀಡೆಯೆಂದೂ, ಸ್ತ್ರೀವೇಷವನ್ನು ಧರಿಸಿ ಹಾಸ್ಯಮಿಶ್ರಿತವಾದ ಭಂಡವಚನಗಳನ್ನಾಡುವುದಕ್ಕೆ ವಿಟತ್ವವೆಂದೂ, ಸ್ವಸ್ತ್ರೀಯಲ್ಲಿ ಕಾಮಸೇವನೆಯ ಅತ್ಯಭಿಲಾಷೆಯನ್ನು ಪಡುವುದಕ್ಕೆ ವಿಪುಲತೃಷೆಯೆಂದೂ, ವೇಶ್ಯೆಯರು ಮೊದಲಾದ ವ್ಯಭಿಚಾರಿಣಿ ಸ್ತ್ರೀಯರಲ್ಲಿಗೆ ಹೋಗುತ್ತಿರುವುದಕ್ಕೆ ಇತ್ವರಿಕಾಗಮನವೆಂದೂ ಹೆಸರು. ಇವೈದು ಪರಸ್ತ್ರೀತ್ಯಾಗಾಣುವ್ರತದ ಅತಿಚಾರಗಳು. ಅಂತಹ ನಿಯಮವುಳ್ಳವನು ಇವುಗಳನ್ನು ಮಾಡಬಾರದೆಂದಭಿಪ್ರಾಯವು.

### ಪರಿಗ್ರಹಪರಿಮಾಣವ್ರತಸ್ವರೂಪ ವರ್ಣನೆ.

**ಧನಧಾನ್ಯಾದಿಗ್ರಂಥಂ ಪರಿಮಾಯ ತತೋಽಧಿಕೇಷು ನಿಸ್ಪೃಹತಾ ||**
**ಪರಿಮಿತಪರಿಗಹಃ ಸ್ಯಾದಿಚ್ಛಾಪರಿಮಾಣನಾಮಾಪಿ ||೬೧||**

**ಅನ್ವಯಾರ್ಥ:**—ಧನಧಾನ್ಯಾದಿಗ್ರಂಥಂ—ಧನಧಾನ್ಯ ಮೊದಲಾದ ಪರಿಗ್ರಹವನ್ನು ಪರಿಮಾಯ—ಪರಿಮಿತಿ ಮಾಡಿಕೊಂಡು ತತ:-ಅದಕ್ಕಿಂತಲೂ ಅಧಿಕೇಷು—ಉಳಿದುವುಗಳಲ್ಲಿ ನಿಸ್ಪೃಹತಾ—ಇಚ್ಛೆಯಿಲ್ಲದಿರುವಿಕೆಯು ಪರಿಮಿತಪರಿಗ್ರಹಃ—ಪರಿಗ್ರಹಪರಿಮಾಣವ್ರತವೆಂದೂ ಅಪಿ-ಮತ್ತು ಇಚ್ಛಾಪರಿಮಾಣನಾಮ—ಇಚ್ಛಾಪರಿಮಾಣವೆಂಬ ಹೆಸರುಳ್ಳದೆಂದೂ ಉಚ್ಯತೇ ಹೇಳಲ್ಪಡುತ್ತದೆ.

**ತಾತ್ಪರ್ಯ:**—ಮೊದಲನೆಯ ಸಮ್ಯಗ್ದರ್ಶನಾಧಿಕಾರದಲ್ಲಿ ಪ್ರತಿಪಾದಿಸಿರುವ ಧನಧಾನ್ಯ ಮೊದಲಾದ ಬಾಹ್ಯಾಭ್ಯಂತರ ಪರಿಗ್ರಹಗಳನ್ನು ಪರಿಮಿತಿ-ನಿಯಮವನ್ನು ಮಾಡಿಕೊಂಡು ತನ್ನನಿಯಮಕ್ಕಿಂತಲೂ ಅಧಿಕವಾದ ಇತರ ವಸ್ತುಗಳಲ್ಲಿ ಅಭಿಲಾಷೆಯನ್ನು ತೊರೆಯುವುದಕ್ಕೆ ಪರಿಗ್ರಹಪರಿಮಾಣ ಅಥವಾ ಇಚ್ಛಾಪರಿಮಾಣವ್ರತವೆಂದು ಹೆಸರು.

### ಪರಿಗ್ರಹಪರಿಮಾಣವ್ರತಾತಿಚಾರ ವರ್ಣನೆ.

**ಅತಿವಾಹನಾತಿಸಂಗ್ರಹವಿಸ್ಮಯಲೋಭಾತಿಭಾರವಹನಾನಿ ||**
**ಪರಿಮಿತಪರಿಗ್ರಹಸ್ಯ ಚ ವಿಕ್ಷೇಪಾಃ ಪಂಚ ಲಕ್ಷ್ಯಂತೇ ||೬೨||**

**ಅನ್ವಯಾರ್ಥಃ**—ಅತಿವಾಹನಾತಿಸಂಗ್ರಹವಿಸ್ಮಯಲೋಭಾತಿಭಾರವಹನಾನಿ—ಅತಿವಾಹನ—ಹೆಚ್ಚು ಕುದುರೆ ಗಾಡಿ ಮೊದಲಾದ ವಾಹನಗಳನ್ನಿಟ್ಟುಕೊಳ್ಳುವಿಕೆಯು. ಅತಿಸಂಗ್ರಹ—ತನಗೆ ಪ್ರಯೋಜನವಾದುದಕ್ಕಿಂತ ಅಧಿಕ ವಸ್ತುಗಳನ್ನು ಸಂಗ್ರಹಿಸುವಿಕೆಯು ವಿಸ್ಮಯ—ಇತರರ ವೈಭವವನ್ನು ನೋಡಿ ಆಶ್ಚರ್ಯಪಡುವಿಕೆಯು. ಲೋಭ-ತನ್ನ ದ್ರವ್ಯದಲ್ಲಿ ಅತ್ಯಾಶೆಯನ್ನು ಮಾಡುವಿಕೆಯು. ಅತಿಭಾರವಹನ—ಅಧಿಕಭಾರವನ್ನು ಹೊರಿಸುವಿಕೆಯು. 'ಏತೇ' ಪಂಚ ಇವೈದು ಪರಿಮಿತಪರಿಗ್ರಹಸ್ಯ ಚ—ಪರಿಗ್ರಹಪರಿಮಾಣವ್ರತಕ್ಕೆ ಸಹ ವಿಕ್ಷೇಪಾಃ— ಅತಿಚಾರಗಳೆಂದು ಲಕ್ಷ್ಯಂತೇ-ಹೇಳಲ್ಪಡುತ್ತವೆ.

**ತಾತ್ಪರ್ಯಃ**—ಕುದುರೆ ಗಾಡಿ ಮೊದಲಾದ ವಾಹನಗಳನ್ನೂ ದಾಸೀದಾಸಾದಿ ಸೇವಕರನ್ನೂ ತನ್ನ ಪರಿಮಿತಿಗಿಂತ ಅಧಿಕವಾಗಿಟ್ಟುಕೊಳ್ಳುವುದಕ್ಕೆ ಅತಿವಾಹನವೆಂದೂ, ತನಗೆ ಪ್ರಯೋಜನವಿಲ್ಲದ ಅಧಿಕವಾದ ವಸ್ತುಗಳನ್ನು ಸಂಗ್ರಹಿಸುವುದಕ್ಕೆ ಅತಿಸಂಗ್ರಹವೆಂದೂ, ಇತರರ ವೈಭವವನ್ನು ನೋಡಿ ಆಶ್ಚರ್ಯಪಡುವುದಕ್ಕೆ ವಿಸ್ಮಯವೆಂದೂ, ತನ್ನ ವಸ್ತುಗಳಲ್ಲಿ ಅತ್ಯಭಿಲಾಷೆಯನ್ನು ಮಾಡುವುದಕ್ಕೆ ಲೋಭವೆಂದೂ, ಮನುಷ್ಯರು ಪಶು ಮೊದಲಾದುವುಗಳಲ್ಲಿ ಅಧಿಕಭಾರವನ್ನು ಹೊರಿಸುವುದಕ್ಕೆ ಅತಿಭಾರವಹನವೆಂದೂ ಹೆಸರು. ಇವೈದು ಪರಿಗ್ರಹಪರಿಮಾಣವ್ರತದ ಅತಿಚಾರಗಳು. ಆ ನಿಯಮವುಳ್ಳವನು ಇವುಗಳನ್ನು ಬಿಡಬೇಕೆಂದು ಭಾವವು

**ಪಂಚಾಣುವ್ರತಧಾರಣಾಫಲ ವರ್ಣನೆ.**

**ಪಂಚಾಣುವ್ರತನಿಧಯೋನಿರತಿಕ್ರಮಣಾಃ ಫಲಂತಿ ಸುರಲೋಕಂ**
**ಯತ್ರಾವಧಿರಷ್ಟಗುಣಾ ದಿವ್ಯಶರೀರಂ ಚ ಲಭ್ಯಂತೇ ॥೬೩॥**

**ಅನ್ವಯಾರ್ಥಃ**—ನಿರತಿಕ್ರಮಣಾಃ—ಅತಿಚಾರರಹಿತವಾಗಿ ಪರಿಪಾಲಿಸಲ್ಪಟ್ಟ ಪಂಚಾಣುವ್ರತನಿಧಯು:—ಪಂಚಾಣುವ್ರತಗಳೆಂಬ ನಿಧಿಗಳು ಸುರಲೋಕಂ-ಸ್ವರ್ಗವನ್ನು ಫಲಂತಿ—ಕೊಡುತ್ತವೆ. ಯತ್ರ-ಯಾವ ಸ್ವರ್ಗದಲ್ಲಿ ಅವಧಿ:—ಅವಧಿಜ್ಞಾನವು ಅಷ್ಟಗುಣಾ:—ಅಣಿಮಾ ಮೊದಲಾದೆಂಟು

ಋದ್ಧಿಗಳೂ ಚ—ಮತ್ತು ದಿವ್ಯಶರೀರಂ—ಮನೋಹರವಾದ ಶರೀರವು ಲಭ್ಯಂತೇ—ಪ್ರಾಪ್ತಿಯಾಗುತ್ತದೆ.

**ತಾತ್ಪರ್ಯ:**—ಪ್ರತಿಯೊಂದು ವ್ರತಗಳಿಗೆ ಐದೈದು ಅತಿಚಾರ [ದೋಷ]ಗಳಿವೆಯೆಂದು ಹಿಂದೆ ಹೇಳಿದರಷ್ಟೇ? ಅಭೀಷ್ಟಫಲಗಳನ್ನು ಕೊಡುವ ವಸ್ತುವಿಗೆ ನಿಧಿಯೆಂದು ಹೆಸರು. ಈ ಪಂಚಾಣುವ್ರತಗಳು ಇಷ್ಟ ಫಲಗಳನ್ನು ಕೊಡತಕ್ಕವುಗಳಾದ್ದರಿಂದ ನಿಧಿಯ ಉಪಮೆಯನ್ನು ಕೊಟ್ಟಿರುತ್ತಾರೆ. ಆದಕಾರಣ ಅತಿಚಾರಗಳಿಲ್ಲದೆ ಪಂಚಾಣುವ್ರತಗಳನ್ನು ಪರಿಪಾಲಿಸುವುದರಿಂದ ಸ್ವರ್ಗಸಂಪತ್ತಿ ಪ್ರಾಪ್ತಿಯಾಗುವುದೆಂದು ಭಾವವು. ಸ್ವರ್ಗದ ದೇವತೆಗಳಿಗೆ ಜನನವೇ ಕಾರಣವಾಗಿರುವ ಭವಪ್ರತ್ಯಯವೆಂಬ ಅವಧಿಜ್ಞಾನವೂ ಅಣಿಮಾ ಮೊದಲಾದ ವೈಕ್ರಿಯಕಋದ್ಧಿಗಳೂ ಮಲ ಮೂತ್ರ ಚರ್ಮಮಾಂಸಾದಿಗಳಿಲ್ಲದಿರುವುದೂ ಸುಂದರವೂ ಆದ ದಿವ್ಯ ಶರೀರವೂ ಉಂಟಾಗುತ್ತದೆಂದು ಮುಖ್ಯಾಭಿಪ್ರಾಯವು.

**ಪಂಚಾಣುವ್ರತಗಳಲ್ಲಿ ಪ್ರಸಿದ್ಧರಾದವರ ಹೆಸರು.**

**ಮಾತಂಗೋ ಧನದೇವಶ್ಚ । ವಾರಿಷೇಣಸ್ತತ:ಪರಃ ॥**
**ನೀಲೀ ಜಯಶ್ಚ ಸಂಪ್ರಾಪ್ತಾ: । ಪೂಜಾತಿಶಯಮುತ್ತಮಂ ॥**

**ಅನ್ವಯಾರ್ಥ:**—ಮಾತಂಗಃ-ಮಾದಿಗನು ಚ-ಮತ್ತು ಧನದೇವಃ—ಧನದೇವಶ್ರೇಷ್ಠಿಯು ತತ:ಪರಃ-ಆ ಮೇಲೆ ವಾರಿಷೇಣಃ-ವಾರಿಷೇಣಕುಮಾರನು. ನೀಲಿ—ನೀಲಿಯೆಂಬವಳು ಚ- ಮತ್ತು ಜಯ:-ಜಯಕುಮಾರನು ಉತ್ತಮ-ಶ್ರೇಷ್ಠವಾದ ಪೂಜಾತಿಶಯಂ-ಪೂಜ್ಯಪದವಿಯನ್ನು ಸಂಪ್ರಾಪ್ತಾಃ-ಹೊಂದಿದರು.

**ತಾತ್ಪರ್ಯ:**—ಅಹಿಂಸಾಣುವ್ರತದಲ್ಲಿ ಮಾತಂಗನೆಂಬ ಚಾಂಡಾಲನೂ ಸತ್ಯಾಣುವ್ರತದಲ್ಲಿ ಧನದೇವನೆಂಬ ಶ್ರೇಷ್ಠಿಯ ಪುತ್ರನೂ ಅಚೌರ್ಯಾಣುವ್ರತದಲ್ಲಿ ವಾರಿಷೇಣನೆಂಬ ಶ್ರೇಣಿಕರಾಜನ ಕುಮಾರನೂ ಬ್ರಹ್ಮಚರ್ಯಾಣುವ್ರತದಲ್ಲಿ ನೀಲಿಯೆಂಬ ಶ್ರೇಷ್ಠಿಪುತ್ರಿಯೂ ಪರಿಗ್ರಹ ಪರಿಮಾಣವ್ರತದಲ್ಲಿ ಜಯಕುಮಾರನೆಂಬ ರಾಜಪುತ್ರನೂ ಉತ್ತಮವಾದ ಪೂಜಾ—ಸತ್ಕಾರದಿಂದ ಪ್ರಸಿದ್ಧರಾಗಿ ಅಭ್ಯುದಯ ನಿ:ಶ್ರೇಯಸ ಸುಖಗ-

ಳನ್ನು ಹೊಂದಿರುವರೆಂದಭಿಪ್ರಾಯವು. ಅವರ ಕಥೆಯನ್ನು ಸಂಕ್ಷೇಪದಿಂದ ಯಥಾಕ್ರಮವಾಗಿ ಇಲ್ಲಿ ವಿವರಿಸುವೆವು.

## ಯಮಪಾಲನೆಂಬ ಮಾತಂಗನ ಕಥೆ.

ಪ್ರಾಚೀನಕಾಲದಲ್ಲಿ ವಾರಾಣಸೀನಗರದಲ್ಲಿ ಪಾಕಶಾಸನನೆಂಬ ರಾಜನಿದ್ದನು. ಅವನೊಂದು ದಿನ ತನ್ನ ನಗರದಲ್ಲಿ ಭಯಂಕರವಾದ ಹಿಂಸೆಯಾಗುವುದೆಂಬ ಸಮಾಚಾರವನ್ನು ಕೇಳಿ, ಆಗ ನಂದೀಶ್ವರಪರ್ವವಾದ್ದರಿಂದ ಕಾರ್ತಿಕ ಶು. ಅಷ್ಟಮಿ ಮೊದಲ್ಗೊಂಡು ಪೂರ್ಣಿಮೆಯವರೆಗೆ ೮ ದಿವಸ ಯಾರೂ ಜೀವಹಿಂಸೆಯನ್ನು ಮಾಡಬಾರದೆಂದು ಯದ್ಯಪಿ ಮಾಡಿದರೆ ಭಯಂಕರವಾದ ಶಿಕ್ಷೆಗೆ ಒಳಗಾಗುವರೆಂದೂ ನಗರದಲ್ಲಿ ಡಂಗುರವನ್ನು ಹೋಯಿಸಿದನು.

ಆಗ ನಗರದಲ್ಲಿ ನಾಮಮಾತ್ರದಿಂದ ಧರ್ಮನೆಂಬ ಹೆಸರುಳ್ಳ ಅಧರ್ಮಿಯೂ ಸಪ್ತವ್ಯಸನಿಯೂ ಆದ ಒಬ್ಬ ಶ್ರೇಷ್ಠಿಪುತ್ರನಿದ್ದನು. ಆತನು ಆ ಆಷ್ಟಾಹ್ನಿಕಪರ್ವದಲ್ಲೊಂದು ದಿನ ಅಲ್ಲಿಯ ರಾಜ್ಯೋದ್ಯಾನಕ್ಕೆ ಹೋಗಿ ಗುಪ್ತರೀತಿಯಿಂದ ಒಂದು ಕುರಿಮರಿಯನ್ನು ಕೊಂದು ಅದನ್ನು ಭಕ್ಷಿಸಿ ಅದರ ಎಲಬುಗಳನ್ನು ಅಲ್ಲಿ ಒಂದೆಡೆ ಬಿಸಾಡಿ ಹೊರಟು ಹೋದನು. ಈ ಹಿಂಸೆಯ ವಾರ್ತೆಯು ರಾಜನಿಗೆ ತಿಳಿದು ಹಿಂಸಕನು ಯಾರೆಂದು ಹುಡುಕುವುದಕ್ಕೋಸ್ಕರ ಕೋತವಾಲರನ್ನು ನಿಯಮಿಸಿದ್ದನು. ಇತ್ತ ಆ ಶ್ರೇಷ್ಠಿಪುತ್ರನು ಕುರಿಯನ್ನುಕೊಂದು ಭಕ್ಷಿಸುವಾಗ ಆ ಉದ್ಯಾನದಲ್ಲಿದ್ದ ವನಪಾಲಕನು ಒಂದು ಮರದ ಕೆಳಗೆ ಮರೆಯಾಗಿದ್ದು ನೋಡಿದವನಾದ್ದರಿಂದ ಈ ವಿಷಯವನ್ನು ರಾತ್ರಿ ಮನೆಯಲ್ಲಿ ತನ್ನ ಹೆಂಡತಿಯೊಡನೆ ಹೇಳುತ್ತಿದ್ದನು. ಇದನ್ನು ಕೋತವಾಲರು ಕೇಳಿ ರಾಜನಿಗೆ ನಿವೇದಿಸಿದರು. ಆಗ ರಾಜನು ಪಾಪಿಯಾದ ಧರ್ಮನೆಂಬ ಶ್ರೇಷ್ಠಿಪುತ್ರನ ಮೇಲೆ ಕೋಪಗೊಂಡು ಯಮದಂಡನೆಂಬ ಕೋತವಾಲನನ್ನು ಕರೆಯಿಸಿ, ಆ ಶ್ರೇಷ್ಠಿಪುತ್ರನನ್ನು ಶೂಲಕ್ಕೆ ಹಾಕಿಸುವಂತೆ ಆಜ್ಞಾಪಿಸಿದನು. ರಾಜಾಜ್ಞೆಯಂತೆ ಕೋತವಾಲನು ಶ್ರೇಷ್ಠಿಪುತ್ರನನ್ನು ಕೂಡಲೇ ಹಿಡಿದು ತಂದು ಆ ಸ್ಥಾನಕ್ಕೆ ಕರಕೊಂಡು ಹೋಗಿ ಯಮಪಾಲನೆಂಬ ಚಾಂಡಾಲನನ್ನು ಕರತರಲು ಸೇವ

ಕರನ್ನು ಕಳುಹಿಸಿದನು. ಸೇವಕರು ಬರುವುದನ್ನು ನೋಡಿ ಚಾಂಡಾಲನು ತನ್ನ ಪತ್ನಿಯೊಡನೆ "ಯಾರಾದರೂ ಬಂದು ನನ್ನನ್ನು ಕೇಳಿದರೆ ಅವರು ಪರಊರಿಗೆ ಹೋಗಿದ್ದಾರೆ ಊರಲ್ಲಿಲ್ಲವೆಂದು ಹೇಳಬೇಕೆ"ಂದು ಹೇಳಿ ತಾನು ಅಡಗಿಕೂತನು.

ಆ ಮೇಲೆ ಕೋತವಾಲನ ಸೇವಕರು ಬಂದು ಕೇಳಲು ಪತ್ನಿಯು ಅವರಿಲ್ಲವೆಂದಳು. ಆಗ ಆ ಸೇವಕರಲ್ಲೊಬ್ಬನು. "ಅಯ್ಯೊ! ಪಾಪಿ! ಇಂದು ಶೇಷ್ಠಿಪುತ್ರನನ್ನು ಕೊಲ್ಲುವ ಪ್ರಸಂಗವು ಬಂದೊದಗಿದೆ. ಬೇಕಾದ ಸುವರ್ಣಾಭರಣಗಳು ಸಿಕ್ಕುತ್ತಿದ್ದವು. ಅವನ ದುರ್ದೈವದಿಂದ ವ್ಯರ್ಥವಾಗಿ ಕಳಕೊಂಡನೆ"ಂದನು. ಇದನ್ನು ಕೇಳಿ ಚಾಂಡಾಲಿನಿಯು ಸುವರ್ಣಾಲಂಕಾರಗಳ ಲೋಭದಿಂದ ಬಾಯಿಯಿಂದ 'ಅವರಿಲ್ಲ, ಪರಊರಿಗೆ ಹೋಗಿರುತ್ತಾರೆ' ಎಂದು ಹೇಳಿ ಹಸ್ತಸಂಜ್ಞೆಯಿಂದ ಅವನು ಅಡಗಿ ಕೂತಿರುವ ಸ್ಥಾನವನ್ನು ತೋರಿಸಿದಳು. ಕೂಡಲೇ ಕೋತವಾಲರು ಅವನನ್ನು ಹುಡುಕಿ ತಂದು ರಾಜಾಜ್ಞೆಯನ್ನು ತಿಳಿಸಿದರು. ಆಗ ಅವನು "ಇಂದು ಚತುರ್ದಶಿಯಾದ್ದರಿಂದ ನನ್ನ ಪ್ರಾಣ ಹೋದರೂ ಜೀವಹಿಂಸೆಯನ್ನು ಮಾಡಲಾರೆನು. ನನಗೆ ನಿಯಮವಿದೆ" ಎಂದನು. ಸೇವಕರು ಈತನ ಮಾತನ್ನು ಕೇಳಿ ಕೂಡಲೇ ಅವನನ್ನು ರಾಜನ ಸಮೀಪಕ್ಕೆ ಕರದೊಯ್ದು "ಮಹಾಸ್ವಾಮಿ! ಇಂದು ಚತುರ್ದಶಿಯಾದ್ದರಿಂದ ಚಾಂಡಾಲನು ಶ್ರೇಷ್ಠಿಪುತ್ರನ ವಧೆಯನ್ನು ಮಾಡಲಾರನಂತೆ" ಎಂದು ಹೇಳಿದರು. ರಾಜನು ಈ ಮಾತನ್ನು ಕೇಳಿ ಆಶ್ಚರ್ಯದಿಂದ, ನೀನು ಹೀಗೆ ನಿಯಮ ಮಾಡಲು ಕಾರಣವೇನೆಂದು ಚಾಂಡಾಲನನ್ನು ವಿಚಾರಿಸಿದನು. ಆಗ ಮಾತಂಗನು ವಿನಯದಿಂದ ನಮಸ್ಕರಿಸಿ, "ಮಹಾಪ್ರಭುಗಳೇ! ನನಗೊಮ್ಮೆ ಸರ್ಪವು ಕಚ್ಚಿ ನಾನು ಮೃತಪ್ರಾಯನಾದೆನು. ನನ್ನನ್ನು ನನ್ನ ಬಂಧುಗಳು ಸತ್ತನೆಂದು ತಿಳಿದು ಸ್ಮಶಾನಕ್ಕೊಯ್ದರು. ಅಲ್ಲಿ ನನ್ನ ಪೂರ್ವ ಪುಣ್ಯೋದಯದಿಂದ ಸರ್ವೌಷಧಿಋದ್ಧಿಪ್ರಾಪ್ತರಾದ ಮುನಿಗಳು ಕಾಯೋತ್ಸರ್ಗಧ್ಯಾನವನ್ನು ಮಾಡುತ್ತಾ ನಿಂತಿದ್ದರು. ಆ ಅವರ ಶರೀರವನ್ನು ಸ್ಪರ್ಶಿಸಿ ಬೀಸುತ್ತಿರುವ ಗಾಳಿಯು ನನಗೆ ತಾಗಿ ಆ ಸರ್ಪದಂಶಜನಿತವಾದ

ಮೂರ್ಛೆಯು ನಿವಾರಣೆಯಾಗಿ ನಾನು ಮೊದಲಿನಂತೆ ಪ್ರಬುದ್ಧನಾದೆನು. ಆಗ ನನಗೆ ಈ ಚಮತ್ಕೃತಿಯನ್ನು ನೋಡಿ ಆಶ್ಚರ್ಯವಾಗಿ ನನಗೆ ಜೈನಧರ್ಮ ದಲ್ಲಿ ದೃಢವಾದ ಭಕ್ತಿಯುಂಟಾಯಿತು. ಆ ಮೇಲೆ ನಾನು ಇವರಿಂದ ಯಾವ ದಾದರೊಂದು ನಿಯಮವನ್ನು ಸ್ವೀಕರಿಸಿಕೊಂಡು ನನ್ನ ಆತ್ಮಕಲ್ಯಾಣವನ್ನು ಮಾಡಿಕೊಳ್ಳಬೇಕೆಂದು ಯೋಚಿಸಿ, ನಾನವರಿಂದ ಕೇವಲ ಚತುರ್ದಶಿಯ ದಿವಸದಲ್ಲಿ ಹಿಂಸೆ ಮಾಡುವುದಿಲ್ಲವೆಂದು ನಿಯಮ ಮಾಡಿರುವೆನು. ಆದ್ದರಿಂದ ಇಂದು ಈ ಶ್ರೇಷ್ಠಿಯಪುತ್ರನನ್ನ ಕೊಲ್ಲಲಾರೆನೆ"ಂದನು. ರಾಜನು ಈ ಮಾ- ತಂಗನ ನಿರ್ಭಯವಾದ ಮಾತನ್ನು ಕೇಳಿ ಬಹಳಕೋಪಗೊಂಡು, ಧಿಃಕ್ಕಾರ ಸ್ವರದಿಂದ "ಹಾ ! ಚಾಂಡಾಲನಿಗೆ ಎಂತಹ ವ್ರತ!" ಎಂದು ತಿರಸ್ಕರಿಸಿ, ಅವರಿಬ್ಬ [ಚಾಂಡಾಲ ಮತ್ತು ಶ್ರೇಷ್ಠಿಪುತ್ರ] ರನ್ನೂ ಬಂಧಿಸಿ ಶಿಂಶುಮಾರ ವೆಂಬ ನದಿಯಲ್ಲಿ ಬಿಸಾಡಿ ಬರುವಂತೆ ಆಜ್ಞಾಪಿಸಿದನು

ಇತ್ತ ರಾಜಾಜ್ಞೆಯಂತೆ ಕೂಡಲೇ ಕೋತವಾಲನು ಅವರಿಬ್ಬರನ್ನೂ ಬಂಧಿಸಿ ಭಯಂಕರವಾದ ಜಲಚರ ಪ್ರಾಣಿಗಳಿಂದ ಭರಿತವಾದ ಶಿಂಶು ಮಾರವೆಂಬ ನದಿಯಲ್ಲಿ ಬಿಸುಟನು. ಪಾಪಿಯೂ ಧರ್ಮಹೀನನೂ ಆದ ಶ್ರೇಷ್ಠಿಪುತ್ರನನ್ನೂ ಕೂಡಲೇ ಜಲಚರಪ್ರಾಣಿಗಳು ಭಕ್ಷಿಸಿದುವು. ಪರಂತು ದೃಢವ್ರತಿಯಾದ ಯಮಪಾಲ—ಮಾತಂಗನ ವ್ರತದ ಮಹಿಮೆಯಿಂದ ಅಲ್ಲಿಯ ಜಲದೇವತೆಗಳು ಅವನನ್ನು ರಕ್ಷಿಸಿ, ಅವನನ್ನೊಂದು ಸುಂದರವಾದ ಸಿಂಹಾಸನದಲ್ಲಿ ಕುಳ್ಳಿರಿಸಿ, ಬಹಳ ಆನಂದದಿಂದ ಜಯಘೋಷವನ್ನು ಮಾಡುತ್ತಾ ಶುದ್ಧವಾದ ಜಲದಿಂದ ಆತನಿಗೆ ಅಭಿಷೇಕವನ್ನು ಮಾಡಿ ದಿವ್ಯವಾದ ವಸ್ತ್ರಾಭರಣಗಳಿಂದಲಂಕರಿಸಿ ಪೂಜಿಸಿದರು.

ಇತ್ತ ಈ ವಾರ್ತೆಯನ್ನು ರಾಜನು ಕೇಳಿ ಆಶ್ಚರ್ಯದಿಂದ ಪ್ರತ್ಯಕ್ಷ ವಾಗಿ ನೋಡುವುದಕ್ಕೋಸ್ಕರ ಅಲ್ಲಿಗೆ ಬಂದು ಈ ಮಾತಂಗನ ವೈಭವ ವನ್ನು ನೋಡಿ ಸಂತೋಷದಿಂದ ಮತ್ತು ಪೂಜ್ಯಭಾವದಿಂದ ಚಾಂಡಾಲ ನನ್ನು ಗೌರವಿಸಿ ವಿನಯದಿಂದ ಕ್ಷಮೆಯನ್ನೂ ಕೇಳಿದನು.

ಈ ಕಥೆಯ ಸಾರಾಂಶವೇನಂದರೆ ಚಾಂಡಾಲನಂತೆ ಜೈನಧರ್ಮ

ದಲ್ಲಿ ದೃಢವಾದ ನಂಬಿಕೆಯನ್ನಿಟ್ಟು ವ್ರತಗಳನ್ನು ಪರಿಪಾಲಿಸಬೇಕು. ಯದ್ಯಪಿ ಚಾಂಡಾಲನು ಜಾತಿಯಲ್ಲಿ ಹೀನನಾದರೂ ದೃಢವಾದ ಸಮ್ಯಕ್ತ್ವ ಮತ್ತು ಅಹಿಂಸಾಣುವ್ರತ ಇವುಗಳ ಮಹಿಮೆಯಿಂದ ದೇವತೆಗಳಿಂದಲೂ ಸತ್ಕರಿಸಲ್ಪಟ್ಟನು. ಆದಕಾರಣ ಸಮ್ಯಕ್ತ್ವವಂತರನ್ನು ಸತ್ಕರಿಸಬೇಕೆಂದ ಭಿಪ್ರಾಯವು. ಇನ್ನು ಕ್ರಮಪ್ರಾಪ್ತವಾದ ಸತ್ಯಾಣುವ್ರತದಲ್ಲಿ ಪ್ರಸಿದ್ಧ ವಾದ ಧನದೇವಶ್ರೇಷ್ಠಿಯ ಕಥೆಯು ಪ್ರಾರಂಭಿಸಲ್ಪಡುತ್ತದೆ.

## ಧನದೇವಶ್ರೇಷ್ಠಿಯ ಕಥೆ.

ಪೂರ್ವದಲ್ಲಿ ಈ ಜಂಬೂದ್ವೀಪದ ಪೂರ್ವವಿದೇಹದಲ್ಲಿರುವ ಪುಷ್ಕ ಲಾವತಿಯೆಂಬ ದೇಶದಲ್ಲಿ ಪುಂಡರೀಕಿಣೀಯೆಂಬ ನಗರವಿತ್ತು. ಅಲ್ಲಿ ಧನದೇವ ಮತ್ತು ಜಿನದೇವನೆಂಬ ವರ್ತಕರೀರ್ವರು ಇರುತ್ತಿದ್ದರು. ಅವರಲ್ಲಿ ಧನದೇವನು ಸತ್ಯವಾದಿಯೂ ಸಾಧುವೂ ಆಗಿದ್ದನು. ಜಿನದೇವನು ದುಷ್ಟನೂ ಅತಿಕಪಟಿಯೂ ಆಗಿದ್ದನು. ಒಂದು ದಿವಸ ಅವರಿಬ್ಬರೂ ನಿಶ್ಚೈಸಿ ಕೊಂಡರೇನಂದರೆ, "ನಾವೀರ್ವರೂ ದ್ರವ್ಯಸಂಪಾದನೆಗೋಸ್ಕರ ಪರದೇ ಶಕ್ಕೆ ಹೋಗಬೇಕು ಅದರಿಂದ ಪ್ರಾಪ್ತವಾದ ದ್ರವ್ಯದಲ್ಲಿ ನಾವು ಸಮಾಂ ಶವಾಗಿ ವಿಭಾಗ ಮಾಡಿಕೊಳ್ಳಬೇಕು" ಎಂದು ಮಾತನಾಡಿಕೊಂಡು ಪರದೇಶಕ್ಕೆ ವ್ಯಾಪಾರನಿಮಿತ್ತವಾಗಿ ಹೊರಟುಹೋದರು. ಪರಂತು, ಧನದೇವನು ಸಾಧುಪರಿಣಾಮುದವನಾದುದರಿಂದ ಲೇಖನ ಮೂಲಕ ಯಾವ ನಿಶ್ಚಯವನ್ನೂ ಮಾಡಿಕೊಂಡಿರಲಿಲ್ಲ. ಅದಲ್ಲದೆ ತಾನು ಸತ್ಯವಾದಿ ಯಾದುದರಿಂದ ಜಿನದೇವನು ವಂಚನೆಯನ್ನು ಮಾಡಲಾರನೆಂದು ಭಾವಿ ಸಿಕೊಂಡಿದ್ದನೋ ಏನೋ! ಇರಲಿ. ಆ ಮೇಲೆ ಅವರೀರ್ವರೂ ತಮ್ಮ ಚಾತುರ್ಯದಿಂದ ಬಲುದ್ರವ್ಯಸಂಪಾದನೆಯನ್ನು ಮಾಡಿಕೊಂಡು ವಾಪಾ ಸು ಊರಿಗೆ ಬಂದನಂತರ ಮೊದಲಿನ ನಿಶ್ಚಯದಂತೆ ಸಂಪಾದಿಸಲ್ಪಟ್ಟ ದ್ರವ್ಯವನ್ನು ವಿಭಾಗ ಮಾಡಿಕೊಳ್ಳುವುದಕ್ಕೆ ಜಿನದೇವನು ಸಮ್ಮತಿಸಲಿಲ್ಲ. "ನಾನೇನಾದರೂ ಪ್ರಾಪ್ತವಾದ ದ್ರವ್ಯದಲ್ಲಿ ಅರ್ಧಾಂಶವನ್ನು ನಿನಗೆ ಕೊಡುತ್ತೇನೆಂದು ಒಪ್ಪಲಿಲ್ಲವು. ಪರಂತು ನಿನ್ನ ಯೋಗ್ಯತೆಗೆ ಅನುಸಾರ ವಾಗಿ ಏನಾದರೂ ಕೊಡುತ್ತೇನೆಂದು ಹೇಳಿರುವೆನು. ಆದಕಾರಣ ನಿನಗೆ

ಅರ್ಧಾಂಶ ಸಿಕ್ಕಲಾರದು. ಬೇಕಾದರೆ ಸ್ವಲ್ಪ ಹಣವನ್ನು ಕೊಡುವೆನು ತೆಗೆದುಕೋ" ಎಂದನು ಜಿನದೇವನು ಹೇಳಿ ಸ್ವಲ್ಪ ಹಣವನ್ನು ಧನದೇವ ನಿಗೆ ಕೊಟ್ಟನು. ಆದರೆ ಆತನು ಅದನ್ನು ಗ್ರಹಣೆ ಮಾಡಲಿಲ್ಲವು. ಧನ ದೇವನು ಈ ವಿಷಯವನ್ನು ಊರಿನ ಪ್ರಮುಖರೊಡನೆ, ಹೇಳಿದರೂ ಜಿನದೇವನು ಯಾರ ಮಾತನ್ನೂ ಕೇಳದಿರುವುದರಿಂದ ಏನೂ ಫಲಕಾರಿ ಯಾಗಲಿಲ್ಲ. ಕೊನೆಗೆ ಧನದೇವನು ರಾಜನ ಹತ್ತಿರ ಹೋಗಿ ನಿವೇದಿಸಿ ಕೊಂಡನು. ರಾಜನು ಉಭಯಪಕ್ಷದವರ ಮಾತನ್ನು ಕೇಳಿ ಇವರಲ್ಲಿ ಸತ್ಯವಾದಿ ಯಾರು? ವಂಚಕನು ಯಾರು? ಎಂದು ತಿಳಿಯಲು ಅಸಮ ರ್ಥನಾಗಿ, ಆ ಮೇಲೆ ಅಗ್ನಿಪರೀಕ್ಷೆಯನ್ನು ಮಾಡಬೇಕೆಂದನು. "ನಿಮ್ಮಿರ್ವರ ಕೈಯ ಮೇಲ್ಭಾಗದಲ್ಲಿ ಪ್ರಜ್ವಲಿಸುತ್ತಿರುವ ಬೆಂಕಿಯ ನ್ನಿಡಬೇಕು. ಯಾವನ ಹಸ್ತವು ಸುಡಲ್ಪಡುವುದಿಲ್ಲವೋ ಅವನು ಸತ್ಯ ವಾದಿಯು. ಸುಡಲ್ಪಟ್ಟವನು ವಂಚಕನು." ಎಂದು ಹೇಳಲು ಜಿನದೇವನು ಬಹಳ ವ್ಯಸನಾಕ್ರಾಂತನಾಗಿ ಪಶ್ಚಾತ್ತಾಪದಿಂದಿದ್ದನು. ಪರಂತು ಧನದೇ ವನು ಸತ್ಯವಾದಿಯಾದುದರಿಂದ ಏನೂ ಹೆದರದೆ ಮೊದಲಿನಂತೆ ಶಾಂತ ವೃತ್ತಿಯಿಂದಿದ್ದನು. ಪರಂತು ಇವರೀರ್ವರ ಮುಖಚರ್ಯವನ್ನು ನೋಡಿ ರಾಜನು ಇದರ ನಿಜಾಂಶವನ್ನು ತಿಳಿದವನಾದರೂ, ಪೂರ್ವೋಕ್ತವಾದ ಅಗ್ನಿಪರೀಕ್ಷೆಯನ್ನು ಮಾಡಲು ಜಿನದೇವನ ಹಸ್ತವು ದಗ್ಧವಾಯಿತು. ಧನದೇವನ ಹಸ್ತವು ಸುಡಲಿಲ್ಲವು. ಇದರಿಂದ ಧನದೇವನು ಸತ್ಯವಾದಿ ಯೆಂದೂ ಜಿನದೇವನು ವಂಚಕನೆಂದೂ ರಾಜನು ತಿಳಿದು, ಜಿನದೇವನ ಮೇಲೆ ಕೋಪಗೊಂಡು ಗದರಿಸಿ ಎಲ್ಲಾ ದ್ರವ್ಯವನ್ನು ಧನದೇವನಿಗೆ ಕೊಡಿಸಿದನು. ನಗರವಾಸಿಗಳೆಲ್ಲರೂ ಧನದೇವನ ಸತ್ಯವಾದಿತ್ವವನ್ನು ನೋಡಿ ಆಶ್ಚರ್ಯಚಕಿತರಾಗಿ ಸಂತೋಷದಿಂದ ಆತನನ್ನು ಬಹಳವಾಗಿ ಗೌರವಿಸಿದರು. ಇದಾಯ್ತು ಎರಡನೆಯ ಸತ್ಯಾಣುವ್ರತದಲ್ಲಿ ಪ್ರಸಿದ್ಧಿ ಯನ್ನು ಹೊಂದಿದವನ ಚರಿತ್ರೆ, ಮೂರನೆಯ ಅಚೌರ್ಯಾಣುವ್ರತದಲ್ಲಿ ವಾರಿಷೇಣಕುಮಾರನೆಂಬ ಶ್ರೇಣಿಕಮಹಾರಾಜನ ಪುತ್ರನು ಪ್ರಸಿದ್ಧಿಯನ್ನು ಪಡೆದಿರುವನು. ಆತನ ಚರಿತ್ರೆಯನ್ನು ಹಿಂದೆ ಸ್ಥಿತೀಕರಣಾಂಗ ಪ್ರಕರಣ

ದಲ್ಲಿ ವಿವರಿಸಿರುವೆವು. ಆದಕಾರಣ ಈಗ ನೀಲಿಯ ಚರಿತ್ರೆ ಕ್ರಮಪ್ರಾಪ್ತವಾ-ದುದು. ನೀಲಿಯು ಬ್ರಹ್ಮಚರ್ಯಾಣುವ್ರತದಲ್ಲಿ ಪ್ರಸಿದ್ಧಿಯನ್ನು ಪಡೆದಿರುವಳು.

## ನೀಲಿಯೆಂಬ ಶ್ರೇಷ್ಠಿಪುತ್ರಿಯ ಕಥೆ.

ಭರತಕ್ಷೇತ್ರದ ಲಾಟದೇಶದಲ್ಲಿರುವ ಭೃಗುಕಚ್ಛವೆಂಬ ನಗರದಲ್ಲಿ ವಸುಪಾಲನೆಂಬ ರಾಜನು ರಾಜ್ಯವಾಳುತ್ತಿದ್ದನು. ಆ ನಗರದಲ್ಲಿ ಜಿನದತ್ತನೆಂಬ ಶ್ರೇಷ್ಠಿಯೂ ಆತನಿಗೆ ಜಿನದತ್ತೆಯೆಂಬ ಪತ್ನಿಯೂ ಇದ್ದಳು. ಇವರಿಗೆ ಸುಂದರಿಯಾದ ನೀಲಿಯೆಂಬ ಪುತ್ರಿಯಿದ್ದಳು. ಆಕೆಯು ಒಳ್ಳೇ ಚಾರಿತ್ರವಂತಳಾಗಿ ನಿರಂತರ ದಾನಪೂಜಾದಿಗಳಲ್ಲಿ ಮಗ್ನಳಾಗಿದ್ದಳು. ಅದೇ ನಗರದಲ್ಲಿ ಮಿಥ್ಯಾದೃಷ್ಟಿಯಾದ ಸಮುದ್ರದತ್ತನೆಂಬ ಶ್ರೇಷ್ಠಿಯೂ ಆತನಿಗೆ ಸಮುದ್ರದತ್ತೆಯೆಂಬ ಪತ್ನಿಯೂ ಸಾಗರದತ್ತನೆಂಬ ಪುತ್ರನೂ ಇದ್ದರು. ಒಮ್ಮೆ ಜಿನದತ್ತನ ಪುತ್ರಿಯಾದ ನೀಲಿಯು ಜಿನಮಂದಿರದಲ್ಲಿ ಬಹುಭಕ್ತಿಯಿಂದ ಪೂಜೆಯನ್ನು ಮಾಡಿ ಕಾಯೋತ್ಸರ್ಗ ಧ್ಯಾನವನ್ನು ಮಾಡುತ್ತಿರುವಾಗ, ಈ ಸಮುದ್ರದತ್ತನ ಮಗನಾದ ಸಾಗರದತ್ತನು ತನ್ನ ಮಿತ್ರರೊಡನೆ ಅಲ್ಲಿಗೆ ಬಂದನು. ಅಲ್ಲಿ ಆಕೆಯನ್ನು ನೋಡಿ ಮೋಹಿತನಾಗಿ, "ಓಹೋ! ಇವಳು ಯಾರು ದೇವಕನ್ಯೆಯೋ? ಅಥವಾ ವಿದ್ಯಾಧರಿಯೋ? ಮಾನುಷ ಸ್ತ್ರೀಯರಲ್ಲಿ ಇಂತಹ ಸುಂದರಿಯು ಇರುವುದು ದುರ್ಲಭ" ಎಂದು ಹೇಳಿದನು. ಇಷ್ಟರಲ್ಲಿ ಆತನ ಮಿತ್ರನಾದ ಪ್ರಿಯದತ್ತನು "ಇವಳು ದೇವಾಂಗನೆಯೂ ಅಲ್ಲ. ವಿದ್ಯಾಧರಿಯೂ ಅಲ್ಲ. ಇಲ್ಲಿಯ ಜಿನದತ್ತಶ್ರೇಷ್ಠಿಯ ಪುತ್ರಿಯು ಇವಳ ಹೆಸರು ನೀಲಿ" ಎಂದು ಹೇಳಿದನು. ಅದನ್ನು ಕೇಳುತ್ತಲೇ ಆಕೆಯಲ್ಲಿ ಲುಬ್ಧನಾಗಿ "ಇವಳು ನನಗೆ ಲಭಿಸುವ ಬಗೆ ಹೇಗೆ?" ಎಂದು ಚಿಂತಾತುರನಾಗಿ ತನ್ನ ಮಿತ್ರರೊಡನೆ ಹಿಂತಿರುಗಿ ಮನೆಗೆ ಬಂದನು. ಪರಂತು ಮಾಡುವುದೇನು? ಅಹರ್ನಿಸಿ ನೀಲಿಕುಮಾರಿಯನ್ನೇ ಸ್ಮರಿಸುತ್ತಾ ಅನ್ನಾಹಾರಗಳ ಇಚ್ಛೆಯಿಲ್ಲದೆ ದಿನೇದಿನೇ ಕೃಶವಾಗುತ್ತಾ ಬಂದನು. ಇದನ್ನು ನೋಡಿ ತಂದೆಯು ನೀನು ಈ ರೀತಿಯಾಗಿ ಕೃಶವಾಗಲು ಕಾರಣವೇನೆಂದು

ಕೇಳಲು, ಆಗ ಸಾಗರದತ್ತನು ತನ್ನ ಮನೋಗತಾಭಿಪ್ರಾಯವನ್ನು ತಂದೆಗೆ ತಿಳಿಸಿದನು. ಇದನ್ನು ಕೇಳಿ ಸಮುದ್ರದತ್ತನು, "ಪರಂತು ಇದಾಗುವ ಉಪಾಯವು ಹೇಗೆ? ಜಿನದತ್ತನು ಜೈನಧರ್ಮದವನಾದುದರಿಂದ ತನ್ನ ಪುತ್ರಿಯನ್ನು ಜೈನರಿಗೆ ಕೊಡುವನಲ್ಲದೆ, ನಮ್ಮಂತಹ ಬೌದ್ಧಧರ್ಮಿಗಳಿಗೆ ಕೊಡಲಾರನು. ಈ ವಿಷಯದಲ್ಲಿ ನೀನು ಚಿಂತಿಸಿ ಫಲವಿಲ್ಲವೆ"ಂದನು. ಆಗ ಸಾಗರದತ್ತನು "ತಾವು ಅನ್ನುವುದೇನೋ ನಿಜ. ಆದರೆ ತಾವು ಈ ವಿಷಯದಲ್ಲಿ ಸಂಪೂರ್ಣ ಪ್ರಯತ್ನವನ್ನು ಮಾಡಿ ನೋಡಬೇಕು. ಹ್ಯಾಗಾದರೂ ಸಾಧ್ಯವಾಗದೆ ಹೋದರೆ ಜನ್ಮಾವಧಿ ಆಕೆಯ ನಾಮಸ್ಮರಣೆಯನ್ನು ಮಾಡುತ್ತಾ ದೇಹತ್ಯಾಗ ಮಾಡುವೆ"ನೆಂದನು. ಆಗ ಮಗನ ಈ ರೀತಿಯಾದ ಪ್ರತಿಜ್ಞಾವಚನವನ್ನು ಕೇಳಿ ನಿರುಪಾಯನಾಗಿ ಕೊನೆಗೆ ಅವರೀರ್ವರೂ ಜೈನಧರ್ಮವನ್ನು ಸ್ವೀಕರಿಸಿ ಕಪಟದಿಂದ ವ್ರತ—ನಿಯಮಗಳನ್ನು ಪರಿಪಾಲಿಸುತ್ತಾ ಇದ್ದರು. ಹೀಗಿರಲು ಕೆಲವು ದಿನಗಳ ನಂತರ ಸಮುದ್ರದತ್ತನಿಗೆ ಜಿನದತ್ತನೊಡನೆ ತಮ್ಮ ಮಗಳನ್ನು ನನ್ನ ಪುತ್ರ ಸಾಗರದತ್ತನಿಗೆ ಕೊಡಬೇಕೆಂದನು. ಆಗ ಜಿನದತ್ತನು ಇವರಿಗೆ ಜೈನಧರ್ಮದಲ್ಲಿರುವ ಭಕ್ತಿ—ವಿಶ್ವಾಸಗಳನ್ನು ನೋಡಿ ಅವನ ಇಚ್ಛೆಯಂತೆ ತನ್ನ ಮಗಳನ್ನು ಕೊಟ್ಟು, ಲಗ್ನಸಮಾರಂಭವನ್ನು ಮಾಡಿದನು. ತನ್ನಂತರ ನೀಲಿಯನ್ನು ಸಾಗರದತ್ತನು ತನ್ನ ಮನೆಗೆ ಕರಕೊಂಡು ಬಂದು ಕೆಲವು ದಿವಸ ಮೇಲೆ ತಂದೆ ಮಕ್ಕಳೀರ್ವರೂ ಪೂರ್ವದಂತೆ ಬೌದ್ಧಧರ್ಮವನ್ನು ಸ್ವೀಕರಿಸಿದರು. ವಾಚಕರೇ! ಶ್ವಾನನ ಉದರದಲ್ಲಿ ಅಮೃತಕ್ಕೆ ಸಮಾನವಾದ ಘೃತವು ಸಮಾವೇಶವಾಗದಿರುವಂತೆ ಆ ಪಾಪಿ—ದುಷ್ಟರಾದ ಜೀವಿಗಳಿಗೆ ಸದ್ಧರ್ಮದಲ್ಲಿ ಭಕ್ತಿಯುಂಟಾಗುವುದು ಅದೆಂತು?

ಇತ್ತ ಜಿನದತ್ತಶ್ರೇಷ್ಠಿಗೆ ಕೆಲವು ದಿವಸಗಳನಂತರ ಇವರ ಕಪಟಜಾಲವು ತಿಳಿದು ಬಹಳ ಪಶ್ಚಾತ್ತಾಪವನ್ನು ಮಾಡಿದನು. ಪರಂತು ಪ್ರಯೋಜನವೇನು? ಇಲ್ಲಿ ನೀಲಿಯೂ ಇವರ ಮಿಥ್ಯಾಚರಣೆಯನ್ನು ನೋಡಿ ವ್ಯಸನದಿಂದ ಸಹಿಸಲಾರದೆ ತಾನೊಂದು ಪ್ರತ್ಯೇಕವಾದ ಮನೆಯಲ್ಲಿ

ತನ್ನ ನಿತ್ಯನಿಯಮಗಳನ್ನು ಮಾಡುತ್ತಾ ಇರುತ್ತಿದ್ದಳು. ಆದರೆ ಸಮುದ್ರ ದತ್ತನು ಈಕೆಯನ್ನು ತನ್ನ ಬೌದ್ಧಧರ್ಮಿಯಳನ್ನಾಗಿ ಮಾಡಬೇಕೆಂಡು ಬಹಳ ಪ್ರಯತ್ನವನ್ನು ಮಾಡುತ್ತಿದ್ದನು. ಒಂದು ದಿವಸ ಬೌದ್ಧಗುರುಗಳನ್ನು ಬರಮಾಡಿ ನೀಲಿಯನ್ನು ಕುರಿತು, "ನೀನು ಇವರಿಗೆ ಪಕ್ವಾನ್ನ ಭೋಜನವನ್ನು ಮಾಡಿಸಬೇಕೆ"ಂದನು. ನೀಲಿಯು ಮಾವನ ಈ ರೀತಿಯಾದ ಆಜ್ಞೆಯನ್ನು ಮೀರಲಾರದೆ ಆ ಗುರುಗಳಿಗೆ ಬಹಳ ಸತ್ಕಾರವನ್ನು ಮಾಡಿದಳು. ಪರಂತು ನನ್ನ ಮಾವನು ಯಾವಾಗಲೂ ನಮ್ಮ ಗುರುಗಳು ಸರ್ವಜ್ಞಾನಸಂಪನ್ನರೆಂದು ಪ್ರಶಂಸಿಸುತ್ತಾರೆ. ಇಂದು ಅವರನ್ನು ಪರೀಕ್ಷಿಸಬೇಕು, ಎಂದು ಯೋಚಿಸಿ, ಆ ಗುರುಗಳ ಚರ್ಮದ ಪಾದರಕ್ಷೆಯಲ್ಲಿ [ಜೋಡು] ಒಂದನ್ನು ಹೊರಗಿನಿಂದ ತರಿಸಿ, ಅದನ್ನು ಸಣ್ಣ ಸಣ್ಣ ಚೂರನ್ನಾಗಿ ಮಾಡಿಸಿ ಅದರ ಪರಮಾನ್ನವನ್ನು ಮಾಡಿದಳು. ಎಲ್ಲಾ ಪಾಕವು ಸಿದ್ಧವಾದ ಮೇಲೆ ಆ ಬೌದ್ಧಸನ್ಯಾಸಿಗಳನ್ನು ಭೋಜನಕ್ಕೆ ಕರೆದಳು. ಆಗ ಅವರೆಲ್ಲರೂ ಏನೂ ತಿಳಿಯದವರಾಗಿ ಬಹಳ ಪ್ರೀತಿಯಿಂದ ಪರಮಾನ್ನ ಮೊದಲಾದ ಎಲ್ಲಾ ಆಹಾರಗಳನ್ನು ಭುಂಜಿಸಿದರು. ಆದರೆ, ನೀಲಿಗೆ ಇದನ್ನು ನೋಡಿ ಬಹಳ ಆಶ್ಚರ್ಯವಾಯಿತು. ಆಗ ಆಕೆಯು 'ಬೌದ್ಧಗುರುಗಳಿಗೆ ಏನೂ ಜ್ಞಾನವಿಲ್ಲ. ಇವರು ಶುದ್ಧಮಿಥ್ಯಾದೃಷ್ಟಿಗಳು. ಇವರಿಗೆ ಸಮ್ಯಗ್ಜ್ಞಾನವಿರುತ್ತಿದ್ದರೆ ಇಂತಹ ಅಭಕ್ಷ್ಯಾಹಾರವನ್ನು ಪರೀಕ್ಷಿಸದೆ ಸೇವಿಸುತ್ತಿರಲಿಲ್ಲ. ಇವರು ನಿಜವಾಗಿಯೂ ಮೂರ್ಖರು. ಇಂತಹ ಕಪಟಿಗಳೂ ವಿಚಾರಶೂನ್ಯರೂ ಆದ ಗುರುಗಳಲ್ಲಿ ಮತ್ತು ಬೌದ್ಧಧರ್ಮದಲ್ಲಿ ನನ್ನ ಮಾವನೂ ಪತಿಯೂ ಹೇಗೆ ಶ್ರದ್ಧೆಯನ್ನಿಟ್ಟಿರುವರೋ ? ನಾನರಿಯೆ !'' ಎಂದು ವಿಚಾರವನ್ನು ಮಾಡುತ್ತಿದ್ದಳು. ಆಗ ಅವರು ಭೋಜನಾನಂತರ ಹೊರಡಲುದ್ಯುಕ್ತರಾಗಿ ಪಾದರಕ್ಷೆಗಳನ್ನು ಹುಡುಕುವಾಗ ಅದರಲ್ಲಿ ಒಂದೊಂದು ಪಾದರಕ್ಷೆಗಳು ಇರಲಿಲ್ಲ. ಯಾರೊಡನೆ ವಿಚಾರಿಸಿದರೂ ನಮಗೆ ಗೊತ್ತಿಲ್ಲವೆಂದರು. ಕೊನೆಗೆ ನೀಲಿಯ ಹತ್ತಿರ ಕೇಳಲು "ನನಗೇನು ಗೊತ್ತು ? ನೀವು ಸರ್ವಜ್ಞಾನಸಂಪನ್ನರಾಗಿದ್ದು ನಿಮ್ಮ ಪಾದರಕ್ಷೆಗಳು ಎಲ್ಲಿವೆಯೆಂದು ತಿಳಿಯಲಾಗುವುದಿಲ್ಲವೇ ? ಒಂದು ವೇಳೆ ಅದು

ನಿಮ್ಮ ಅಗಾಧಜ್ಞಾನಕ್ಕೆ ಗೋಚರವಾಗದಿದ್ದರೆ ನಾನು ಹೇಳುವೆ''ನೆಂದು, ''ಅವು ಬೇರೆಕಡೆಯಲ್ಲಿಲ್ಲದೆ ನಿಮ್ಮ ನಿಮ್ಮ ಉದರದಲ್ಲಿದೆ.'' ಎಂದಳು. ಈ ಮಾತನ್ನು ಕೇಳುತ್ತಲೇ ಆ ಗುರುಗಳಿಗೆ ಬಹಳ ಆಶ್ಚರ್ಯವಾಗಿ ನಾವೀಗ ಪರೀಕ್ಷಿಸಿ ನೋಡಬೇಕೆಂದು ಎಲ್ಲರೂ ವಮನ ಮಾಡಿದರು. ಆಗ ಅದರಲ್ಲಿರುವ ಚರ್ಮದ ಚೂರುಗಳನ್ನು ನೋಡಿ, ಅವರಿಗೆ ಅಧಿಕವಾದ ಕ್ರೋಧವುಂಟಾಗಿ ನೀಲಿಗೆ ಹಲವು ವಿಧದ ತಿರಸ್ಕಾರವಚನ—ಶಾಪಗಳನ್ನು ಕೊಡಲಾರಂಭಿಸಿದರು. ಮತ್ತು ಈಕೆಯು ಮಾಡಿದ ಅಪಮಾನವನ್ನು ಸಮುದ್ರದತ್ತನಿಗೂ ತಿಳಿಸಿದರು. ಇದನ್ನು ಕೇಳಿ ಆತನೂ ಬಹಳ ಕೋಪಗೊಂಡನು. ಪರಂತು ಮಾಡುವುದೇನು ? ಆ ಮೇಲೆ ಗುರುಗಳು ಈ ರೀತಿಯಾದ ಅಪಮಾನವನ್ನು ಮಾಡಿಸಿಕೊಂಡು ಸ್ವಸ್ಥಾನಕ್ಕೆ ತೆರಳಿದರು.

ಇತ್ತ ನೀಲಿಯು ಈ ರೀತಿಯಾಗಿ ನಮ್ಮ ಬೌದ್ಧಭಿಕ್ಷುಕರಿಗೆ ಮಾಡಿದ ಅಪಮಾನವು ಸಾಗರದತ್ತನ ಭಗಿನಿಗೆ ಸಹನವಾಗದೆ ಆಕೆಯು ನೀಲಿಯ ಮೇಲೆ ಇಲ್ಲದ ಅಪವಾದವನ್ನು ಹೇಳಿದಳೇನಂದರೆ, ''ನೀಲಿಯು ಒಬ್ಬ ಜಾರನೊಡನೆ ವ್ಯಭಿಚಾರಕರ್ಮವನ್ನು ಮಾಡಿಸಿದಳು'' ಎಂದು, ಲೋಕದಲ್ಲಿ ಈ ಭಯಂಕರ ವಾರ್ತೆಯನ್ನು ಹಬ್ಬಿಸಿದಳು. ನೀಲಿಯು ಈ ಸಮಾಚಾರವನ್ನು ಕೇಳಿ ಬಹಳ ವ್ಯಸನಾಕ್ರಾಂತಳಾಗಿ, ''ನನಗುಂಟಾದ ಈ ಅಪವಾದವು ನಿವಾರಣೆಯಾಗುವವರೆಗೆ ಅನ್ನಪಾನಾದಿ ಆಹಾರಗಳನ್ನು ಸೇವಿಸಲಾರೆ''ನೆಂದು ಪ್ರತಿಜ್ಞೆ ಮಾಡಿ ಜಿನಮಂದಿರದಲ್ಲಿ ದೃಢಚಿತ್ತಳಾಗಿ ಕಾಯೋತ್ಸರ್ಗಧ್ಯಾನ ಮಾಡುತ್ತಾ ನಿಂತಳು. ಈ ವಿಚಾರವು ಅಲ್ಲಿಯ ನಗರದೇವತೆಗೆ ತಿಳಿದು, ರಾತ್ರಿಯಲ್ಲಿ ಇವಳ ಸಮೀಪಕ್ಕೆ ಬಂದು ಬಹಳ ನಮ್ರತೆಯಿಂದ, ''ಎಲೈ ಮಹಾಸತಿಯೇ! ನೀನು ಭಯಪಡಬೇಡ. ನಿನ್ನ ಸತೀತ್ವವೇ ನಿನ್ನನ್ನು ರಕ್ಷಿಸುವುದು. ನಾನು ಈಗ ನಗರದ ಹೆಬ್ಬಾಗಿಲನ್ನು ಬಂಧಿಸುವೆನು. ನಾನು ಇಂದಿನ ರಾತ್ರಿಯಲ್ಲಿ ಇಲ್ಲಿಯ ರಾಜನು, ಮಂತ್ರಿಯು ಮತ್ತು ನಗರವಾಸಿಗಳು ಇವರಿಗೆಲ್ಲಾ ಸ್ವಪ್ನವುಂಟಾಗುವಂತೆ ಮಾಡುವೆನು. ಏನಂದರೆ, 'ಪತಿವ್ರತಾಸ್ತ್ರೀಯರ ವಾಮ—ಪಾದಸ್ಪರ್ಶದಿಂದ ಈ ಬಾಗಿಲು ತೆರೆಯಲ್ಪಡುವುದು, ಎಂದು ಸ್ವಪ್ನವಾದರೆ ರಾಜನು ಎಲ್ಲಾ

ಸ್ತ್ರೀಯರೊಡನೆ ನಿನ್ನನ್ನೂ ಬರಮಾಡುವನು. ಆಗ ನೀನು ಹೋಗಿ ನಿನ್ನ ಎಡದ ಪಾದದಿಂದ ಬಾಗಿಲನ್ನು ಸ್ಪರ್ಶಿಸಿದರೆ ಬಾಗಿಲು ತೆರೆಯಲ್ಪಡುತ್ತದೆ. ಆಗ ನಿನ್ನ ಅಪವಾದವು ದೂರವಾಗುವುದು'' ಎಂದು ಹೇಳಿದ ದೇವತೆಯ ವಚನವನ್ನು ನೀಲಿಯು ಕೇಳಿ ಸಮಾಧಾನಚಿತ್ತಳಾಗಿದ್ದಳು.

ಇಲ್ಲಿ ದೇವತೆಯು ಹೇಳಿದಂತೆ ನಗರದ ಹೆಬ್ಬಾಗಿಲನ್ನು ಬಂಧಿಸಿ ರಾಜನು ಮೊದಲಾದವರಿಗೆ ಸ್ವಪ್ನವನ್ನುಂಟಾಗುವಂತೆ ಮಾಡಿ ಸುಮ್ಮನಿದ್ದಳು. ಮಾರಣೆದಿನ ಬೆಳಗಾಗುತ್ತಲೇ ನಗರರಕ್ಷಕನಾದ ಕೋತವಾಲನಿಂದ ಈ ಬಾಗಿಲು ತೆರೆಯಲಾಗದೆ ಈ ಸಮಾಚಾರವನ್ನು ರಾಜನಿಗೆ ಹೋಗಿ ತಿಳಿಸಿದನು. ಆಗ ರಾಜನಿಗೆ ಮೊದಲಿನ ರಾತ್ರಿಯಲ್ಲುಂಟಾದ ಸ್ವಪ್ನವು ಸ್ಮರಣೆಗೆ ಬಂದು, ಕೂಡಲೇ ನಗರವಾಸಿಗಳಾದ ಸ್ತ್ರೀಯರನ್ನೆಲ್ಲಾ ಬರಮಾಡಿ ಪಾದಸ್ಪರ್ಶವನ್ನು ಮಾಡಿಸಿದರೂ ಬಾಗಿಲನ್ನು ತೆರೆಯಲಿಕ್ಕಾಗಲಿಲ್ಲ. ಆ ಮೇಲೆ ರಾಜನು ಬಹಳ ಚಿಂತಾತುರನಾಗಿ ಯೋಚಿಸುತ್ತಿರುವಲ್ಲಿ ಯಾರೋ ನಾಗರಿಕರು ನೀಲಿಯ ಸಮಾಚಾರವನ್ನು ತಿಳಿಸಲು, ರಾಜನು ಆಕೆಯನ್ನು ಬರಮಾಡಿ ಎಡಕಾಲಿನಿಂದ ದ್ವಾರವನ್ನು ಸ್ಪರ್ಶಿಸುವಂತೆ ಆಜ್ಞಾಪಿಸಿದನು. ಆಕೆಯು ಅವನ ಆಜ್ಞೆಯಂತೆ ವರ್ತಿಸಲು ಕೂಡಲೇ ಬಾಗಿಲು ತೆರೆಯಲ್ಪಟ್ಟಿತು. ಇದರಂತೆ ಇನ್ನುಳಿದ ಎಲ್ಲಾ ಬಾಗಿಲುಗಳು ಇವಳ ಪಾದಸ್ಪರ್ಶದಿಂದ ತೆರೆಯಲ್ಪಟ್ಟದ್ದನ್ನು ನೋಡಿ ರಾಜನು ಆಶ್ಚರ್ಯಚಕಿತನಾಗಿ ಇವಳ ಪಾತಿವ್ರತ್ಯವನ್ನು ಬಹಳವಾಗಿ ಪ್ರಶಂಸಿಸಿದನು. ಮತ್ತು ವಸ್ತ್ರಾಭರಣಗಳಿಂದ ಆಕೆಯನ್ನು ಸನ್ಮಾನಿಸಿ ಕಳುಹಿಸಿಕೊಟ್ಟನು. ಅನಂತರ ನಾಗರಿಕರೆಲ್ಲಾ ಆಕೆಯ ಸತೀತ್ವಧರ್ಮವನ್ನು ಪ್ರಶಂಸಿಸುತ್ತಾ ತಮ್ಮ ತಮ್ಮ ಸ್ಥಾನಕ್ಕೆ ತೆರಳಿದರು.

ಈ ಕಥೆಯ ಸಾರಾಂಶವೇನಂದರೆ, ಪತಿವ್ರತಾಸ್ತ್ರೀಯರ ಶೀಲ ಮಾಹಾತ್ಮ್ಯಕ್ಕೆ ದೇವತೆಗಳೂ ಸಹಾಯಕರಾಗುತ್ತಾರೆ. ಆದುದರಿಂದ ಎಲ್ಲಾ ಸ್ತ್ರೀಪುರುಷರು. ಯಾರಿಗೂ ದ್ವೇಷ ಮಾತ್ಸರ್ಯ ಮೊದಲಾದುವುಗಳಿಂದ ಇಲ್ಲದ ಅಪವಾದವನ್ನು ಹೇಳಬಾರದೆಂದು ಮುಖ್ಯಾಭಿಪ್ರಾಯವು. ಪರಿಗ್ರಹ ಪರಿಮಾಣವ್ರತದಲ್ಲಿ ಜಯಕುಮಾರನು ಪ್ರಸಿದ್ಧಿಯನ್ನು ಹೊಂದಿರುವನು.

## ಜಯಕುಮಾರನ ಕಥೆ.

ಪೂರ್ವದಲ್ಲಿ ಕುರುಜಾಂಗಲದೇಶದ ಹಸ್ತಿನಾಪುರದಲ್ಲಿ ಕುರುವಂಶೋತ್ಪನ್ನನಾದ ಸೋಮಪ್ರಭನೆಂಬ ರಾಜನಿದ್ದನು. ಆತನಿಗೆ ಜಯಕುಮಾರನೆಂಬ ಪುತ್ರನಿದ್ದು ಅವನಿಗೆ ಸುಲೋಚನೆಯೆಂಬ ಭಾರ್ಯೆಯಿದ್ದಳು. ಜಯಕುಮಾರನು ಪರಿಮಿತಪರಿಗ್ರಹಿಯಾಗಿದ್ದು ತನ್ನ ಪತ್ನಿಯಲ್ಲೇ ಆಸಕ್ತನಾಗಿದ್ದನು. ಸುಲೋಚನೆಯನ್ನುಳಿದು. ಇತರ ಸ್ತ್ರೀಯರನ್ನು ತನ್ನ ಸಹೋದರಿಯರೆಂದು ಭಾವಿಸುತ್ತಿದ್ದನು. ಅವನೊಮ್ಮೆ ತನ್ನ ಪತ್ನಿಯೊಡನೆ ಅರಮನೆಯ ಉಪ್ಪರಿಗೆಯ ಮೇಲ್ಭಾಗದಲ್ಲಿರುವಾಗ ಆಕಾಶಮಾರ್ಗದಿಂದ ತನ್ನ ಸ್ತ್ರೀಯೊಡನೆ ವಿಮಾನದಲ್ಲಿ ಹೋಗುತ್ತಿರುವ ಒಬ್ಬ ವಿದ್ಯಾಧರನನ್ನು ನೋಡಿದನು. ಕೂಡಲೇ ಅವನಿಗೆ ಪೂರ್ವಜನ್ಮದ ಸ್ಮರಣೆಯು ಉಂಟಾಗಿ ಪತಿಪತ್ನಿಯರೀರ್ವರೂ ಮೂರ್ಛಿತರಾಗಿ ಬಿದ್ದರು. ಅವರು ಪೂರ್ವಜನ್ಮದಲ್ಲಿ ವಿದ್ಯಾಧರರಾಗಿದ್ದುದರಿಂದ ಆಕಾಶಮಾರ್ಗದಿಂದ ಹೋಗುತ್ತಿರುವ ವಿದ್ಯಾಧರದಂಪತಿಗಳನ್ನು ನೋಡಿ ಅಕಸ್ಮಾತ್ತಾಗಿ ಜಾತಿಸ್ಮರಣೆಯಾಗಿ ಮೂರ್ಛಿತರಾಗಲು ಕಾರಣವಾಗಿತ್ತು. ಆಗ ಕೆಲವುಸಮಯದ ನಂತರ ಅವರು ಜಾಗ್ರತರಾಗಿ ನೋಡುವಷ್ಟರಲ್ಲಿ ಇವರಿಗೆ ಪೂರ್ವಜನ್ಮದಲ್ಲಿ ಪ್ರಾಪ್ತವಾಗಿದ್ದ ವಿದ್ಯಾದೇವತೆಯು ಅಲ್ಲಿಗೆ ಬಂದು ಜಯಕುಮಾರನನ್ನು ಕುರಿತು, ಯೋಗ್ಯವಾದ ಕಾರ್ಯಕ್ಕೆ ಆಜ್ಞೆಯನ್ನೀಯಬೇಕೆಂದು ಪ್ರಾರ್ಥಿಸಿತು. ಆಗ ಆ ದಂಪತಿಗಳೀರ್ವರೂ ನವೀನವಾಗಿ ಸಾಧ್ಯವಾದ ವಿದ್ಯಾಸಾಮರ್ಥ್ಯದಿಂದ ಪೂರ್ವಜನ್ಮದ ಹಿರಣ್ಯವರ್ಮ ಮತ್ತು ಪ್ರಭಾವತಿಯೆಂಬ ವಿದ್ಯಾಧರರ ರೂಪವನ್ನು ಧರಿಸಿಕೊಂಡು ಮೇರುಪರ್ವತ ಮತ್ತು ಕೈಲಾಸ ಪರ್ವತದಲ್ಲಿರುವ ಜಿನಚೈತ್ಯಾಲಯಗಳ ದರ್ಶನನಿಮಿತ್ತವಾಗಿ ಹೊರಟು ಹೋದರು.

ಇತ್ತ ಸೌಧರ್ಮೇಂದ್ರನು ತನ್ನ ಸ್ವರ್ಗದ ಸಭೆಯಲ್ಲಿ ಧರ್ಮೋಪದೇಶವನ್ನು ಮಾಡುತ್ತಿರುವಾಗ ಪ್ರಕರಣಾನುಸಾರ ಪರಿಮಿತಪರಿಗ್ರಹಾಣುವ್ರತದ ವರ್ಣನೆಯು ಬಂತು. ಆಗ ಆತನು ಈ ವ್ರತದಲ್ಲಿ ಜಯಕುಮಾರನು ಪ್ರಸಿದ್ಧನಾಗಿರುವನೆಂದು ಪ್ರಶಂಸಿಸಿದನು. ಇದನ್ನು ಕೇಳಿ ರತಿಪ್ರಭ

ನೆಂಬ ದೇವನಿಗೆ ಸಹನವಾಗದೆ ಅವನನ್ನು ಪರೀಕ್ಷಿಸಬೇಕೆಂದು ತಾನು ಸ್ತ್ರೀರೂಪವನ್ನು ಧರಿಸಿಕೊಂಡು ಮೂರು ನಾಲ್ಕು ದೇವಾಂಗನೆಯರೊಡನೆ ಕೈಲಾಸಪರ್ವತಕ್ಕೆ ಬಂದನು. ಆಗಲೇ ಜಯಕುಮಾರ ಮತ್ತು ಸುಲೋಚನೆಯು ತಮ್ಮ ಪೂಜಾವಿಧಿಯನ್ನು ತೀರಿಸಿ ಅಲ್ಲಿ ಕೂತುಕೊಂಡಿದ್ದರು. ಅಷ್ಟರಲ್ಲಿ ಸ್ತ್ರೀವೇಷಧಾರಿಯಾದ ರತಿಪ್ರಭದೇವನು ಅಲ್ಲಿಗೆ ಬಂದು, "ಎಲೈ ರಾಜಕುಮಾರ ! ನಿನ್ನ ಪತ್ನಿಯಾದ ಸುಲೋಚನೆಯ ಸ್ವಯಂವರದಲ್ಲಿ ನಿನ್ನೊಡನೆ ಘೋರಸಂಗ್ರಾಮವನ್ನು ಮಾಡಿದ ನಮಿಯೆಂಬ ವಿದ್ಯಾಧರನ ಪತ್ನಿಯು ನಾನು. ಸುರೂಪೆಯೆಂದು ನನ್ನ ಹೆಸರು. ನನಗೆ ಎಲ್ಲಾ ವಿಧದ ವಿದ್ಯೆಗಳು ಅವಗತವಾಗಿರುವುವು. ಆದಕಾರಣ ನಿನಗೆ ನಿನ್ನ ರಾಜ್ಯದ ಮತ್ತು ಜೀವನದ ಇಚ್ಛೆಯಿದ್ದರೆ ನನ್ನನ್ನು ಸ್ವೀಕರಿಸು. ನಾನು ಬಹಳ ಅಭಿಲಾಷೆಯಿಂದ ನೀನಿದ್ದಲ್ಲಿಗೆ ಬಂದಿರುವೆನು. ನನ್ನ ಆಶಾಭಂಗವನ್ನು ಮಾಡಬೇಡ" ಎಂಬ ಈ ಮಾಯಾವಿಯಾದ ಸ್ತ್ರೀಯ ಮಾತನ್ನು ಕೇಳಿ, "ಜಯಕುಮಾರನು ಈ ರೀತಿಯಾಗಿ ಹೇಳಬೇಡ. ನನಗೆ ಪರಸ್ತ್ರೀಯರು ಮಾತೃಸಮಾನರು. ಈ ನನ್ನ ನಿಯಮವನ್ನು ಪ್ರಾಣಾಂತ್ಯದ ವರೆಗೂ ಕೆಡಿಸಲಾರೆನು. ನಿನ್ನ ಈ ಸುಂದರವಾದ ರೂಪಕ್ಕೆ ನೀನು ಶೀಲವೆಂಬಾಭರಣದಿಂದ ಭೂಷಿತಳಾಗಿದ್ದರೆ ಇನ್ನೂ ಶೋಭೆಯುಂಟಾಗುತ್ತಿತ್ತು. ಪರಂತು ಈ ನಿಂದ್ಯವಾದ ವಿಚಾರದಿಂದ ನಿನಗೆಂದೂ ಕಲ್ಯಾಣವಾಗಲಾರದು, ಆದುದರಿಂದ ನಿನ್ನ ಈ ದುಷ್ಟವಿಚಾರವನ್ನು ಬಿಟ್ಟು ನಿನ್ನ ಪತಿಯೊಡನೆ ಸತೀತ್ವವನ್ನು ರಕ್ಷಿಸಿಕೊಂಡು ಜಿನಪೂಜೆಯಲ್ಲಿ ತತ್ಪರಳಾಗಿರು'' ಎಂದು ಹೇಳಿ ತಾನು ಕಾಯೋತ್ಸರ್ಗ ಧ್ಯಾನದಲ್ಲಿ ನಿರತನಾದನು. ಇದನ್ನು ನೋಡಿ ಮಾಯಾವಿಯಾದ ದೇವನು ಅವನನ್ನು ತನ್ನ ಧ್ಯಾನದಿಂದ ಚಂಚಲನನ್ನಾಗಿ ಮಾಡಬೇಕೆಂದು ಅವನನ್ನು ಹಲವು ವಿಧದ ಸಂಗೀತ ಹಾವಭಾವ ವಿಲಾಸಾದಿಗಳಿಂದ ನರ್ತನ ಮಾಡಿ ದೃಢವಾಗಿ ಆಲಿಂಗಿಸಿದರೂ ಸಾಧ್ಯವಾಗದೆ ಕೊನೆಗೆ ಭಯಂಕರವಾದ ಉಪಸರ್ಗವನ್ನು ಮಾಡಿದನು. ಆದರೂ ದೃಢವ್ರತಿಯಾದ ಜಯಕುಮಾರನು. ಮೇರುಗಿರಿಯಂತೆ ನಿಶ್ಚಲನಾಗಿರುತ್ತಿರಲು ಆ ದೇವನು ನಿರುಪಾಯನಾಗಿ ತನ್ನ ನಿಜರೂಪವನ್ನು ಪ್ರಕಟಿಸಿ

ಬಹಳ ಸಂತೋಷದಿಂದ, "ನಿನ್ನ ನಿಶ್ಚಲ ಧ್ಯಾನ ಮತ್ತು ಪರಿಮಿತಪರಿಗ್ರಹಾಣುವ್ರತದ ಮಹಿಮೆಯನ್ನು ನೋಡಿ ನಾನು ಬಹಳ ಸಂತುಷ್ಟನಾದೆನು. ನಾನು ಸ್ವರ್ಗದ ರತಿಪ್ರಭನೆಂಬ ದೇವನು. ಸೌಧರ್ಮೇಂದ್ರನು ತನ್ನ ಸಭೆಯಲ್ಲಿ ತಮ್ಮ ಪರಿಗ್ರಹಪರಿಮಾಣದ್ರತದ ವಿಷಯವಾಗಿ ಪ್ರಶಂಸೆ ಮಾಡಿದ್ದರಿಂದ ಅದನ್ನು ಪರೀಕ್ಷಿಸುವುದಕ್ಕಾಗಿ ಬಂದೆನು" ಎಂದು ಹೇಳಿ ಜಯಕುಮಾರನನ್ನು ವಸ್ತ್ರಾಭರಣಗಳಿಂದ ಸತ್ಕರಿಸಿ ನಮಸ್ಕಾರವನ್ನು ಮಾಡಿ ಹೊರಟು ಹೋದನು.

ಅನಂತರ ಜಯಕುಮಾರ—ಸುಲೋಚನೆಯರು ಕೈಲಾಸಪರ್ವತದಿಂದ ಮನೆಗೆ ಬಂದು ಕೆಲವು ಕಾಲ ಗೃಹಸ್ಥಾಶ್ರಮದಲ್ಲಿದ್ದು ಆ ಮೇಲೆ ವೈರಾಗ್ಯದಿಂದ ಜಿನದೀಕ್ಷೆಯನ್ನು ಸ್ವೀಕರಿಸಿ, ಘೋರ ತಪಸ್ಸನ್ನು ಮಾಡಿ ಜಯಕುಮಾರನು ಮುಕ್ತಿಯನ್ನು ಹೊಂದಿದನು.

ಈ ಕಥೆಯ ತಾತ್ಪರ್ಯವೇನಂದರೆ, ಜಯಕುಮಾರನಂತೆ ನಿರ್ಲೋಭಿಗಳಾಗಿ ಪರಿಗ್ರಹಪರಿಮಾಣ—ಮತ್ತು ಸ್ವಸ್ತ್ರೀಸಂತೋಷವ್ರತವನ್ನು ಪರಿಪಾಲಿಸಿ ಸ್ವರ್ಗಮೋಕ್ಷಸುಖವನ್ನು ಹೊಂದಬೇಕೆಂದು ಮುಖ್ಯಾಭಿಪ್ರಾಯ.

**ಹಿಂಸಾದಿ ಪಂಚಪಾಪಗಳಲ್ಲಿ ಪ್ರಸಿದ್ಧರಾದವರ ಹೆಸರು**

**ಧನಶ್ರೀಸತ್ಯಘೋಷೌ ಚ ತಾಪಸಾರಕ್ಷಕಾವಪಿ ||**
**ಉಪಾಖ್ಯೇಯಾಸ್ತಥಾ ಶ್ಮಶ್ರುನವನೀತೋ ಯಥಾಕ್ರಮಂ ||೬೫||**

**ಅನ್ವಯಾರ್ಥಃ**—ಧನಶ್ರೀಸತ್ಯಘೋಷೌ—ಧನಶ್ರೀಯೆಂಬ ಶ್ರೇಷ್ಠಿಪತ್ನಿಯು ಮತ್ತು ಸತ್ಯಘೋಷನೆಂಬ ಪುರೋಹಿತನು, ಚ—ಮತ್ತು ತಾಪಸಾರಕ್ಷಕೌ – ತಾಪಸಿಯು ಮತ್ತು ಯಮದಂಡನೆಂಬ ಕೋತವಾಲನು ಅಪಿ–ಮತ್ತು ತಥಾ—ಹಾಗೆಯೇ ಶ್ಮಶ್ರುನವನೀತಃ—ಶ್ಮಶ್ರುನವನೀತನೆಂಬ ವೈಶ್ಯನು ಯಥಾಕ್ರಮಂ—ಕ್ರಮವಾಗಿ ಉಪಾಖ್ಯೇಯಾಃ— ಪ್ರಸಿದ್ಧರಾದರು.

**ತಾತ್ಪರ್ಯ:**—ಹಿಂಸೆಯಲ್ಲಿ ಧನಶ್ರೀಯೆಂಬವಳೂ ಅಸತ್ಯದಲ್ಲಿ ಸತ್ಯಘೋಷನೆಂಬ ಶ್ರೀಭೂತಿ—ಪುರೋಹಿತನೂ, ಚೌರ್ಯದಲ್ಲಿ ತಾಪಸಿಯೆಂಬ ಮಿಥ್ಯಾತಪಸ್ವಿಯೂ, ಪರಸ್ತ್ರೀಸೇವನೆಯಲ್ಲಿ ಯಮದಂಡನೆಂಬ ಕೋತವಾಲನೂ, ಮತ್ತು ಅತ್ಯಾಶೆಯಲ್ಲಿ ಶ್ಮಶ್ರುನವನೀತ—[ಮೀಸೆಬೆಣ್ಣೆ]

ನೆಂಬ ವೈಶ್ಯನೂ ಯಥಾಕ್ರಮವಾಗಿ ಇವರು ಐದು ಮಂದಿಗಳು ಹಿಂಸಾದಿ ಪಂಚಪಾಪಗಳನ್ನು ಮಾಡಿ ನರಕಾದಿ ದುರ್ಗತಿಗಳನ್ನು ಹೊಂದಿರುವರು. ಯಥಾಕ್ರಮವಾಗಿ ಅವರ ಚರಿತ್ರೆಯನ್ನು ಇನ್ನು ಮುಂದೆ ವಿವರಿಸುವೆವು.

## ಧನಶ್ರೀಯ ಕಥೆ.

ಪ್ರಾಚೀನಕಾಲದಲ್ಲಿ ಲಾಟದೇಶದ ಭೃಗುಕಚ್ಛವೆಂಬ ನಗರದಲ್ಲಿ ಲೋಕಪಾಲನೆಂಬೊಬ್ಬ ರಾಜನು ರಾಜವಾಳುತ್ತಿದ್ದನು. ಆ ನಗರದಲ್ಲಿ ಧನಪಾಲನೆಂಬ ಶ್ರೇಷ್ಠಿಯು ಇರುತ್ತಿದ್ದನು. ಅವನಿಗೆ ಧನಶ್ರೀಯೆಂಬ ಪತ್ನಿಯು ಇದ್ದಳು. ಪ್ರತಿನಿತ್ಯವೂ ಬಹಳ ಹಿಂಸಾಸಕ್ತಳಾಗಿ ಅವಳ ಪರಿಣಾಮವು ಬಹಳ ಕ್ಲೇಶಮಯವಾಗಿತ್ತು. ಆದಕಾರಣ ಅವಳನ್ನು ಸನ್ಮಾರ್ಗಕ್ಕೆ ತರುವುದಕ್ಕೋಸ್ಕರ ಎಷ್ಟು ಪ್ರಯತ್ನಿಸಿದರೂ ಸಫಲವಾಗದೆ ಆಕೆಯ ಪತಿಯು ಉದಾಸೀನನಾಗಿದ್ದನು. ಈ ದಂಪತಿಗಳಿಗೆ ಸುಂದರಿಯೆಂಬ ಪುತ್ರಿಯೂ ಗುಣಪಾಲನೆಂಬ ಪುತ್ರನೂ ಹೀಗೆ ಎರಡು ಮಂದಿ ಮಕ್ಕಳಿದ್ದರು. ಈ ಧನಶ್ರೀಗೆ ಮಕ್ಕಳಾಗುವುದಕ್ಕೆ ಮೊದಲು ಕುಂಡಲನೆಂಬೊಬ್ಬ ಬಾಲಕನನ್ನು ಪುತ್ರನಂತೆ ಯೋಗ್ಯರೀತಿಯಿಂದ ಅವನ ಲಾಲನೆ ಪಾಲನೆಗಳನ್ನು ಮಾಡುತ್ತಾ ಇರುತ್ತಿದ್ದಳು. ಅನಂತರ ಕೆಲವು ದಿವಸಗಳಲ್ಲಿಯೇ ಧನಪಾಲಶ್ರೇಷ್ಠಿಯು ಮರಣವನ್ನು ಹೊಂದಿದನು. ಆಗ ಕುಂಡಲನು ಯೌವನಸ್ಥನಾದ್ದರಿಂದ ಪತಿವ್ರತೆಯಾದ ಧನಶ್ರೀಯು ಅವನೊಡನೆ ಪುತ್ರತ್ವಭಾವನೆಯನ್ನು ಬಿಟ್ಟು ಪತಿಯಂತೆ ಜಾರಕರ್ಮಾಸಕ್ತಳಾಗಿದ್ದಳು. ಆ ಮೇಲೆ ತನ್ನ ಪುತ್ರನಾದ ಗುಣಪಾಲನಿಗೆ ಗುಣದೋಷಗಳ ವಿಚಾರ ಶಕ್ತಿಯು ಉಂಟಾಗುತ್ತಿರಲು ಧನಶ್ರೀಯು ಯೋಚಿಸಿದಳೇನೆಂದರೆ, "ಗುಣಪಾಲನು ಈಗ ದೊಡ್ಡವನಾದವನು. ಇವನಿಂದ ನಮ್ಮ ಸುಖಕ್ಕೆ ವಿಘ್ನವಿದೆ. ನಮ್ಮ ಭೋಗಕ್ಕೆ ಎಂದಾದರೂ ವಿಘ್ನವನ್ನುಂಟು ಮಾಡುವ ಇವನನ್ನು ನಾಶ ಮಾಡಿದರೆ ಮತ್ಯಾರು ನಮಗೆ ತೊಂದರೆ ಮಾಡುವರು? ಎಂಬೀ ವಿಚಾರದಿಂದ ಕುಂಡಲನನ್ನು ಕುರಿತು—"ಎಲೋ ಕುಂಡಲನೇ! ಇಂದು ದನಗಳನ್ನು ಮೆಯಿಸಿಕೊಂಡು ಬರುವುದಕ್ಕೆ ಗುಣಪಾಲನನ್ನು ಕಳುಹಿಸಬೇಕೆಂದಿದೆ. ಆದಕಾರಣ ಅವನು ದನಗಳನ್ನು ಅಟ್ಟಿಕೊಂಡು

ಹೋದನಂತರ ನೀನು ಕೂಡ ಆತನ ಹಿಂದೆಯೇ ಹೋಗಿ ಅವನನ್ನು ಕೊಲ್ಲ ಬೇಕು. ಇದರಿಂದ ನಮ್ಮ ಸುಖಕ್ಕೆ ಉಂಟಾಗುವ ವ್ಯತ್ಯಯಗಳು ನಾಶ ವಾದಂತಾಗುವುದು. ಮತ್ತೆ ನಮ್ಮನ್ನು ಕೇಳುವವರು ಯಾರು? ನಮ್ಮ ರಾಜ್ಯವೇ ರಾಜ್ಯ!'' ಎಂದೆನ್ನುವ ಆಕೆಯ ಮಾತನ್ನು ಕುಂಡಲನು ಕೇಳಿ ಅದಕ್ಕೆ ಪೂರ್ಣ ಅನುಮೋದನವನ್ನಿತ್ತನು. ಇವರೀರ್ವರ ಸಂಭಾಷಣೆ ಯನ್ನು ಧನಶ್ರೀಯ ಮಗಳಾದ ಸುಂದರಿಯು ಕೇಳಿ ತನ್ನ ತಾಯಿಯ ದುಷ್ಟಸ್ವಭಾವವನ್ನು ಕುರಿತು ಬಹಳ ಪಶ್ಚಾತ್ತಾಪದಿಂದ ಕ್ರೋಧಿತಳಾ ದಳು. ಪರಂತು ಮಾಡತಕ್ಕದ್ದೇನು? ಈ ವಿಷಯವನ್ನು ನನ್ನ ತಮ್ಮನಿಗೆ ತಿಳಿಸಬೇಕು ಎಂದು ಯೋಚಿಸಿ, ''ಎಲೋ ಗುಣಪಾಲನೇ! ಇಂದು ಕುಂಡಲನನ್ನು ದನಮೆಯಿಸುವುದಕ್ಕೆ ಕಳುಹಿಸದೆ ನಿನ್ನನ್ನು ಕಳುಹಿಸ ಬೇಕೆಂದೂ, ಅಲ್ಲಿಗೆ ಕುಂಡಲನನ್ನು ಕಳುಹಿಸಿ ನಿನ್ನನ್ನು ಕೊಲ್ಲಿಸಬೇಕೆಂದೂ ನಮ್ಮ ತಾಯಿಯು ನಿಶ್ಚೈಸಿರುವಳು. ಆದ್ದರಿಂದ ಜಾಗರೂಕನಾಗಿರು'' ಎಂದ ನ್ನುವ ಭಗಿನಿಯ ಮಾತನ್ನು ಕೇಳಿ ಕೂಡಲೇ ಆಶ್ಚರ್ಯ, ಖೇದ ಕ್ರೋಧ ಮೊದಲಾದ ಮನೋವಿಕಾರಗಳುಂಟಾಗಿ ಕೆಲವು ಸಮಯಗಳ ವರೆಗೆ ಮೌನಸ್ಥನಾಗಿದ್ದು, ''ಏನೂ ಅಡ್ಡಿಯಿಲ್ಲ. ನೀನು ತಕ್ಕ ಸಮಯಕ್ಕೆ ಕೊಟ್ಟ ಸೂಚನೆಯು ನನಗೆ ಬಹಳ ಉಪಕಾರವನ್ನುಂಟು ಮಾಡಿತು. ನೀನು ಸುಮ್ಮನಿರು. ಇಂದು ಕುಂಡಲನನ್ನೇ ಕೊಂದು ಬರುವೆನು'' ಎಂದು ಹೇಳಿ ತಾಯಿಯ ಅಜ್ಞೆಯನ್ನು ಎದುರು ನೋಡುತ್ತಿದ್ದನು. ಸುಂದರಿಯು ತನ್ನ ಸ್ಥಾನಕ್ಕೆ ಹೊರಟು ಹೋದಳು.

ಅನಂತರ ಧನಶ್ರೀಯು ಮೊದಲು ನಿಶ್ಚೈಸಿದ್ದಂತೆ ಗುಣಪಾಲನನ್ನು ಕುರಿತು, ''ಮಗು ಗುಣಪಾಲ! ಇಂದು ಕುಂಡಲನಿಗೆ ದೇಹಾರೋಗ್ಯ ವಿಲ್ಲದಿರುವುದರಿಂದ ಇವತ್ತು ದನ ಮೇಯಿಸುವುದಕ್ಕೆ ಕಾಡಿಗೆ ನೀನು ಹೋಗಬೇಕೆ''ಂದಳು. ಈ ಪ್ರಕಾರವಾದ ತಾಯಿಯ ಆಜ್ಞೆಯಂತೆ, ಚಕಾರ ಶಬ್ದವನ್ನಾಡದೆ. ದನಗಳನ್ನಟ್ಟಿಕೊಂಡು ಗುಣಪಾಲನು ವನಕ್ಕೆ ಹೊರಟು ಹೋದನು. ಅಲ್ಲಿ ಹೋದನಂತರ ತನ್ನ ಅಂಗಿ ಮೊದಲಾದ ಉಡುಪುಗ ಳನ್ನು ತೆಗೆದು ಒಂದು ಮರದ ಕಟ್ಟಿಗೆಗೆ ಅಲಂಕರಿಸಿ ಅದನ್ನು ಅಲ್ಲಿರಿಸಿ

ತಾನು ಅಡಗಿ ಕೂತನು. ಸ್ವಲ್ಪ ಸಮಯದನಂತರ ಕುಂಡಲನು ಬಂದು ಅತ್ತಿತ್ತ ನೋಡಲು ಅಲ್ಲಿ ಪುರುಷಾಕಾರವಾದ ಕಾಷ್ಟವನ್ನು ನೋಡಿ ಇವನೇ ಗುಣಪಾಲನೆಂದು ಭಾವಿಸಿ ತಲವಾರಿನಿಂದ ಅದನ್ನು ಕಡಿದನು. ಪರಂತು ಅಲ್ಲೇನಿದೆ? ಕಡಿದೊಡನೆ ಆ ಕಾಷ್ಟವು ಎರಡು ವಿಭಾಗವಾದದ್ದನ್ನು ನೋಡಿ ಭಯಭೀತನಾಗಿ ಇದೇನೆಂದು ವಿಚಾರಿಸುವಷ್ಟರಲ್ಲಿ ಹಿಂದಿನಿಂದ ಗುಣಪಾಲನು ಬಂದು ಅವನನ್ನು ಕಡಿದನು. ಆಗ ಆತನ ಮರ್ಮಸ್ಥಾನಕ್ಕೆ ಪೆಟ್ಟಾದ್ದರಿಂದ ಆ ವೇನೆಯದನ್ನು ತಾಳಲಾರದೆ ಕೂಡಲೇ ಯಮಸದನವನ್ನು ಹೊಂದಿದನು. ಅನಂತರ ಗುಣಪಾಲನು ಸಂತೋಷದಿಂದ ಈ ವಿಷಯವನ್ನು ತನ್ನ ಭಗಿನಿಗೆ ತಿಳಿಸುವುದಕ್ಕೋಸ್ಕರ ರಕ್ತ ಮಿಶ್ರಿತವಾದ ತಲವಾರವನ್ನು ಹಿಡಿದುಕೊಂಡು ಮನೆಗೆ ಬಂದನು. ಆಗ ಧನಶ್ರೀಯು ಕುಂಡಲನನ್ನು ಕಾಣದೆ, ರಕ್ತಮಿಶ್ರಿತವಾದ ತಲವಾರವನ್ನು ನೋಡಿ ಭಯಭೀತಳಾಗಿ, 'ಕುಂಡಲನೆಲ್ಲಿ? ಇಂತೆಂದಳು. ಆಗ ಗುಣಪಾಲನು ಧೈರ್ಯಸ್ಥನಾಗಿ "ಕುಂಡಲನ ಸಮಾಚಾರವನ್ನು ಈ ಖಡ್ಗವು ಸೂಚಿಸುವುದು. ಅದನ್ನು ಕೇಳು" ಎಂದನು. ಅವನ ಈ ಧೈರ್ಯಯುಕ್ತವಾದ ಮಾತನ್ನು ಕೇಳಿ ಕ್ರೋಧಿತಳಾಗಿ ಕೂಡಲೇ ಆತನ ಹಸ್ತದಿಂದ ಖಡ್ಗವನ್ನು ಸೆಳೆದು ಅದರಿಂದಲೇ ಅವನನ್ನು ಕೊಂದು ಬಿಟ್ಟಳು. ಆಗ ತನ್ನ ತಾಯಿಯ ಈ ದುಷ್ಕೃತ್ಯವನ್ನು ಸುಂದರಿಯು ನೋಡಿ ತಾಳಲಾರದೆ ಆಕೆಯನ್ನು ಹೊಡೆಯಲು ಓಡಿ ಬಂದಳು. ಆಗ ಇವರೊಳಗೆ ಉಂಟಾದ ಕೋಲಾಹಲವನ್ನು ನಗರರಕ್ಷಕರಾದ ಕೋತವಾಲರು ಕೇಳಿ ಈ ಧನಶ್ರೀಯ ಮನೆಗೆ ಬಂದು ನೋಡಲು, ಈ ಭಯಂಕರವಾದ ಕೊಲೆ—ರಕ್ತಪಾತಗಳನ್ನು ಕಂಡು ಧನಶ್ರೀಯನ್ನು ಕೂಡಲೇ ಕೈದು ಮಾಡಿ ರಾಜಸಭೆಗೆ ಕರೆದೊಯ್ದರು. ರಾಜನು ಈ ಸಮಾಚಾರವನ್ನೆಲ್ಲಾ ತಿಳಿದು ಅತ್ಯಂತ ಕ್ರೋಧಾನ್ವಿತನಾಗಿ ಅವಳ ಕಿವಿ ಮೂಗು ಮೊದಲಾದ ಅಂಗಗಳನ್ನು ಕತ್ತರಿಸಿ ಕತ್ತೆಯ ಮೇಲೆ ಕುಳ್ಳಿರಿಸಿ ನಗರದಲ್ಲಿ ಮೆರವಣಿಗೆ ಮಾಡಿ ಅವಳನ್ನು ಕೊಂದುಹಾಕಬೇಕೆಂದು ಸೇವಕರಿಗೆ ಆಜ್ಞಾಪಿಸಿದನು. ಅವರು ಕೂಡಲೇ ರಾಜಾಜ್ಞೆಯಂತೆ ಆಕೆಯನ್ನು ಕೊಂದರು. ಆಗ ಆಕೆಯು ರೌದ್ರ ಧ್ಯಾನದಿಂದ ಸತ್ತು ನರಕವನ್ನು ಹೊಂದಿದಳು.

ವಾಚಕರೇ ! ಈ ಕಥೆಯ ಸಾರಾಂಶವೇನೆಂದು ನಿಮಗೆ ತಿಳಿಯದಿರಲಾರದಷ್ಟೇ? ಒಮ್ಮೆ ಮನುಷ್ಯನು ಹಿಂಸಾಸಕ್ತನಾದನೆಂದರೆ ದಿನೇ ದಿನೇ ಅವನ ಮನಃಪ್ರವೃತ್ತಿಯು ಕಾಠಿಣ್ಯವನ್ನು ಹೊಂದುವದು. ಅದರಂತೆಯೇ ವ್ಯಭಿಚಾರಾಸಕ್ತರು ಹಿಂಸಾದಿಪಾಪಗಳನ್ನು ಮಾಡಲು ಸ್ವಲ್ಪವೂ ಹಿಂಜರಿಯುವುದಿಲ್ಲ. ಹಿಂಸಾಸಕ್ತರಿಗೆ ಇಹಲೋಕದಲ್ಲಿ ಭಯಂಕರವಾದ ರಾಜದಂಡನೆಯು ಉಂಟಾಗುವುದಲ್ಲದೆ ಪರಜನ್ಮದಲ್ಲಿ ಘೋರವಾದ ನರಕಯಾತನೆಯನ್ನು ಅನುಭವಿಸಬೇಕಾಗುತ್ತದೆ. ಆದಕಾರಣ ಹಿಂಸೆಯನ್ನು ಮಾಡಬಾರದೆಂದು ಮುಖ್ಯಾಭಿಪ್ರಾಯವು.

## ಶ್ರೀಭೂತಿ ಅಥವಾ ಸತ್ಯಘೋಷನ ಕಥೆ.

ಪೂರ್ವದಲ್ಲಿ ಈ ಜಂಬೂದ್ವೀಪದ ಭರತಕ್ಷೇತ್ರದ ಸಿಂಹಪುರವೆಂಬ ನಗರದಲ್ಲಿ ಒಳ್ಳೇ ಪರಾಕ್ರಮಿಯಾದ ರಾಜನಿದ್ದನು. ಅವನಿಗೆ ಅತ್ಯಂತ ಸದ್ಗುಣವತಿಯಾದ ರಾಮದತ್ತೆಯೆಂಬ ಪತ್ನಿಯೂ ಇವರಿಗೆ ಸರ್ವಶಾಸ್ತ್ರಸಂಪನ್ನರಾದ ಸಿಂಹಚಂದ್ರ ಮತ್ತು ಪೂರ್ಣಚಂದ್ರರೆಂಬ ಈರ್ವರು ಪುತ್ರರೂ ಇದ್ದರು. ಅದೇ ನಗರದಲ್ಲಿ ಶ್ರೀಭೂತಿಯೆಂಬ ಪುರೋಹಿತನಿದ್ದು ಅವನಿಗೆ ಶ್ರೀದತ್ತೆಯೆಂಬ ಪತ್ನಿಯಿದ್ದಳು. ಶ್ರೀಭೂತಿಯು ಕಪಟಾಚರಣೆಯಾದುದರಿಂದ ಜನಗಳನ್ನು ವಂಚಿಸುವುದಕ್ಕೋಸ್ಕರ ತನಗೆ ಸತ್ಯಘೋಷನೆಂಬ ಹೆಸರನ್ನಿಟ್ಟುಕೊಂಡಿದ್ದನು. ಮತ್ತು ತನ್ನ ಯಜ್ಞೋಪವೀತದಲ್ಲಿ ಒಂದು ಸಣ್ಣ ಚೂರಿಯನ್ನು ಕಟ್ಟಿಕೊಂಡು, "ನಾನು ಒಂದು ವೇಳೆ ಸುಳ್ಳನ್ನಾಡಿದರೆ ಈ ಚೂರಿಯಿಂದಲೇ ನನ್ನ ನಾಲಿಗೆಯನ್ನು ಕತ್ತರಿಸಿಕೊಳ್ಳುವೆನೆ"ಂದು ಲೋಕದಲ್ಲಿ ಪ್ರಸಿದ್ಧಪಡಿಸಿದ್ದನು. ಆದಕಾರಣ ಅವನಲ್ಲಿ ಎಲ್ಲರೂ ವಿಶ್ವಾಸದಿಂದ ತಮ್ಮ ದ್ರವ್ಯವನ್ನು ಠೇವಣಾತಿಯಾಗಿಡುತ್ತಿದ್ದರು. ಹೀಗಿರುವಲ್ಲಿ ಕೆಲವು ಸರ್ತಿ ಅವರವರ ಧನವನ್ನು ಅವರವರಿಗೆ ಸಂಪೂರ್ಣಕೊಡದೆ ಕೆಲವಂಶ ಹಣವನ್ನು ಅಪಹರಿಸುತ್ತಿದ್ದನು ಈ ರೀತಿಯಾದ ಅವನ ಕಪಟತನವು ಜನರಿಗೆ ತಿಳಿದು, ರಾಜನಲ್ಲಿ ಹೋಗಿ ಈ ಸಮಾಚಾರವನ್ನು ತಿಳಿಸಿ ಪದೇಪದೇ ಅವನಿಗೆ ಅಪಮಾನವಾಗುತ್ತಿದ್ದುದರಿಂದ ಆತನನ್ನು ಯಾರೂ ನಂಬುತ್ತಿರಲಿಲ್ಲ.

ಇತ್ತ ಪದ್ಮಖಂಡವೆಂಬ ನಗರದಲ್ಲಿ ಸುಮಿತ್ರನೆಂಬೊಬ್ಬ ವರ್ತಕನಿದ್ದು, ಅವನಿಗೆ ಸುದತ್ತೆಯೆಂಬ ಪತ್ನಿಯೂ ಭದ್ರಮಿತ್ರನೆಂಬ ಪುತ್ರನೂ ಇದ್ದರು. ಆ ಭದ್ರಮಿತ್ರನೊಂದು ದಿನ ವ್ಯಾಪಾರನಿಮಿತ್ತವಾಗಿ ಪರದೇಶಕ್ಕೆ ಹೊರಟನು. ಆಗ ತನ್ನಲ್ಲಿದ್ದ ಅಮೂಲ್ಯವಾದ ಐದು ರತ್ನಗಳನ್ನು ಸತ್ಯಘೋಷನ ಸತ್ಯತೆಗೆ ತಾನು ಮೆಚ್ಚಿ ಅವನ ಹತ್ತಿರ ಕೊಟ್ಟು ತಾನು ಹಡಗನ್ನೇರಿ ಸುವರ್ಣದ್ವೀಪಕ್ಕೆ ಹೊರಟು ಹೋದನು. ಅಲ್ಲಿ ಹೋಗಿ ಬೇಕಾದ ದ್ರವ್ಯಗಳನ್ನು ಸಂಪಾದಿಸಿಕೊಂಡು ವಾಪಾಸು ಬರುತ್ತಿರುವಾಗ ಅವನ ದುರ್ದೈವದಿಂದ ಒಂದು ದೊಡ್ಡ ಝುಂಝಾವಾತವು ಉಂಟಾಗಿ ಹಡಗು ಸಮುದ್ರದಲ್ಲಿ ಮುಳುಗಿತು. ಪರಂತು, ಭದ್ರಮಿತ್ರನ ಆಯುಷ್ಯ ಕರ್ಮವು ಪ್ರಬಲವಾಗಿದ್ದುದರಿಂದ ಅವನಿಗೊಂದು ಹಲಿಗೆಯ ತುಂಡು ಸಿಕ್ಕಿ ಅದರ ಸಹಾಯದಿಂದ ಬಹಳ ಪರಿಶ್ರಮಪೂರ್ವಕವಾಗಿ ದಡವನ್ನು ಬಂದು ಸೇರಿದನು. ಪರಂತು ತನ್ನ ಭದ್ರಮಿತ್ರನು ಮತ್ತು ತಾನು ಸಂಪಾದಿಸಿದ ಧನವೆಲ್ಲಾ ಸಮುದ್ರಪಾಲಾದುದನ್ನು ನೋಡಿ ಬಹಳ ವ್ಯಸನವಾಯಿತು. ಆದರೆ ಮಾಡುವುದೇನು? ಇಂತಹ ನಿರ್ಜನ ಸ್ಥಾನದಲ್ಲಿ ಅವನ ದುಃಖವನ್ನು ಕೇಳುವವರ್ಯಾರು? ಕೊನೆಗೆ ಆತನೇ ತನ್ನ ಅಂತರಾತ್ಮನನ್ನು ಸಮಾಧಾನಪಡಿಸಿಕೊಂಡು, ತಾನು ಶ್ರೀಭೂತಿಯ ಹತ್ತಿರ ಇಟ್ಟಿರುವ ಐದು ರತ್ನಗಳ ಸ್ಮರಣೆಯುಂಟಾಗಿ ಕೂಡಲೇ ಆತನಿದ್ದ ಸಿಂಹಪುರಕ್ಕೆ ಹೊರಡಲುದ್ಯುಕ್ತನಾದನು. ಆದರೆ ತಾನು ಸಂಪಾದಿಸಿದ ಧನವೆಲ್ಲಾ ನಷ್ಟವಾದ ಕಾರಣ ಶೋಕದಿಂದ ಅವನ ಶರೀರವು ಬಹಳ ಕೃಶವಾಗಿತ್ತು ಇಷ್ಟೇ ಅಲ್ಲದೆ ಅವನ ಅಂಗದಲ್ಲಿರುವ ವಸ್ತ್ರಗಳೆಲ್ಲಾ ಚೂರು ಚೂರಾಗಿ ದರಿದ್ರ—ಭಿಕಾರಿಯಂತಿದ್ದನು.

ಈ ಹಡಗು ಮುಳುಗಿದ ವಾರ್ತೆಯು ಶ್ರೀಭೂತಿಗೆ ಮೊದಲೇ ತಿಳಿದಿದ್ದುದರಿಂದ ಅವನು ಭದ್ರಮಿತ್ರನು ದೂರದಿಂದಲೇ ಬರುವುದನ್ನು ಕಂಡು, ಅವನು ತನ್ನಲ್ಲಿಗೆ ಏತಕ್ಕೆ ಬರುತ್ತಾನೆಂಬೀ ವಿಷಯವನ್ನು ಕೂಡಲೇ ತಿಳಿದವನಾಗಿ, ಈಗ ಪ್ರಾಪ್ತವಾದ ಈ ಸಂಕಟದಿಂದ ಹೇಗೆ ಮುಕ್ತನಾಗಲಿ?'' ಎಂದು ಯೋಚಿಸುತ್ತಾ, ಕೊನೆಗೆ ತನ್ನ ಮೂಗಿನ ರಂಧ್ರಕ್ಕೆ ಕೈಹಿಡಿದು

ಶ್ವಾಸೋಚ್ಛ್ವಾಸವನ್ನು ಪರೀಕ್ಷಿಸಿ, ಜನಗಳೇ! ಇಂದು ನನ್ನ ಮೂಗಿನ ಶ್ವಾಸೋಚ್ಛ್ವಾಸವು ಒಂದು ದುಶ್ಶಿಕ್ಷೆಯನ್ನು ತೋರಿಸುತ್ತಿದೆ. ಆದ್ದರಿಂದ ನನ್ನ ಕೀರ್ತಿಗೆ ಕಲಂಕವನ್ನುಂಟು ಮಾಡುವ ಒಂದು ಸಂಕಟವು ಪ್ರಾಪ್ತವಾಗತಕ್ಕದ್ದಿದೆ'' ಇಂತೆಂದನು. ಇದನ್ನು ಕೇಳಿ ಸಮೀಪದಲ್ಲಿರತಕ್ಕವರು, ``ಸ್ವಾಮಿ! ತಾವು ಸತ್ಯವಾದಿಗಳು. ತಮಗೆ ಎಂತಹ ಸಂಕಟವೂ ಬರಲಾರದು'' ಎಂದು ಹೇಳಿದರು. ಇಷ್ಟರಲ್ಲಿ ಭದ್ರಮಿತ್ರನು ಅಲ್ಲಿಗೆ ಬಂದು ಶ್ರೀಭೂತಿಗೆ ನಮಸ್ಕಾರವನ್ನು ಮಾಡಿ ಬಹಳ ದುಃಖದಿಂದ, ``ಸತ್ಯಘೋಷರೇ! ನಾನು ಪರದೇಶಕ್ಕೆ ದ್ರವ್ಯಸಂಪಾದನೆಗೋಸ್ಕರ ಹೋಗುವಾಗ ತಮ್ಮ ಕ್ಷೆಯಲ್ಲಿ ಐದು ರತ್ನಗಳನ್ನು ಕೊಟ್ಟಿದ್ದೇನು. ನನ್ನ ದುರ್ದೈವದಿಂದ ಹಡಗು ಸಮುದ್ರದಲ್ಲಿ ಮುಳುಗಿ ನನ್ನ ದ್ರವ್ಯವೆಲ್ಲಾ ನಾಶವಾಯಿತು. ನನಗಾದ ದುರವಸ್ಥೆಯನ್ನು ಹೆಚ್ಚೇನು ಹೇಳಲಿ? ಆದುದರಿಂದ ತಮ್ಮಲ್ಲಿರುವ ನನ್ನ ರತ್ನಗಳನ್ನು ದಯವಿಟ್ಟು ಕೊಡಬೇಕಾಗಿ ಪ್ರಾರ್ಥನೆ''ಎಂದು ಹೇಳಿದನು. ಈ ರೀತಿಯಾದ ಅವನ ಮಾತನ್ನು ಕೇಳುತ್ತಲೇ ಶ್ರೀಭೂತಿಯು ಕ್ರೋಧಿತನಾಗಿ ಏನೂ ಗೊತ್ತಿಲ್ಲದವನಂತೆ ಮುಖವಿಕಾರಗಳನ್ನು ಮಾಡುತ್ತಾ, ``ಎಲೇ ಪಾಷಂಡಿ! ನಿನಗೇನು ಚಿತ್ತವಿಭ್ರಮೆಯುಂಟಾಗಿದೆಯೋ? ಅಥವಾ ಏನಾದರೂ ಪ್ರೇತಬಾಧೆಯುಂಟಾಗಿದೆಯೋ? ಅಥವಾ ನಿನ್ನ ದ್ರವ್ಯವೆಲ್ಲಾ ನಾಶವಾಯಿತೆಂದು ಶೋಕದಿಂದ ಮನೋವಿಕಾರವು ಉಂಟಾಗಿದೆಯೋ? ಇದೇನು? ನೀನು ಯಾರು? ನಾನು ಯಾರು? ರತ್ನಗಳು ಯಾವವು? ಎಲೋ ಮೂರ್ಖ! ನನ್ನನ್ನು ಮೋಸಗೊಳಿಸಬೇಕೆಂದು ಇಲ್ಲದ ಸಂಬಂಧಗಳನ್ನಾದರೂ ಕಲ್ಪಿಸುವ ನಿನಗೆ ನಾನೇನು ಹೇಳಬೇಕು? ಇದುವರೆಗೆ ಯಾರೂ ನನ್ನ ಸತ್ಯನಿಷ್ಠತೆಯ ವಿಷಯವಾಗಿ ಸಂಶಯ ಪಡಲಿಲ್ಲ. ಅದಲ್ಲದೆ ನನ್ನ ಕೀರ್ತಿಯು ಲೋಕವಿಖ್ಯಾತವಾಗಿದೆ. ಹೀಗಿರಲು ನೀನೊಬ್ಬ ಮಾತ್ರ ನನ್ನ ವಿಶಾಲವಾದ ಕೀರ್ತಿಗೆ ಕಲಂಕವನ್ನುಂಟು ಮಾಡಲು ಬಂದಿರುವೆ. ನಿನಗೆ ಲಜ್ಜೆಯಾಗುವುದಿಲ್ಲವೇನು? ಸುಮ್ಮನೆ ಹೊರಟು ಹೋಗು. ನೀನು ಇಂತಹ ದುರವಸ್ಥೆಯನ್ನು ಹೊಂದಿರುವೆ, ಇಲ್ಲವಾದರೆ ಈಗಲೇ ಅದರ ತಮಾಷೆಯನ್ನು ತೋರಿಸುತ್ತಿದ್ದೆ ಇರಲಿ. ನಿನ್ನನ್ನು

ನಾನು ಕ್ಷಮಿಸಿದ್ದೇನೆ. ಸುಮ್ಮನೇ ಹೊರಟು ಹೋಗೆ''ಂದು ಹೇಳಿ, ಕೂಡಲೇ ಅಲ್ಲಿರುವ ಜನಗಳನ್ನು ಕುರಿತು, "ನೋಡಿ, ನಾನು ಮೊದಲು ಹೇಳಿದಂತೆ ಶ್ವಾಸೋಚ್ಛ್ವಾಸದ ದುಶ್ಚಿಹ್ನೆಯು ಈಗ ಪ್ರತ್ಯಕ್ಷ ಗೋಚರ ವಾಯಿತಲ್ಲವೇ? ಈಗ ನೀವು ಇವನನ್ನು ಹುಚ್ಚನೆಂದು ಹೇಳಲಾರಿರೇನು. ? ಆಗ ಜನರು ಹೌದೆಂದು ಸಮ್ಮತಿಯನ್ನಿತ್ತರು. ಭದ್ರಮಿತ್ರನಾದರೋ ಶ್ರೀಭೂತಿಯ ಈ ಪ್ರಕಾರವಾದ ಮಾತನ್ನುಕೇಳಿ ಕ್ರೋಧ, ಆಶ್ಚರ್ಯ ಮತ್ತು ದುಃಖ ಮೊದಲಾದ ವಿಕಾರಗಳಿಂದ ಏನೂ ಮಾತನಾಡಲಾರದವ ನಾಗಿ ತನ್ನ ಮನಸ್ಸಿನಲ್ಲಿ, "ನೋಡಿ, ಏನು ಚಮತ್ಕಾರ! ಯಾವನ ಮೇಲೆ ನಾನು ವಿಶ್ವಾಸವನ್ನಿಟ್ಟಿದ್ದೆನೋ, ಅವನೇ ನನ್ನ ಕುತ್ತಿಗೆಯನ್ನು ಕೊಯಿದ ನಲ್ಲವೇ? ಇರಲಿ, ನನ್ನ ದುರ್ದೈವವೆನ್ನಬೇಕು. ಆದರೆ ನನ್ನ ದುರ್ದೈವ ವೆಂದು ಸುಮ್ಮನಿರುವುದು ಯೋಗ್ಯವಲ್ಲವು. ಯಾಕಂದರೆ, ನನ್ನಂತೆಯೇ ಇವನು ಎಷ್ಟೋ ಜನರನ್ನು ಮೋಸಗೊಳಿಸುವನು. ಇವನ ಲುಚ್ಚತನ ವನ್ನು ಪ್ರಕಟಿಸಬೇಕು. ಇಲ್ಲವಾದರೆ ಬೇರೆ ಉಪಾಯವಿಲ್ಲ" ವೆಂದು ಯೋಚಿಸಿ, ಶ್ರೀಭೂತಿಯನ್ನು ಕುರಿತುಃ—"ಎಲೋ! ನನ್ನ ರತ್ನಗಳನ್ನು ನಿನ್ನ ಪತ್ನಿಯ ಸಮಕ್ಷಮದಲ್ಲಿ ಕೊಟ್ಟಿದ್ದಲ್ಲವೇ? ಕೊಟ್ಟು ಬಹುದಿನಗಳಾ ಗಲಿಲ್ಲ. ಹೀಗಿರಲು ನನ್ನನ್ನೆ ವಂಚಕನೆನ್ನುತ್ತಿಯೇ! ಈಗಲಾದರೂ ನನ್ನ ರತ್ನಗಳನ್ನು ನನಗೆ ವಾಪಸು ಕೊಟ್ಟುಬಿಡು" ಇಂತೆಂದನು. ಈ ಮಾತನ್ನು ಕೇಳುತ್ತಲೇ ಶ್ರೀಭೂತಿಯು ಕ್ರೋಧಾವೇಶದಿಂದ ಸೇವಕರನ್ನು ಕರೆದು, ಇವನು ನನ್ನ ಮೇಲೆ ಮಾಡುವ ಸುಳ್ಳು ಆರೋಪವನ್ನು ಕೂಡಲೇ ರಾಜನಿಗೆ ತಿಳಿಸಿ ಇವನಿಗೆ ತಕ್ಕ ಶಿಕ್ಷೆಯನ್ನು ವಿಧಿಸಬೇಕೆಂದು ಹೇಳಿರಿ" ಎಂದು ಹೇಳಿ ಕಳುಹಿಸಿದನು. ಈ ಸಮಾಚಾರವನ್ನೆಲ್ಲಾ ಸೇವಕರು ರಾಜ ನಿಗೆ ಹೋಗಿ ತಿಳಿಸಲು ರಾಜನೂ ಕೂಡ ಸೇವಕರ ಮಾತನ್ನು ಕೇಳಿ ಏನೂ ವಿಚಾರಿಸದೆ ಹೊರಟು ಹೋಗು ಎಂದನು. ಆಗ ಭದ್ರಮಿತ್ರನು ತನ್ನ ಯಥಾರ್ಥವಾದ ವಿಷಯವನ್ನು ಅತಿ ದೈನ್ಯದಿಂದ ಹೇಳಿಕೊಂಡರೂ ಪ್ರಯೋಜನವಾಗಲಿಲ್ಲ. ಲೋಕದಲ್ಲಿ ಸತ್ಯಘೋಷನು ಹೊರತು. ಇತರರು ಯಾರೂ ಸತ್ಯನಿಷ್ಠರಿಲ್ಲವೆಂಬ ಭಾವನೆಯು ರಾಜನಿಗಿದ್ದುದರಿಂದ ಭದ್ರಮಿತ್ರನು ಎಷ್ಟು ಪ್ರಾರ್ಥಿಸಿಕೊಂಡರೂ ಫಲಕಾರಿಯಾಗಲಿಲ್ಲ. ಇರಲಿ.

ರಾಜನು ಕೂಡ ನನ್ನನ್ನು ಹುಚ್ಚನೆಂದು ನನ್ನ ಪ್ರಾರ್ಥನೆಯನ್ನು ಕೇಳಲಿಲ್ಲವೆಂದು ಆಶ್ಚರ್ಯಚಕಿತನಾದರೂ ಮತ್ತೂ ನಿರಾಶನಾಗದೆ ಪ್ರಯತ್ನಿಸುತ್ತಾ, "ಪ್ರತಿ ದಿನ ನಗರದಲ್ಲಿ ಸತ್ಯಘೋಷನು ನನ್ನ ಐದು ರತ್ನಗಳನ್ನು ಅಪಹರಿಸಿದನು. ಈ ಮಾತು ಅಸತ್ಯವಾದರೆ ನನ್ನ ಪ್ರಾಣವನ್ನೇ ತೆಗೆದುಕೊಳ್ಳುವೆನು" ಎಂದನ್ನುತ್ತಾ ತಿರುಗುತ್ತಿದ್ದನು. ಈ ರೀತಿಯಾಗಿ ಐದಾರು ಮಾಸವು ಕಳೆಯುತ್ತಿರಲು, ಒಂದು ದಿವಸ ರಾತ್ರಿಯಲ್ಲಿ ಅರಮನೆಯ ಹತ್ತಿರ ಪೂರ್ವೋಕ್ತಪ್ರಕಾರವಾಗಿ ಕೂಗುತ್ತಿರುವ ಧ್ವನಿಯನ್ನು ರಾಜನ ಪಟ್ಟರಾಣಿಯಾದ ರಾಮದತ್ತೆಯು ಕೇಳಿ, "ಇದರಲ್ಲೇನಾದರೂ ತಥ್ಯಾಂಶವಿರಬೇಕು. ಯಾವಾಗಲೂ ಒಂದೇ ರೀತಿಯಾದ ಶಬ್ದವನ್ನು ಹೇಳುತ್ತಿರುತ್ತಾನೆ. ಇವನು ಹುಚ್ಚನಲ್ಲ. " ಎಂದು ಯೋಚಿಸಿ, ರಾಜನನ್ನು ಕುರಿತು ಹೇಳಿದಳೇನೆಂದರೆ, "ಮಹಾಸ್ವಾಮಿ ! ತಾವು ಇವನನ್ನು ಹುಚ್ಚನೆಂದು ಓಡಿಸಿದಿರಿ. ಇವನು ಹುಚ್ಚನಾಗಿರುತ್ತಿದ್ದರೆ ಯದ್ವಾತದ್ವಾ ಮಾತಾಡುತ್ತಿದ್ದನು" ಎಂದಳು. ಆಗ ರಾಜನು "ಹಾಗಾದರೆ ಸತ್ಯಘೋಷನ ಮೇಲೆ ಮಾಡಿದ ಆರೋಪವನ್ನು ನಿಜವೆಂದು ತಿಳಿಯುತ್ತೀಯೋ? " ಎಂದನು. ಆಗ ರಾಣಿಯು "ಮಹಾಸ್ವಾಮಿ! ತಾವು ಸತ್ಯಘೋಷನ ಡಾಂಬಿಕತನವನ್ನು ನಂಬಿರುವಿರಿ. ನಾನು ನಂಬಲಾರೆ. ನನಗೆ ತಾವು ಅಪ್ಪಣೆ ಕೊಟ್ಟರೆ ನಾನು ಇದರ ತಥ್ಯಾಂಶವನ್ನು ಪರೀಕ್ಷಿಸುವೆನೆ"ಂದಳು. ಆಗ ರಾಜನು ಅದಕ್ಕೆ ಅನುಮತಿಯನ್ನಿತ್ತನು. ಕೂಡಲೇ ರಾಣಿಯು ತನ್ನದಾಸಿಯಾದ ನಿಪುಣಿಕೆಯನ್ನು ಕರೆದು ಈ ಸಮಾಚಾರಗಳನ್ನೆಲ್ಲಾ ಅವಳಿಗೆ ತಿಳಿಸಿ "ನೀನು ನಾಳೆ ಹೋಗಿ ಶ್ರೀಭೂತಿಯು ಕಚೇರಿಯಿಂದ ಬಂದೊಡನೆ. ಇಲ್ಲಿಗೆ ಕರಕೊಂಡು ಬರಬೇಕು. ಆ ಮೇಲೆ ಅವನೊಡನೆ ಜುಗಾರಿಯಾಟವನ್ನು ಆಡಿ ಅವನ ಎಲ್ಲಾ ಆಭರಣಗಳನ್ನು ಸ್ವಾಧೀನಮಾಡಿಕೊಂಡನಂತರ ಅವನ ಆಭರಣಗಳನ್ನು ಅವನ ಹೆಂಡತಿಗೆ ಗುರುತಿಗೋಸ್ಕರ ತೋರಿಸಿ ಅಲ್ಲಿರುವ ರತ್ನಗಳನ್ನು ತರಬೇಕು. ಅವುಗಳನ್ನು ನೋಡಿ ವಿಶ್ವಾಸದಿಂದ ಆಕೆಯು ಕೊಡುವಳು" ಎಂದು ಹೇಳಿ ಆಕೆಯನ್ನು ಅಲ್ಲಿಗೆ ಕಳುಹಿಸಿ ಕೊಟ್ಟಳು. ನಿಪುಣಿಕೆಯು ಮೊದಲು ನಿಶ್ಚೈಸಿದಂತೆ ಅಲ್ಲಿಗೆ ಹೋಗಿ ಅವನನ್ನು ಕರ

ಕೊಂಡು ಬಂದಳು. ಆಗ ರಾಣಿಯು "ಮಂತ್ರಿವರ್ಯ! ಇಂದು ಇಷ್ಟು ಹೊತ್ತಾಗಲು ಕಾರಣವೇನೆ"ಂದಳು. ಆಗ ಶ್ರೀಭೂತಿಯು, "ಮಹಾ ರಾಣಿಯೇ! ಮನೆಗೆ ನನ್ನ ಭಾವಮೈದುನನು ಬಂದಕಾರಣ ಅವನ ಸತ್ಕಾರದಿಂದ ಸ್ವಲ್ಪ ಹೊತ್ತಾಯಿತು. ಆದ್ದರಿಂದ ಕ್ಷಮಿಸಬೇಕೆ"ಂದನು. ಆಗ ರಾಣಿಯು "ಚಿಂತೆಯಿಲ್ಲ, ಇಂದು ತಮ್ಮನ್ನು ಇಲ್ಲಿಗೆ ಬರಮಾಡಲು ಕಾರಣವೇನೆಂದರೆ? ತಾವು ದ್ಯೂತಕ್ರೀಡೆಯಲ್ಲಿ ಬಹಳ ನಿಪುಣರೆಂದು ಕೇಳಿರುವೆನು. ಆದಕಾರಣ ಒಮ್ಮೆ ತಮ್ಮೊಡನೆ ದ್ಯೂತಕ್ರೀಡೆಯನ್ನಾಡ ಬೇಕೆಂಬೀ ಪ್ರಬಲವಾದ ಇಚ್ಛೆಯು ಎನಗಿದೆ" ಎಂದಳು. ಆಗ ಶ್ರೀಭೂತಿಯು ರಾಣಿಯ ಆಜ್ಞೆಯನ್ನು ಮೀರಲಾರದೆ ದ್ಯೂತಕ್ರೀಡೆಗೆ ಸಮ್ಮತಿಸಿದನು. ಆಗ ರಾಜನೂ ಸಹಜವಾಗಿ ಅಲ್ಲಿಗೆ ಬಂದಿದ್ದ ಕಾರಣ ಅವನೂ ಜುಗಾರಿ ಯಾಡುವರೇ ಆಜ್ಞೆಯನ್ನಿತ್ತನು. ಅನಂತರ ಆಟಕ್ಕೆ ಪ್ರಾರಂಭಿಸಿದರು. ಮೊದಲು ರಾಣಿಯು ಶ್ರೀಭೂತಿಯ ಉಂಗುರವನ್ನು ಜಯಿಸಿದಳು. ಕೂಡಲೇ ನಿಪುಣಿಕೆಯು ಆ ಉಂಗುರವನ್ನು ತೆಗೆದುಕೊಂಡು ಶ್ರೀಭೂತಿಯ ಪತ್ನಿಯಿದ್ದಲ್ಲಿಗೆ ಹೋಗಿ ಉಂಗುರವನ್ನು ತೋರಿಸದೆ, "ಅಮ್ಮಾ! ನಿಮ್ಮ ಯಜಮಾನರಾದ ಸತ್ಯಘೋಷರು. ಅರಮನೆಯ ಅಂತಃಪುರದಲ್ಲಿರುವರು. ಆ ಹುಚ್ಚನ ಐದು ರತ್ನಗಳು ಇವೆಯಂತೆ ಅವುಗಳನ್ನು ತರುವುದಕ್ಕೋ ಸ್ಕರ ನನ್ನನ್ನು ಕಳುಹಿಸಿರುವರು" ಎಂದು ಹೇಳಿದಳು. ಆಗ ಶ್ರೀದತ್ತೆಯು ಸ್ವಲ್ಪ ಹೊತ್ತಿನವರೆಗೆ ಯೋಚಿಸಿ "ಎಂತಹ ರತ್ನಗಳನ್ನು ನೀನು ಕೇಳ್ಳು ತ್ತಿಯೇ? ಆ ಹುಚ್ಚನು ಯಾರು? ರತ್ನಗಳ್ಯಾವುವು? ನಮಗೂ ಅವನಿಗೂ ಸಂಬಂಧವೇನು? ಇದೆನೋ ನನ್ನನ್ನು ವಂಚಿಸುವುದಕ್ಕಾಗಿ ಬಂದಿರು ತ್ತೀಯೇ. ಸುಮ್ಮನೆ ಹೊರಟು ಹೋಗೆ"ಂದಳು. ಈ ಮಾತನ್ನು ಕೇಳಿ ಶ್ರೀಭೂತಿಯ ಉಂಗುರವನ್ನು ತೆಗೆದು ತೋರಿಸಿದಳು. ಆಗ ಶ್ರೀದತ್ತೆಯು "ಇದು ನನ್ನ ಪತಿಯು ಉಂಗುರ ಹೌದು, ಅದು ಹೇಗಾದರೂ ಇರಲಿ. ನನ್ನ ಹತ್ತಿರ ಆ ರತ್ನಗಳೇ ಇಲ್ಲದ ಮೇಲೆ ನಾನೆಲ್ಲಿಂದ ಕೊಡಲಿ?" ಎಂದು ಹೇಳಿ ನಿಪುಣಿಕೆಯನ್ನು ವಾಪಾಸು ಕಳುಹಿಸಿದಳು. ಕೂಡಲೇ ನಿಪುಣಿಕೆಯು ವಾಪಾಸು ಹೋಗಿ ಈ ನಡೆದ ಸಂಗತಿಯನ್ನೆಲ್ಲಾ ರಾಣಿಗೆ ತಿಳಿಸಿದಳು. ಅಷ್ಟರಲ್ಲಿ ರಾಣಿಯು ಶ್ರೀಭೂತಿಯ ಯಜ್ಞೋಪವೀತವನ್ನು ಕೂಡ ಜಯಿ

ಸಿದ್ದಳು. ಆಗ ನಿಪುಣಿಕೆಯ ಕೈಯಲ್ಲಿ ಆ ಯಜ್ಞೋಪವೀತವನ್ನು ಕೊಟ್ಟು ಕಳುಹಿಸಿದಳು. ಪುನಃ ದ್ಯೂತಕ್ರೀಡೆಗೆ ಪ್ರಾರಂಭಿಸಿದಳು. ಇತ್ತ ನಿಪುಣಿಕೆಯು ಹೋಗಿ, "ಅಮ್ಮಾ ಈಗಲಾದರೂ ತಮಗೆ ವಿಶ್ವಾಸವುಂಟಾದೀತೇ ? ನೋಡಿ ತಮ್ಮ ಯಜಮಾನರ ಯಜ್ಞೋಪವೀತ"ವೆಂದು ಕೊಟ್ಟಳು. ಆಗ ಶ್ರೀದತ್ತೆಯು ಅದನ್ನು ನೋಡಿ, "ಇದು ನನ್ನ ಯಜಮಾನರ ಯಜ್ಞೋಪವೀತವೇನೋ ಸರಿ ! ರತ್ನವೆಲ್ಲಿದೆಯೊ ನನಗೆ ಗೊತ್ತಿಲ್ಲ"ವೆಂದು ಹೇಳಿದರೂ ಕೊನೆಗೆ ನಿರುಪಾಯಳಾಗಿ ಆ ರತ್ನಗಳನ್ನು ನಿಪುಣಿಕೆಯ ಸ್ವಾಧೀನ ತಂದು ಕೊಟ್ಟಳು.

ನಿಪುಣಿಕೆಯು ಕೂಡಲೇ ಆ ರತ್ನಗಳನ್ನು ತೆಗೆದುಕೊಂಡು ಹೋಗಿ ರಾಣಿಯ ಹಸ್ತಕೊಟ್ಟು ಇಲ್ಲಿ ನಡೆದ ಸಮಾಚಾರವನ್ನೆಲ್ಲಾ ಹೇಳಿದಳು. ಈ ರತ್ನಗಳು ತನ್ನ ಹಸ್ತಗತವಾದೊಡನೆ ರಾಣಿಗೆ ಬಹಳ ಸಂತೋಷವಾಗಿ, ಅವುಗಳನ್ನು ತನ್ನ ಪತಿಯ ಹತ್ತಿರ ಕೊಟ್ಟಳು. ರಾಜನು ಇದನ್ನು ನೋಡಿ ಬಹಳ ಆಶ್ಚರ್ಯಚಕಿತನಾಗಿ ತನ್ನ ಮನಸ್ಸಿನಲ್ಲಿ, "ಸತ್ಯಘೋಷನ ಕೀರ್ತಿಯು ದಿಗಂತವ್ಯಾಪಕವಾಗಿದೆ. ಹೀಗಿರಲು ಈ ಕಳವಿನ ಆರೋಪವನ್ನು ಅವನ ಮೇಲೆ ಮಾಡುವುದು ಹೇಗೆ ?" ಎಂದು ಯೋಚಿಸಿ, ಅದನ್ನು ಇನ್ನೂ ಪರೀಕ್ಷಿಸಿ ನೋಡಬೇಕೆಂದು, ಆ ಐದು ರತ್ನಗಳನ್ನು ಬಹುಮೂಲ್ಯವಾದ ಹೆಚ್ಚು ರತ್ನಗಳೊಡನೆ ಮಿಶ್ರಮಾಡಿ, ಭದ್ರಮಿತ್ರನನ್ನು ಅರಮನೆಗೆ ಕರತರುವಂತೆ ಸೇವಕರನ್ನು ಕಳುಹಿಸಿದನು. ಭದ್ರಮಿತ್ರನು ಬಂದೊಡನೆ ರಾಜನು, "ಈ ರತ್ನಗಳ ಸಮೂಹದಲ್ಲಿ ನಿನ್ನ ರತ್ನಗಳಿದ್ದರೆ ತೆಗೆದು ಕೋ" ಎಂದು ಆಜ್ಞಾಪಿಸಿದನು. ಭದ್ರಮಿತ್ರನು ಕೂಡಲೇ ತನ್ನ ರತ್ನಗಳನ್ನು ಆರಿಸಿ ತೆಗೆದನು. ಇದನ್ನು ನೋಡಿ ರಾಜನಿಗೆ ಬಹಳ ಆನಂದವಾಯಿತು. "ವರ್ತಕನೇ ! ನಿಜವಾಗಿಯೂ ನೀನು ನಿಸ್ಪೃಹನು. ಸತ್ಯಘೋಷನೆಂಬ ಹೆಸರಿಗೆ ನೀನೇ ಯೋಗ್ಯನು" ಎಂದು ನಾನಾವಿಧವಾದ ಗೌರವವಚನದಿಂದ ಪ್ರಶಂಸಿಸಿ, ಆದರಸತ್ಕಾರವನ್ನು ಮಾಡಿ ಅವನಿಗೆ ಶ್ರೇಷ್ಠಿಪದವಿಯನ್ನು ಕೊಟ್ಟನು.

ಇತ್ತ ರಾಣಿಯು ಕಪಟತನದಿಂದ ರತ್ನಗಳನ್ನು ಅರಮನೆಗೆ ತರಿಸಿದ ವಿಷಯವು ಶ್ರೀಭೂತಿಗೆ ತಿಳಿದು ಬಹಳ ಭಯಗ್ರಸ್ತನಾಗಿದ್ದನು. ಅನಂತರ ರಾಜನು ಶ್ರೀಭೂತಿಯನ್ನು ನೋಡಿ ಬಹಳ ಕೋಪದಿಂದ, "ಅರೇ ದುರಾತ್ಮಾ! ಇದುವರೆಗೆ ನಿನ್ನ ಕಪಟತನದಿಂದ ಎಲ್ಲಾ ಜನರನ್ನೂ ಮತ್ತು ನನ್ನನ್ನೂ ವಂಚಿಸಿದೆಯೇ! ಈಗ ನನಗೆ ನಿನ್ನ ಮೋಸಗಾರಿಕೆ ಯೆಲ್ಲಾ ತಿಳಿಯಿತು. ನೀನು ಸತ್ಯಘೋಷನೆಂಬ ಹೆಸರನ್ನು ಧರಿಸಿಕೊಂಡು ಯಜ್ಞೋಪವೀತದಲ್ಲಿ ತೀಕ್ಷ್ಣವಾದ ಚೂರಿಯನ್ನು ಹಾಕಿಕೊಂಡು ನಾನು ದೊಡ್ಡ ಸತ್ಯಂಭಟ್ಟನೆಂದು ತೋರಿಸಿಕೊಂಡು ಎಲ್ಲಾ ಜನಗಳನ್ನು ವಂಚಿಸುತ್ತಿಯೇ? ಈಗಲಾದರೂ ಸತ್ಯಸ್ಥಿತಿಯನ್ನು ಹೇಳು" ಎಂದನು. ಆ ಮೇಲೆ ಶ್ರೀಭೂತಿಯು, "ಮಹಾಸ್ವಾಮಿ! ನನ್ನಂತಹ ಸತ್ಯಸಂಧ ನಲ್ಲಿ ಇಂತಹ ಅಪರಾಧವು ಸಂಭವಿಸೀತೆಂದು ತಾವೂ ಯೋಚಿಸುವಿ ರೇನು? ನಾನು ಎಂದೂ ಈ ಅಪರಾಧವನ್ನು ಮಾಡಲಿಲ್ಲ. ದುಷ್ಟರು ನನ್ನ ಉತ್ಕರ್ಷತೆಯನ್ನು ನೋಡಿ ಸಹಿಸಲಾರದೆ ಮಾತ್ಸರ್ಯದಿಂದ ಇಲ್ಲದ ದೋಷಗಳನ್ನು ಆರೋಪಿಸಿರುವರು. ಆದಕಾರಣ ಮಹಾಸ್ವಾಮಿ ಯವರು ಅವರ ಮಾತಿನಲ್ಲಿ ವಿಶ್ವಾಸವನ್ನಿಡಬಾರದೆಂದು ವಿನಂತಿ" ಎಂದು ಹೇಳಿದನು. ಅನಂತರ ರಾಜನು ಈ ರೀತಿಯಾದ ಮಾತನ್ನು ಕೇಳಿ "ಇವನು ತನ್ನಪರಾಧವನ್ನು ಒಪ್ಪಿಕೊಂಡು ಕ್ಷಮೆಯನ್ನು ಬೇಡುತ್ತಿದ್ದರೆ, ಇವನಿಗೆ ಅಲ್ಪಶಿಕ್ಷೆಯು ಆಗುವ ಸಂಭವವಿತ್ತು. ಪರಂತು, ಈಗಲೂ ಈತನು ಸತ್ಯಾಪಲಾಪವನ್ನು ಮಾಡುವುದರಿಂದ ಕಠಿಣವಾದ ಶಿಕ್ಷೆಯನ್ನು ವಿಧಿಸಬೇಕೆ"ಂದು, "ನೀನು ಮಾಡಿದ ಅಪರಾಧಕ್ಕಾಗಿ ದೊಡ್ಡ ದೊಡ್ಡ ದಾವ ಮೂರು ಹರಿವಾಣದಲ್ಲಿ ತುಂಬಿರುವ ದನದ ಸೆಗಣಿಯನ್ನು ತಿನ್ನ ಬೇಕು. ಅಥವಾ ಬಲಿಷ್ಠರಾದ ಯೋದ್ಧರ ಮೂರು ಮುಷ್ಟಿಘಾತವನ್ನು ಸಹಿಸಬೇಕು, ಇಲ್ಲವಾದರೆ ನಿನ್ನ ದ್ರವ್ಯವನ್ನೆಲ್ಲಾ ಕೊಡಬೇಕು. ಈ ಮೂರರಲ್ಲಿ ನಿನಗೆ ಯಾವದು ಯುಕ್ತವೆಂದು ತೋರುತ್ತದೋ ಅದನ್ನು ಅನುಭವಿಸಬೇಕೆ"ಂದನು. ರಾಜಾಜ್ಞೆಯಾಗುತ್ತಲೇ ಸೇವಕರು ನಿನಗೆ ಯಾವದು ಇಷ್ಟವೆಂದು ಕೇಳಿದರು. ಆಗ ಶ್ರೀಭೂತಿಯು ಗೋಮಯವನ್ನು

ಭಕ್ಷಿಸುತ್ತೇನೆಂದನು. ಕೂಡಲೇ ರಾಜಸೇವಕರು ಮೂರು ಹರಿವಾಣದಲ್ಲಿ ಗೋಮಯವನ್ನು ತುಂಬಿ ತಂದಿರಿಸಿದರು. ಆಗ ಶ್ರೀಭೂತಿಯು ಅದನ್ನು ಭಕ್ಷಿಸುವುದಕ್ಕೆ ಪ್ರಾರಂಭಿಸಿದನು. ಪರಂತು ಅದು ಅತ್ಯಧಿಕವಾಗಿದ್ದುದರಿಂದಲೂ ದುರ್ಗಂಧಮಯವಾಗಿದ್ದುದರಿಂದಲೂ ತಿನ್ನಲಾರದೆ ಅಲ್ಪ ಸ್ವಲ್ಪ ತಿಂದು ಸೋತು ಹೊದನು. ಅನಂತರ ಮಲ್ಲರ ಮುಷ್ಟಿಘಾತವಾಗಬಹುದೆಂದನು. ಪರಂತು ರಾಜಮಲ್ಲರ ಒಂದು ಮುಷ್ಟಿಘಾತವನ್ನೂ ಸಹಿಸಲಾರದೆ, ಕೊನೆಗೆ ತನ್ನ ದ್ರವ್ಯವನ್ನೆಲ್ಲಾ ಕೊಡುತೇನೆಂದು ಒಪ್ಪಿಕೊಂಡು ಕೂಡಲೇ ತಂದು ಕೊಟ್ಟನು. ಈ ರೀತಿಯಾಗಿ ಮೂರು ವಿಧವಾದ ಶಿಕ್ಷೆಯನ್ನೂ ಅನುಭವಿಸಿ, ಕೆಲವು ದಿವಸಗಳಲ್ಲಿ ರೌದ್ರಧ್ಯಾನದಿಂದ ಮರಣವನ್ನು ಹೊಂದಿ ದ್ರವ್ಯದ ಲೋಭದಿಂದ ರಾಜನ ಕೋಶಾಗಾರದಲ್ಲಿ ಅಂಗದನೆಂಬ ಸರ್ಪನಾಗಿ ಹುಟ್ಟಿ ಅಲ್ಲಿ ಮರಣಹೊಂದಿ ಆ ಮೇಲೆ ನಾನಾ ಪ್ರಕಾರವಾದ ಕುಯೋನಿಗಳಲ್ಲಿ ಭ್ರಮಿಸುತ್ತಿದ್ದನು.

ವಸುನಂದಿಶ್ರಾವಕಾಚಾರದ ಹಿಂದೀ ಟೀಕೆಯಲ್ಲಿ ಸತ್ಯಘೋಷನ ಜೀವನು ಮರಣವನ್ನು ಹೊಂದಿ ರಾಜನ ಖಜಾನೆಯಲ್ಲಿ ಅಂಗದ ಅಥವಾ ಗಂಧಮಾದನನೆಂಬ ಸರ್ಪನಾಗಿ ಹುಟ್ಟಿ ಒಂದು ದಿವಸ ರಾಜನು ಅಲ್ಲಿಗೆ ಬಂದಾಗ ಅವನಿಗೆ ಕಚ್ಚಿತೆಂದೂ ಅನಂತರ ಗಾರುಡಿಗಳು ಮಂತ್ರ ಸಾಮರ್ಥ್ಯದಿಂದ ಎಲ್ಲಾ ಸರ್ಪಗಳನ್ನು ಆಮಂತ್ರಿಸಿ ಯಾವ ಸರ್ಪವು ರಾಜನನ್ನು ಕಚ್ಚಿದೆಯೋ ಅದು ಆ ವಿಷವನ್ನು ಸೆಳೆದು ತೆಗೆಯಬೇಕೆಂದೂ ಇಲ್ಲವಾದರೆ ಅಗ್ನಿಕುಂಡದಲ್ಲಿ ಪ್ರವೇಶಿಸಬೇಕೆಂದೂ ಆಜ್ಞಾಪಿಸಲು ಎಲ್ಲಾ ಸರ್ಪಗಳು ಅಗ್ನಿಕುಂಡವನ್ನು ಪ್ರವೇಶಿಸಿ ಹೊರಟು ಹೋದವೆಂದೂ ಈ ಗಂಧಮಾದನವೆಂಬ ಸರ್ಪವು ರಾಜನ ವಿಷವನ್ನು ಸೆಳೆಯದೆ ಅಗ್ನಿಕುಂಡದಲ್ಲಿ ಪ್ರವೇಶಿಸಿ ಭಸ್ಮವಾಗಿ ನರಕಾದಿ ದುರ್ಗತಿಯನ್ನು ಹೊಂದಿತೆಂದೂ ಇಷ್ಟು ವಿಶೇಷವಿದೆ.

ಸತ್ಯಘೋಷನು ತನ್ನ ಅಸತ್ಯತೆಯಿಂದ ಇಹಪರ ಜನ್ಮದಲ್ಲಿ ಅಂತ್ಯಂತ ಕಠಿನವಾದ ದುಃಖಗಳನ್ನು ಅನುಭವಿಸಬೇಕಾಯಿತು. ಆದಕಾರಣ ಅಸತ್ಯವನ್ನಾಡಬಾರದೆಂದು ಮುಖ್ಯಾಭಿಪ್ರಾಯವು.

(೫೧೮)

## ತಾಪಸನೆಂಬ ಚೋರನ ಕಥೆ.

ಪೂರ್ವದಲ್ಲಿ ವತ್ಸವೆಂಬ ದೇಶದ ಕೌಶಾಂಬಿನಗರದಲ್ಲಿ ಸಿಂಹರಥನೆಂಬ ರಾಜನು ತನ್ನ ವಿಜಯಾದೇವಿಯೆಂಬ ರಾಣಿಯೊಡನೆ ಸುಖವಾಗಿದ್ದನು. ಅದೇ ನಗರದಲ್ಲಿ ಒಬ್ಬ ಚೋರನು ಕಪಟದಿಂದ ಸನ್ಯಾಸಿಯ ವೇಷವನ್ನು ಧರಿಸಿಕೊಂಡು ಒಂದು ಆಲದ ಮರದಲ್ಲಿ ನೆಲುವನ್ನು ಕಟ್ಟಿ 'ನಾನು ಭೂಮಿಯನ್ನು ಸ್ಪರ್ಶಿಸಲಾರೆನೆಂದು ಅದರಲ್ಲಿ ಕೂತುಕೊಂಡು ಪಂಚಾಗ್ನಿ ಸಾಧನವೆಂಬ ತಪಸ್ಸನ್ನು ಮಾಡುತ್ತಿದ್ದನು. ಮತ್ತು ರಾತ್ರಿಯಲ್ಲಿ ನಗರದೊಳಗೆ ಪ್ರವೇಶಿಸಿ ಕಳವು ಮಾಡುತ್ತಿದ್ದನು. ಈ ರೀತಿಯಾಗಿ ಪ್ರತಿದಿನವೂ ನಗರದಲ್ಲಿ ಕಳವು ಆಗುವುದನ್ನು ನೋಡಿ ಜನರು ರಾಜನ ಹತ್ತಿರ ಈ ಸಮಾಚಾರವನ್ನು ತಿಳಿಸುತ್ತಿದ್ದರು. ಪರಂತು, ಈ ತಪಸ್ವಿಯು ತನ್ನ ಕಪಟಾಚರಣೆಯಿಂದ ಎಲ್ಲಾ ಜನರಿಂದಲೂ ಗೌರವಿಸಲ್ಪಡುತ್ತಿದ್ದನು. ಆದಕಾರಣ ಚೋರನನ್ನು ಹುಡುಕಲು ಬಹಳ ಕಠಿಣವಾಗಿತ್ತು. ಒಂದು ದಿವಸ ರಾಜನು ತನ್ನ ಕೋತವಾಲನನ್ನು ಕರೆದು, ''ನೀನು ಏಳು ದಿವಸಗಳೊಳಗೆ ಚೋರನನ್ನು ಹಿಡಿದು ತರಬೇಕು. ಇಲ್ಲವಾದರೆ ನಿನ್ನ ಶಿರಚ್ಛೇದನೆಯನ್ನು ಮಾಡಿಸಲಾದೀತು'' ಎಂದು ಆಜ್ಞಾಪಿಸಿದನು. ಅದನ್ನು ಕೇಳಿ ಕೋತವಾಲನು, ''ಮಹಾಸ್ವಾಮಿ! ತಮ್ಮಾಜ್ಞೆಯಂತೆ ವರ್ತಿಸುವೆನೆ''ಂದು ನಮಸ್ಕರಿಸಿ ಹೊರಟುಹೋದನು.

ಇತ್ತ ಕೋತವಾಲನು ಬಹಳವಾಗಿ ಹುಡುಕಿದರೂ, ಚೋರನ ಪತ್ತೆಯಾಗಲಿಲ್ಲ. ಆದಕಾರಣ ಬಹಳ ಸೋತವನಾಗಿ ಒಂದೆಡೆ ಕೂತುಕೊಂಡು, ''ಆರು ದಿವಸಗಳು ಕಳೆದು ಹೋದವು. ಇಂದು ಕೊನೆಯ ದಿವಸ, ಇನ್ನೂ ಚೋರನು ಸಿಕ್ಕಲಿಲ್ಲ. ನಾಳೆ ರಾಜನು ನನ್ನ ಶಿರಚ್ಛೇದನವನ್ನು ಮಾಡಿಸುವನು. ಇನ್ನೇನು ಮಾಡುವುದು?'' ಎಂದು ಯೋಚಿಸುತ್ತಿದ್ದನು. ಹೀಗಿರಲು ಒಬ್ಬ ಕ್ಷುಧಾತುರನಾದ ಬ್ರಾಹ್ಮಣನು ಅವನ ಸಮೀಪಕ್ಕೆ ಬಂದು ಏನಾದರೂ ಭೋಜನಕ್ಕೆ ಕೊಡಯ್ಯಾ ಎಂದು ಬೇಡಿದನು. ಆಗ ಕೋತವಾಲನು—''ಅರೇ ಮೂರ್ಖಾ! ನನಗೆ ಪ್ರಾಣಘಾತಕವಾದ ಒಂದು ಸಂಕಷ್ಟವು ಪ್ರಾಪ್ತವಾಗಿದೆ. ಅದನ್ನು ಯಾವ ಉಪಾಯದಿಂದ

ನಿವಾರಿಸುವುದೆಂದು ಚಿಂತಾತುರನಾಗಿದ್ದೇನೆ. ನೀನು ನನ್ನೊಡನೆ ಆಹಾರ ವನ್ನು ಬೇಡುತ್ತೀಯೇ! ನಿನಗಾದರೂ ಹೇಳಬೇಕೇನು ?'' ಎಂದನು. ಆ ಮಾತನ್ನು ಕೇಳಿ ಬ್ರಾಹ್ಮಣನು, "ಏನಯ್ಯಾ ಅಂತಹ ಸಕಂಷ್ಟ ? ನನ್ನೊ ಡನೆ ಹೇಳಬಾರದೇ ? '' ಇಂತೆಂದನು. ಆಗ ಕೋತವಾಲನು ಈ ಸಮಾ ಚಾರವನ್ನೆಲ್ಲಾ ಅವನಿಗೆ ತಿಳಿಸಲು, "ಈ ನಗರದಲ್ಲ ನಿಸ್ಪೃಹಿಗಳಂತೆ ಕಾಣಿಸಿಕೊಳ್ಳುವವರು ಯಾರಾದರೂ ಇದ್ದಾರೆಯೇ? ಎಂದು ಬ್ರಾಹ್ಮ ಣನು ಕೇಳಿದನು. ಈ ರೀತಿ ವಿಲಕ್ಷಣವಾದ ಬ್ರಾಹ್ಮಣನ ಪ್ರಶ್ನೆಯನ್ನು ಕೇಳಿ ಕೋತವಾಲನು ಆಶ್ಚರ್ಯಚಕಿತನಾಗಿ, "ಇಲ್ಲಿ ಓರ್ವ ತಪಸ್ವಿಯು ಇದ್ದಾನೆ. ಅವನು ಬಹಳ ನಿಸ್ಪೃಹನು. ಅವನಿಂದ ಈ ಕೆಲಸವಾಗಲಾರ ದೆಂದು ನಾನು ನಂಬುತ್ತೇನೆ'' ಇಂತೆಂದನು. ಈ ಮಾತನ್ನು ಕೇಳಿ ಬ್ರಾಹ್ಮ ಣನು ಸಂತಾಪದಿಂದ, "ಯಾವ ಕಾರಣದಿಂದ ಅವನ ನಿಸ್ಪೃಹತೆಯ ವಿಷ ಯವಾಗಿ ಅವನನ್ನು ನೀನು ಪ್ರಶಂಸಿಸುತ್ತಿಯೋ, ಆದಕಾರಣ ಅವನೇ ಚೋರನಾಗಿರಬೇಕು. ಈ ವಿಷಯವಾಗಿ ನಿನಗೊಂದು ಸಣ್ಣ ದೃಷ್ಟಾಂತ ವನ್ನು ಕೊಡುವೆನು. ಅದೇನಂದರೆ, ನಾನು ಮೊದಲು ಬಹಳ ಸುಖವಂತ ನಾಗಿದ್ದೆನು ಈಗ ಮಾತ್ರ ನನಗೆ ಇಂತಹ ದುರವಸ್ಥೆಯು ಬಂದೊದಗಿದೆ. ಒಂದು ದಿವಸ ನನ್ನ ಪತ್ನಿಯು ತನ್ನ ಕಪಟಾಚರಣೆಯು ಯಾರಿಗೂ ತಿಳಿ ಯಬಾರದೆಂದು ತನ್ನ ಶರೀರವನ್ನೆಲಾ ವಸ್ತ್ರದಿಂದ ಆಚ್ಛಾದಿಸಿಕೊಂಡು ಸ್ತನದ ಅಗ್ರಭಾಗವನ್ನು ಮಾತ್ರ ತೆರೆದು ಮಗುವಿಗೆ ಮೊಲೆಯುಣ್ಣಿಸುತ್ತಿ ದ್ದಳು. ಕಾರಣವೇನಂದರೆ? ತಾನು ಪರಪುರುಷರಲ್ಲಿ ವಿರಕ್ತಳೆಂದು ಜನರಿಗೆ ತೋರಿಸಿಕೊಳ್ಳುವುದಕ್ಕೋಸ್ಕರ ತನ್ನ ಮಗುವಿಗೆ ಹಸ್ತವನ್ನು ಕೂಡ ತನ್ನ ಸ್ತನಕ್ಕೆ ಸ್ಪರ್ಶಿಸಲು ಬಿಡುತ್ತಿರಲಿಲ್ಲವು. ಆಕೆಯು ಈ ಡಾಂಬಿಕ ವರ್ತನ ದಿಂದ ಜನರು ಅವಳನ್ನು ಮಹಾಪತಿವ್ರತೆಯೆಂದು ತಿಳಿಯುತ್ತಿದ್ದರು. ನಾನೂ ಹಾಗೆಯೇ ತಿಳಿದಿದ್ದೆನು. ಪರಂತು, ಒಂದು ದಿವಸ ರಾತ್ರಿ ನಾನು ಮಲಗಿದ್ದಸಮಯದಲ್ಲಿ ನನಗೆ ನಿದ್ರೆ ಬಂದಿದೆಯೆಂದು ತಿಳಿದು, ಆಕೆಯು ತನ್ನ ಜಾರನೊಡನೆ ವ್ಯಭಿಚಾರವನ್ನು ಮಾಡಿಸುತ್ತಿದ್ದಳು. ಅದನ್ನು ನೋಡಿ ನಾನು ಆ ಮೊದಲುಗೊಂಡು ಸಂಸಾರದಿಂದ ವಿರಕ್ತನಾಗಿ ತೀರ್ಥಯಾತ್ರೆ

ಗೋಸ್ಕರ ಹೊರಟೆನು. ಮತ್ತು ನನ್ನ ಪ್ರಯಾಣ ಖರ್ಚಿಗೋಸ್ಕರ ಏನಾದರೂ ಇರಬೇಕೆಂದು ಯೋಚಿಸಿ ನನ್ನಲ್ಲಿದ್ದ ಸುವರ್ಣವನ್ನೆಲ್ಲಾ ಕರಗಿಸಿ ಒಂದು ಸುವರ್ಣಶಲಾಕೆಯನ್ನು ಮಾಡಿಸಿದೆನು. ಅದನ್ನು ಒಂದು ಬಿದುರಿನ ಕೊಳವೆಯಲ್ಲಿ ತುಂಬಿಸಿ ಅದನ್ನು ಬಂದು ಮಾಡಿ, ಅದನ್ನು ಹಿಡಿದುಕೊಂಡು ಮನೆಯಿಂದ ಹೊರಟು ಹೋದೆನು. ಆ ಮೇಲೆ ಕೆಲವು ಪ್ರಯಾಣಗಳಾದನಂತರ ನನಗೊಬ್ಬ ಹುಡುಗನು ದಾರಿಯಲ್ಲಿ ಸಿಕ್ಕನು. ಆ ಹುಡುಗನಲ್ಲಿ ನನಗೆ ಸಂಪೂರ್ಣ ವಿಶ್ವಾಸವಿಲ್ಲದಿದ್ದುದರಿಂದ ನನ್ನ ಸುವರ್ಣ ಶಲಾಕಾಕಾಷ್ಟವನ್ನು ಬಹಳವಾಗಿ ರಕ್ಷಿಸುತ್ತಿದ್ದೆನು. ಪರಂತು, ಆ ವಿಷಯದಲ್ಲಿ ಅವನಿಗೆ ಸಂಶಯವುಂಟಾಗಿ ಅದರ ಮೇಲೆ ಅವನ ದೃಷ್ಟಿಯಿತ್ತು ಅನಂತರ ನಾನದನ್ನು ಬಹಳ ಸುರಕ್ಷಿತವಾಗಿಡುತ್ತಿದ್ದೆನು. ಹೀಗೆ ಪ್ರಯಾಣ ಮಾಡುತ್ತಾ ಸೂರ್ಯಾಸ್ತಮಾನವಾದುದರಿಂದ ನಾವೀರ್ವರೂ ಒಂದು ಗ್ರಾಮಕ್ಕೆ ಹೋಗಿ ಅಲ್ಲಿ ಒಂದು ಕುಂಬಾರನ ಮನೆಯಲ್ಲಿ ರಾತ್ರಿ ಮಲಗಿದೆವು. ಮರುದಿವಸ ಬೆಳಿಗ್ಯೆ ಬೇಗನೆ ಎದ್ದು ಮುಂದಿನ ಮಾರ್ಗವನ್ನಾಕ್ರಮಿಸಿದೆವು. ನಾವು ಕುಂಬಾರನ ಮನೆಯಿಂದ ಎದ್ದು ಹೋಗುವಾಗ ಆ ಪೋರನು ಒಂದು ಜೀರ್ಣವಾದ ಹುಲ್ಲನ್ನು ತನ್ನ ತಲೆಯ ವಸ್ತ್ರಕ್ಕೆ ಸಿಕ್ಕಿಸಿಕೊಂಡನು. ಆ ತೃಣವು ನನ್ನ ದೃಷ್ಟಿಗೆ ಬಿದ್ದರೂ ಏನೋ ಅವನ ವಸ್ತ್ರಕ್ಕೆ ತಗಲಿರಬಹುದೆಂದು ನಾನು ಊಹಿಸಿದ್ದೆನು. ಸ್ವಲ್ಪ ದೂರ ಹೋದನಂತರ ತನ್ನ ತಲೆಗೆ ಕೈಹಾಕಿ ಆ ತೃಣವನ್ನು ತೆಗೆದು, "ಅಯ್ಯೋ! ನಾನು ಪರವಸ್ತುವನ್ನು ಅಪಹರಿಸಿಕೊಂಡು ಬಂದೆನು. ಇದೊಂದು ಸಣ್ಣ ತೃಣವಾದರೂ ಪರದ್ರುವ್ಯವಾಗಿದೆ. ನನ್ನ ಅಚೌರ್ಯಾಣುವ್ರತವು ಬಹಳ ಕಠಿಣವಾಗಿದೆ. ಆದಕಾರಣ ನಾನದನ್ನು ಅಲ್ಲಿಯೇ ಕೊಟ್ಟು ಬರುತ್ತೇನೆ"ಂದು ವಾಪಾಸು ಹೊರಟು ಹೋದನು. ಆಗ ಅವನ ನಿಸ್ಪೃಹತೆಯನ್ನು ನೋಡಿ ಬಹಳ ಆಶ್ಚರ್ಯವಾಯಿತು. ನಾನು ಇಂತಹ ಶುದ್ಧಾಚರಣೆಯುಳ್ಳ ಹುಡುಗನ ವಿಷಯದಲ್ಲಿ ಮೊದಲು ಸಂಷಯವನ್ನು ಪಟ್ಟೆನು. ಇಂತಹ ತೃಣಕಡ್ಡಿಯನ್ನು ಅದತ್ತವೆಂದು ತಿಳಿದು ವಾಪಾಸು ಯಾರು ಕೊಡುವರು? ಆದಕಾರಣ ನಿಜವಾಗಿಯೂ ಇಂತಹ ಸತ್ಪುರುಷರು

ಲೋಕದಲ್ಲಿರುವುದು ದುರ್ಲಭ! ಈ ಪ್ರಕಾರವಾದ ಪೂಜ್ಯಬುದ್ಧಿಯು ಅವನಲ್ಲಿ ನನಗುಂಟಾಯಿತು [ಇಷ್ಟು ಹೇಳುವಾಗ ಅವನಿಗೆ ದುಃಖ ವುಂಟಾಗಿ ಅಶ್ರುಪಾತವನ್ನು ಮಾಡುತ್ತಾ ಗದ್ಗದ ವಾಣಿಯಿಂದ] ಅಯ್ಯಾ! ನನಗೆ ಹೇಳುವುದಕ್ಕೆ ಬಹಳ ವ್ಯಸನವಾಗುತ್ತದೆ. ನಾನು ಆ ಪೋರನ ಕಪಟಜಾಲಕ್ಕೆ ಸಿಲುಕಿ ಈ ರೀತಿಯಾದ ದುರವಸ್ಥೆಯನ್ನು ಹೊಂದಿದೆನು. ಅದೇನೆಂದು ನಿನಗೆ ಮುಂದಿನ ಗೋಷ್ಟಿಯಿಂದ ಗೊತ್ತಾಗದಿರದು.

"ಆ ಮೇಲೆ ನಾನು ಪ್ರಯಾಣ ಮಾಡುತ್ತಾ ಸಾಯಂಕಾಲ ಒಂದು ಗ್ರಾಮಕ್ಕೆ ಬಂದು ತಲ್ಪಿದೆನು. ಅಲ್ಲಿ ನಾನು ರಾತ್ರಿ ಭೋಜನವನ್ನು ತೀರಿಸಿ ವಿಶ್ರಾಂತಿಯನ್ನು ಮಾಡಿಕೊಂಡಿರುವಾಗ ಆ ದುಷ್ಟ ಪೋರನು ಅಲ್ಲಿಗೆ ಬಂದನು. ಆಗ ಭೋಜನಕ್ಕೆ ಅವನಿಗೇನೂ ಇಲ್ಲದ ಕಾರಣ ಪೇಟೆಗೆ ಹೋಗಿ ಭೋಜನ ಸಾಮುಗ್ರಿಗಳನ್ನು ತೆಗೆದುಕೊಂಡು ಬಾ ಎಂದು ಹೇಳಿದೆನು. ಆಗ ಅವನು, 'ಈಗ ಕತ್ತಲೆ, ನಾಯಿಗಳ ಕಾಡ! ನನಗೆ ಭಯ ವಾಗುತ್ತಿದೆ. ಆ ಕಾಷ್ಟದಂಡವನ್ನಾದರೂ ಕೊಟ್ಟರೆ ನಿರಾಯಾಸವಾಗಿ ಹೋಗಿ ಬರುವೆನೆ''ಂದನು. ನಾನು ಮೊದಲೇ ಅವನ ಮೇಲೆ ವಿಶ್ವಾಸವ ನ್ನಿಟ್ಟದ್ದರಿಂದ ಕೂಡಲೇ ಆ ದಂಡವನ್ನು ತೆಗೆದು ಕೊಟ್ಟೆನು. ಆಗ ಆ ಪೋರನು ಕಾಷ್ಟದಂಡವು ಹಸ್ತಗತವಾಗುತ್ತಲೇ ತನ್ನ ಮನೋರಥವು ಸಿದ್ಧಿಸಿತೆಂದು ಎಲ್ಲಿಯೋ ಪಲಾಯನ ಮಾಡಿದನು. ನಾನು ಬಹಳ ಸಮ ಯದ ವರೆಗೆ ಅವನ ಆಗಮನವನ್ನು ನಿರೀಕ್ಷಿಸುತ್ತಿದ್ದರೂ ಅವನು ಬಾರದಿ ದ್ದುದರಿಂದ ನನಗೆ ಸಂಶಯವುಂಟಾಗಿ ನನ್ನ ಕೃತಕರ್ಮನಿಮಿತ್ತವಾಗಿ ಬಹಳ ಪಶ್ಚಾತ್ತಾಪ ಪಟ್ಟೆನು. ಈ ರೀತಿಯಾಗಿ ನನ್ನ ದ್ರವ್ಯವು ನಷ್ಟವಾ ದುದಕ್ಕಾಗಿ ಬಹಳ ದುಃಖವಾಗುತ್ತಿದೆ. ಈ ಪ್ರಕಾರವಾಗಿ ನನಗಾದ ಕೌಟಿಲ್ಯದ ಎರಡು ಅನುಭವವನ್ನು ನಿನಗೆ ತಿಳಿಸಿದೆನು.

''ಮುಂದೆ ಹೀಗೆಯೇ ಹೋಗುತ್ತಿರಲು ದಾರಿಯಲ್ಲಿ ಒಂದು ಅರ ಣ್ಯದಲ್ಲಿ ಒಂದು ಮರದ ಮೇಲೆ ಕೆಲವು ಪಕ್ಷಿಗಳು ವಾಸಮಾಡಿಕೊಂಡಿ ದ್ದುವು. ಅವುಗಳಲ್ಲೊಂದು ವೃದ್ಧಪಕ್ಷಿಯು ಇತ್ತು. ಅದು ರಾತ್ರಿಯಲ್ಲಿ ಇತರ ಪಕ್ಷಿಗಳನ್ನು ಕುರಿತು, 'ಮಕ್ಕಳೇ! ನಾನೀಗ ವೃದ್ಧನಾಗಿರುವೆನು.

ನನಗೀಗ ಹೊರಗೆ ಹೋಗಿ ಆಹಾರವನ್ನು ತರಲು ಶಕ್ತಿಯಿಲ್ಲ. ಎಂದಾ ದರೂ ಕ್ಷುಧಾತುರನಾಗಿ ನಿಮ್ಮ ಮರಿಗಳನ್ನೇ ನಾನು ಭಕ್ಷಿಸಬಹದು. ಆದಕಾರಣ ನೀವು ಬೆಳಿಗ್ಗೆ ಎದ್ದು ಹೋಗುವಾಗ ನನ್ನ ಕೊಕ್ಕನ್ನು ಹಗ್ಗ ದಿಂದ ಕಟ್ಟಿ ಹೋದರೆ ನನ್ನಿಂದ ಅಂತಹ ಅನಾಚಾರವು ಆಗುವ ಸಂಭವ ವಿರಲಾರದು' ಎಂದು ವೃದ್ಧಪಕ್ಷಿಯು ಹೇಳಿತು. ಇದನ್ನು ಕೇಳಿ ಇತರ ಪಕ್ಷಿಗಳು 'ಅಜ್ಜಾ! ತಾವೇನನ್ನುವಿರಿ? ತಮ್ಮಂತಹ ವೃದ್ಧರಿಂದ ಇಂತಹ ಅನಾಚಾರವೆಂದೂ ಆಗಲಾರದು.' ಎಂದು ಹೇಳಿದವು. ಆಗ ಕಪಟಿಯಾದ ವೃದ್ಧಪಕ್ಷಿಯು 'ನೀವನ್ನುವುದೇನೋ ನಿಜ! ಆದರೆ 'ಬುಭುಕ್ಷಿತಃ ಕಿಂ ನ ಕರೋತಿ ಪಾಪಂ?' ಎಂಬ ನೀತಿಯಂತೆ ಕ್ಷುಧಾತುರನಾದವನು ಸದಾ ಚಾರಿಯೂ ವೃದ್ಧನೂ ಆಗಿದ್ದರೂ ಅವನಿಂದಲೂ ಹಲವು ಅನಾಚಾರ ಗಳು ಆಗುವ ಸಂಭವವುಂಟು.' ಎಂದು ಹೇಳಿದ ಮಾತನ್ನು ಕೇಳಿ ಎಷ್ಟು ಹೇಳಿ ಸಮಾಧಾನವನ್ನು ಪಡಿಸಿದರೂ ತನ್ನಾಗ್ರಹವನ್ನು ಬಿಡಲಿಲ್ಲ ಕೊನೆಗೆ ಪಕ್ಷಿಗಳು ಸಮ್ಮತಿಯನ್ನಿತ್ತವು. ಈ ಪ್ರಕಾರವಾದ ಪಕ್ಷಿಗಳ ಸಂವಾದವನ್ನು ಕೇಳಿ ನನಗೆ ವೃದ್ಧಪಕ್ಷಿಯಮೇಲೆ ಸಂಶಯವುಂಟಾಯಿತು. ಈ ಪ್ರಕಾರವಾದ ವಿಲಕ್ಷಣ ಆಗ್ರಹವನ್ನು ಮಾಡುವುದರಲ್ಲಿ ಏನಾದರೂ ಕಪಟವಿರಬೇಕೆಂದು ನಾನು ಯೋಚಿಸಿದೆನು. ಮಾರಣೆ ದಿವಸ ಬೆಳಿಗ್ಗೆ ಆ ಪಕ್ಷಿಗಳು ವೃದ್ಧಪಕ್ಷಿಯ ಕೊಕ್ಕನ್ನು ಬಂಧಿಸಿ ಆಹಾರಕ್ಕೋಸ್ಕರ ಹೊರಟು ಹೋದವು. ಇತ್ತ ವೃದ್ಧಪಕ್ಷಿಯು ತನ್ನ ಮುಖಬಂಧನವನ್ನು ಮೆಲ್ಲಗೆ ಬಿಚ್ಚಿಕೊಂಡು ಪಕ್ಷಿಮರಿಗಳನ್ನು ತಿಂದು ಮೊದಲಿನಂತೆ ಕೊಕ್ಕನ್ನು ಬಂಧಿಸಿಕೊಂಡು, ಕಪಟತನದಿಂದ ಹೊಟ್ಟೆ ಹಸಿದಿರುವಂತೆ ಆ ಪಕ್ಷಿಗಳ ಆಗಮನವನ್ನು ನಿರೀಕ್ಷಿಸುತ್ತಿತ್ತು. ಪಕ್ಷಿಗಳಲ್ಲಿಯೂ ಈ ಪ್ರಕಾರವಾದ ಕಾಪಟ್ಯವನ್ನು ನೋಡಿ ನಾನು ಬಹಳ ಆಶ್ಚರ್ಯಚಕಿತನಾದೆನು. ಆ ಮೇಲೆ ನಾನು. ಅಲ್ಲಿಂದ ಹೊರಟು ಮುಂದೆ ಹೋಗುತ್ತಾ ಒಂದು ನಗರ ದಲ್ಲಿ ಒಂದು ವಿಲಕ್ಷಣವಾದ ಕೌಟಿಲ್ಯವನ್ನು ನೋಡಿದೆನು. ಅದೇನಂದರೆ, ಅಲ್ಲೊಬ್ಬ ಚೋರನಿದ್ದನು. ಅವನು ತಪಸ್ವಿಗಳ ವೇಷವನ್ನು ಧರಿಸಿ ತನ್ನ ತಲೆಯ ಮೇಲೆ ಒಂದು ದೊಡ್ಡ ಬಂಡೆ ಕಲ್ಲನ್ನು ಹೊತ್ತುಕೊಂಡು ನಗರ

ದಲ್ಲೆಲ್ಲಾ ರಾತ್ರಿಹಗಲು ಅಪಸರ ಜೀವ, ಪದಂ ದದಾಮಿ, ಅಪಸರ ಜೀವ, ಪದಂ ದಗಾಮಿ' ಅಂದರೆ, "ಜೀವಿಗಳೇ! ಒಂದು ಪಾರ್ಶ್ವದಲ್ಲಿ ಹೋಗಿ, ನಾನು ಹೆಜ್ಜೆಯನ್ನಿಡುತ್ತೇನೆ." ಎಂದು ಪುನಃ ಪುನಃ ಹೇಳುತ್ತಾ ತಿರುಗುತ್ತಿತ್ತು. ಆದಕಾರಣ ಜನಗಳು ಇವನನ್ನು ಪರಮದಯಾಲುವೆಂದೂ ಪೂಜ್ಯನೆಂದೂ ಪರಿಭಾವಿಸುತ್ತಿದ್ದರು. ಆದ್ದರಿಂದ ಅವನನ್ನು ಎಲ್ಲರೂ ಅಪಸರ ಜೀವ ಸಾಧು ಎಂದು ಕರೆಯುತ್ತಿದ್ದರು. ಪರಂತು ಅವನ ದಯಾಲುತ್ವವು ವಿಲಕ್ಷಣವಾಗಿತ್ತು. ಯಾರಾದರೂ ಪೂಜ್ಯಬುದ್ಧಿಯಿಂದ ಸುವರ್ಣಾಭರಣಗಳನ್ನು ಧರಿಸಿಕೊಂಡು ರಾತ್ರಿಯಲ್ಲಿ ದರ್ಶನಕ್ಕೋಸ್ಕರ ಬಂದರೆ ಅವರು ನಮಸ್ಕರಿಸುತ್ತಲೇ ತನ್ನ ತಲೆಯ ಮೆಲಿರುವ ಕಲ್ಲನ್ನು ಅವರ ತಲೆಯ ಮೇಲೆ ಹೊತ್ತು ಹಾಕಿ ಪ್ರಾಣಘಾತವನ್ನು ಮಾಡಿ, ಆಭರಣಗಳನ್ನು ಸೆಳೆಕೊಳ್ಳುತ್ತಿದ್ದನು. ಯಾವಾಗಲೂ ಈ ಕ್ರಮವು ಸಾಂಗವಾಗಿ ನಡೆಯುತ್ತಿತ್ತು. ನಗರವಾಸಿಗಳಿಗೆ ಅವನ ವಿಷಯದಲ್ಲಿ ಏನೂ ಸಂಶಯಉಂಟಾಗುತ್ತಿರಲಿಲ್ಲ. ಇದು ನಾನು ಸ್ವತಃ ನೋಡಿದ ನಾಲ್ಕನೆಯ ಕೌಟಿಲ್ಯ! ಈ ಕೌಟಿಲ್ಯದ ವಿಷಯವಾಗಿ ಒಂದು ಶ್ಲೋಕವನ್ನು ರಚಿಸಿದ್ದೇನೆ.

**ಬಾಲಮುಸ್ಪರ್ಶಿಕಾ ನಾರೀ, ಬ್ರಾಹ್ಮಣಸ್ತೃಣಹಿಂಸಕಃ**
**ವನೇ ಕಾಷ್ಠಮುಖಃ ಪಕ್ಷೀ, ಪುರೇಽಪಸರಜೀವಕಃ ||**

ಅಂದರೆ, ಪತಿವ್ರತಾಶಿರೋಮಣಿಯೆಂದು ತೋರಿಸಿಕೊಳ್ಳುವುದಕ್ಕೋಸ್ಕರ ತನ್ನ ಬಾಲಕನ ಹಸ್ತಸ್ಪರ್ಶವೂ ಆಗಗೊಡದಿರುವ [ನನ್ನ] ಸ್ತ್ರೀಯೂ, ತನ್ನ ಅಚೌರ್ಯವ್ರತದ ಮಹಿಮೆಯು ಜನಗಳಿಗೆ ತಿಳಿಯಬೇಕೆಂದು ಮತ್ತೊಬ್ಬರ ತೃಣಕಡ್ಡಿಯನ್ನೂ ಅದತ್ತವೆಂದು ಹಿಂತಿರುಗಿ ಕೊಡುವ ಬ್ರಾಹ್ಮಣನೂ ತನ್ನ ಕಾರ್ಯಸಾಧನೆಗೋಸ್ಕರ ವನದಲ್ಲಿ ಬಂಧಿಸಲ್ಪಟ್ಟ ಮುಖವುಳ್ಳ ವೃದ್ಧಪಕ್ಷಿಯೂ, ಕ್ರೂರಹೃದಯಿಯಾದ ನಗರದಲ್ಲಿರುವ ಅಪಸರಜೀವನೆಂಬ ಚೋರನೂ ಈ ನಾಲ್ವರೂ ಕಪಟತನದಲ್ಲಿ ಪ್ರಸಿದ್ಧರಾದವರು. ಇದು ನಾನು ಸ್ವತಃ ಅನುಭವಿಸಿದ ಕಥೆಯಾಗಿದೆ. ಆದಕಾರಣ ಇಂದು

ರಾತ್ರೆ ನಿನ್ನ ತಾಪಸಿಯನ್ನು ಪರೀಕ್ಷಿಸುವೇನೆ"ಂದನು. ಈ ರೀತಿಯಾದ ಬ್ರಾಹ್ಮಣನ ದೀರ್ಘಭಾಷಣವನ್ನು ಕೇಳಿ ಕೋತವಾಲನು ಅದಕ್ಕೆ ಒಡಂಬಟ್ಟು ತನ್ನ ಸ್ಥಾನಕ್ಕೆ ಹೊರಟು ಹೋದನು.

ಇತ್ತ ಬ್ರಾಹ್ಮಣನು ಸೂರ್ಯಾಸ್ತಮಾನವಾದನಂತರ ಆ ತಾಪಸಿಯಿರುವ ಸ್ಥಾನಕ್ಕೆ ಹೋದನು. ಕೂಡಲೇ ಅವನ ಶಿಷ್ಯರು ಇಲ್ಲಿಂದ ಹೊರಟು ಹೋಗೆಂದರು. ಆಗ ಬ್ರಾಹ್ಮಣನು ದೀನವಾಣಿಯಿಂದ, "ಸ್ವಾಮಿ! ನನಗೆ ರಾತ್ರೆಯಲ್ಲಿ ಕಣ್ಣು ಕಾಣುವುದಿಲ್ಲ. ಬಹಳ ಅಂಧಕಾರವಾಗಿದೆ. ಮುಂದೆ ಹೋಗಲಾರೆ, ಈಗ ಎಲ್ಲಿಯಾದರೂ ಇಲ್ಲೇ ರಾತ್ರಿಯನ್ನು ಕಳೆಯುವೆನು. ಬೆಳಗಾಗುತ್ತಲೇ ಹೋಗುವೆನು" ಎಂದು ಹೇಳಿದನು. ಆಗ ಶಿಷ್ಯರು ಈ ವಿಷಯವನ್ನು ತಮ್ಮ ಗುರುಗಳಿಗೆ ತಿಳಿಸಿದರು. ಆಗ ಅವರು ಅವನನ್ನು ಪರೀಕ್ಷಿಸಿರಿ ಎಂದು ಹೇಳಿದರು. ಕೂಡಲೇ ಶಿಷ್ಯರು ಅವನ ಕಣ್ಣಿನ ಸಮೀಪಕ್ಕೆ ಕಡ್ಡಿ ಮೊದಲಾದುವುಗಳನ್ನು ಹಿಡಿದು ಪರೀಕ್ಷಿಸಲು ಕಾಣದವನಂತೆ ಮಾಡಿದನು. ಆಗ "ಇರಲಿ ಒಂದು ಮೂಲೆಯಲ್ಲಿ ನಮಗೇನು ಮಾಡುವನು?" ಎಂದರು. ಬ್ರಾಹ್ಮಣನಿಗೆ ಈ ಪ್ರಕಾರವಾದ ಆಜ್ಞೆಯಾದನಂತರ ಅವನು ಒಂದೆಡೆ ಆನಂದದಿಂದ ಇದ್ದನು. ಆನಂತರ ಗುರುಶಿಷ್ಯರು ತಮ್ಮ ನಿತ್ಯಕ್ರಮದಂತೆ ಚೋರಪ್ರಯೋಗಕ್ಕೆ ಹೊರಟು ನಗರದೊಳಗೆ ಪ್ರವೇಶಿಸಿ ಬೇಕಾದ ದ್ರವ್ಯಗಳನ್ನು ಅಪಹರಿಸಿಕೊಂಡು ಬಂದು ತಮ್ಮ ಗುಹೆಯ ಸಮೀಪದಲ್ಲಿರುವ ಬಾವಿಯೊಳಗೆ ಹಾಕಿದರು. ಆ ಗುಹೆಯೊಳಗೆ ತಾಪಸಿಯ ಹೆಂಡತಿಮಕ್ಕಳೂ ಇರುತ್ತಿದ್ದರು. ಇದನ್ನೆಲ್ಲಾ ಬ್ರಾಹ್ಮಣನು ನೋಡಿ ನಿಜವಾಗಿಯೂ ತಾಪಸಿಯು ಚೋರನೆಂದು ನಿಶ್ಚೈಸಿಕೊಂಡನು. ಮಾರಣೆ ದಿವಸ ಕೋತವಾಲನ ಅವಧಿಯು ಮುಗಿದುದರಿಂದಲೂ ಕಳ್ಳನ ಪತ್ತೆಯಾಗದಿದ್ದುದರಿಂದಲೂ ರಾಜನು ಕೋಪಾವಿಷ್ಟನಾಗಿ ಕೋತವಾಲನ ಶಿರಚ್ಛೇದವನ್ನು ಮಾಡಲು ಆಜ್ಞಾಪಿಸುವಷ್ಟರಲ್ಲಿ ಈ ಪೂರ್ವೋಕ್ತವಾದ ಬ್ರಾಹ್ಮಣನು ತಾಪಸಿಯನ್ನೂ ಅವನ ಶಿಷ್ಯರನ್ನೂ ಕೈದುಮಾಡಿಸಿ ಕೋತವಾಲನೊಡನೆ ರಾಜಸಭೆಗೆ ಬಂದನು. ರಾಜನು ಇದನ್ನು ನೋಡಿ ಆಶ್ಚರ್ಯ

ಚಕಿತನಾಗಿ ಇದೇನೆಂದು ಕೇಳಲು, ಬ್ರಾಹ್ಮಣನು ಇದರ ಸಮಾಚಾರವ ನ್ನೆಲ್ಲಾ ಇತ್ಥಂಭೂತವಾಗಿ ತಿಳಿಸಿದನು. ರಾಜನು ಇದನ್ನು ಕೇಳುತ್ತಲೇ ತಾಪಸಿಯ ಶಿರಚ್ಛೇದನವನ್ನು ಮಾಡುವಂತೆಯೂ ಮತ್ತು ಇತರ ಶಿಷ್ಯ ವೃಂದವನ್ನು ಕಾರಾಗೃಹದಲ್ಲಿಡುವಂತೆಯೂ ಆಜ್ಞೆಯನ್ನಿತ್ತನು ಕೋತವಾ ಲನು ರಾಜಾಜ್ಞೆಯಂತೆ ತಾಪಸಿಯ ಶಿರಚ್ಛೇದವನ್ನು ಮಾಡಿದನಂತರ ಆರ್ತ ಧ್ಯಾನದಿಂಡ ಮರಣವನ್ನು ಹೊಂದಿ ನರಕಾದಿದುರ್ಗತಿಯನ್ನು ಹೊಂದಿದನು

ಅದಕಾರಣ ಈ ಕಥಾನಾಯಕನಾದ ತಾಪಸೀಚೋರನಂತೆ ಚೌರ್ಯಕರ್ಮ ದಿಂದ ಇಹಪರಲೋಕದಲ್ಲಿ ಭಯಂಕರವಾದ ದುಃಖಗಳನ್ನು ಅನುಭವಿಸಬೇ-ಕಾಗುತ್ತದೆ. ಆದ್ದರಿಂದ ಚೌರ್ಯವನ್ನು ಬಿಡಬೇಕೆಂದು ಮುಖ್ಯಾಭಿಪ್ರಾಯವು.

## ಯಮದಂಡನೆಂಬ ಕೋತವಾಲನ ಕಥೆ.

ಅಹೀರದೇಶದ ನಾಸಿಕ್ಯವೆಂಬ ನಗರದಲ್ಲಿ ಕನಕರಥನೆಂಬ ರಾಜನು ತನ್ನ ಕನಕಮಾಲೆಯೆಂಬ ಪತ್ನಿಯೊಡನೆ ಸುಖವಾಗಿದ್ದನು. ಆದೇ ನಗರದಲ್ಲಿ ಯಮದಂಡನೆಂಬ ಕೋತವಾಲನಿದ್ದನು. ಅವನ ತಾಯಿಯ ಹೆಸರು ವಸುಂ ಧರಿ, ಅವಳು ಬಾಲವಿಧವೆಯಾಗಿದ್ದು ಬಹಳ ವ್ಯಭಿಚಾರಿಣಿಯಾಗಿದ್ದಳು. ಆಕೆಯು ಒಂದು ದಿವಸ ರಾತ್ರಿಯಲ್ಲಿ ತನ್ನ ಸೊಸೆಯ ಆಭರಣಗಳನ್ನು ಧರಿಸಿಕೊಂಡು ತನ್ನ ಜಾರನಿದ್ದ ಸಂಕೇತಸ್ಥಳಕ್ಕೆ ಹೋಗುತ್ತಿರಲು ಯಮ ದಂಡನು ತನ್ನ ತಾಯಿಯೆಂದು ತಿಳಿಯದೆ ಯಾರೋ ವ್ಯಭಿಚಾರಿಣೀಸ್ತ್ರೀ ಯೆಂದು ಸಂಕೇತಸ್ಥಾನದಲ್ಲಿ ಅವಳೊಡನೆ ಕಾಮಸೇವನೆಯನ್ನು ಮಾಡಿ ದನು. ಮತ್ತು ಅವಳು ಕೊಟ್ಟ ಆಭರಣಗಳನ್ನು ತೆಗೆದುಕೊಂಡು ಮನೆಗೆ ಹೋಗಿ ತನ್ನ ಪತ್ನಿಯ ಕೈಯಲ್ಲಿ ಕೊಟ್ಟನು. ಆಗ ಅವಳ ಆ ಆಭರಣಗ ಳನ್ನು ನೋಡಿ, "ಇವು ನನ್ನ ಆಭರಣಗಳು ಇಂದು ಅವರು ನನ್ನ ಹತ್ತಿರ ಕೇಳಿ ತೆಗೆದುಕೊಂಡಿರುವರು. ಇವು ತಮ್ಮ ಕೈಗೆ ಬರಲು ಕಾರಣವೇನು?" ಎಂದು ಕೇಳಿದಳು. ಆಗ ಯಮದಂಡನಿಗೆ ನಾನು ನನ್ನ ಮಾತೆಯೊಡನೆ ಕಾಮಸೇವನೆಯನ್ನು ಮಾಡಿದೇನೆಂದು ಬಹಳ ಪಶ್ಚಾತ್ತಾಪವಾಗಿ ಪತ್ನಿಯ ಪ್ರಶ್ನೆಗೆ ಏನೋ ಉತ್ತರವನ್ನಿತ್ತು ಸಮಾಧಾನ ಪಡಿಸಿದನು.

ಪರಂತು ಯಮುದಂಡನು ಅತ್ಯಂತ ಕಾಮಾಸಕ್ತನಾದ್ದರಿಂದ ಮೊದಲು ಪಶ್ಚಾತ್ತಾಪವಾದರೂ ಕೆಲವು ಸಮಯದನಂತರ ಅವನ ಮನೋವಿಚಾರವು ಬದಲಾವಣೆಯಾಗಿ ತನ್ನ ತಾಯಿಯಲ್ಲೇ ಗುಪ್ತರೀತಿಯಿಂದ ಕಾಮಾಸಕ್ತ ನಾಗಿದ್ದನು. ಈ ಕ್ರಮವು ಬಹಳ ದಿವಸಗಳ ವರೆಗೆ ನಡೆಯುತ್ತಿರಲು ಒಂದು ದಿವಸ ಅವನ ಪತ್ನಿಗೆ ಈ ವಿಷಯವು ತಿಳಿಯಿತು. ಅವಳೊಮ್ಮೆ ಕೋಪ ದಿಂದ ತನ್ನ ಪತಿಯನ್ನು ತಿರಸ್ಕರಿಸಿದಳು. ಆಗ ಓರ್ವ ಅಗಸಗಿತ್ತಿಯು ಬಂದಳು. ಆಗ ತನ್ನ ಗಂಡನು ಮಾತೆಯೊಡನೆ ಕಾಮಸೇವನೆಯನ್ನು ಮಾ ಡುವ ವಿಷಯವನ್ನು ಆಕೆಯೊಡನೆ ಹೇಳಿದಳು. ಅವಳು ಅರಮನೆಯ ದಾಸಿ ಯೊಡನೆ ಹೇಳಿದಳು. ಒಂದು ದಿವಸ ರಾಣಿಯೊಡನೆ ಮಾತನಾಡುವಾಗ ದಾಸಿಯು ಹೇಳಿದಳು. ಹೀಗಾಗಿ ಈ ಯಮುದಂಡನ ಬಾರಕರ್ಮವು ರಾಜ ನಿಗೂ ತಿಳಿಯಿತು, ಪರಂತು ರಾಜನು ಕೂಡಲೇ ಆ ಮಾತಿನ ಮೇಲೆ ವಿಶ್ವಾಸವನ್ನಿಡದೆ ಗುಪ್ತಚಾರರಿಂದ ಪರೀಕ್ಷಿಸಿ ನೋಡಲು, ಅದು ನಿಜವೆಂದು ತಿಳಿದು, ಬಹಳ ಕೋಪಾವಿಷ್ಟನಾಗಿ ಯಮುದಂಡನನ್ನು ಬರಮಾಡಿ ಕಠಿಣ ವಾದ ಶಿಕ್ಷೆಯನ್ನು ವಿಧಿಸಿ ಊರಿನಿಂದ ಹೊರಪಡಿಸಿದನು. ಈ ಕಠಿಣವಾದ ಶಿಕ್ಷೆಯಿಂದ ಯಮುದಂಡನು ಕೆಲವು ದಿವಸಗಳಲ್ಲಿಯೇ ಮರಣವನ್ನು ಹೊಂದಿ ದುರ್ಗತಿಯನ್ನು ಪಡೆದನು.

ಈ ಕಥೆಯ ಸಾರಾಂಶವೇನಂದರೆ, ಯಮುದಂಡನಂತೆ ಪರಸ್ತ್ರೀಸೇವ ನೆಯಿಂದ ಇಹಪರಜನ್ಮದಲ್ಲಿ ಘೋರವಾದ ದುಃಖಗಳನ್ನು ಅನುಭವಿಸ ಬೇಕಾಗುತ್ತದೆ. ಆದಕಾರಣ ಅದನ್ನು ತ್ಯಜಿಸಬೇಕೆಂದು ಭಾವವು.

## ಶ್ಮಶ್ರುನವನೀತನ ಕಥೆ.

ಈ ಭರತಕ್ಷೇತ್ರದ ಅಯೋಧ್ಯಾನಗರದಲ್ಲಿ ಭವದತ್ತನೆಂಬ ಶ್ರೇಷ್ಠಿಯು ಇರುತ್ತಿದ್ದನು. ಅವನಿಗೆ ಧನದತ್ತೆಯೆಂಬ ಪತ್ನಿಯೂ ಲುಬ್ಧದತ್ತನೆಂಬ ಮಗನೂ ಇದ್ದರು. ಅವನು ಅತ್ಯಂತ ಲೋಭಿಯಾಗಿದ್ದನು. ಒಂದು ದಿವಸ ಲುಬ್ಧದತ್ತನು ದ್ರವ್ಯೋಪಾರ್ಜನೆಗೋಸ್ಕರ ಬಹಳ ದೂರ ದೇಶಕ್ಕೆ ಹೋಗಿ ಅಲ್ಲಿ ಹೆಚ್ಚಾದ ಧನವನ್ನು ಸಂಪಾದಿಸಿಕೊಂಡು ವಾಪಾಸು ಮನೆಗೆ ಬರು ವಾಗ ದಾರಿಯಲ್ಲಿ ಕೆಲವು ಜನ ಕಳ್ಳರು ಬಂದು ಅದನ್ನು ಅಪಹರಿಸಿ ಅವ

ನನ್ನು ನಿರ್ಧನನನ್ನಾಗಿ ಮಾಡಿದರು. ಹೀಗಿರಲು ಮುಂದೆ ಬರುತ್ತಿರುವಾಗ ಒಂದೆಡೆ ಕೆಲವು ಗೊಲ್ಲರ ಮನೆಗಳಿದ್ದುವು. ಅಲ್ಲಿ ಆವನಿಗೆ ಮಜ್ಜಿಗೆಯನ್ನು ಕುಡಿಯಬೇಕೆಂದು ಇಚ್ಛೆಯುಂಟಾಗಿ ಅಲ್ಲೊಂದು ಮನೆಗೆ ಹೋಗಿ ಕೇಳಿದನು. ಆಗ ಅವರು ಒಳ್ಳೇ ಮಜ್ಜಿಗೆಯನ್ನು ಕೊಟ್ಟರು. ಅದನ್ನು ಕುಡಿಯುವಾಗ ಅದರಲ್ಲಿರುವ ಬೆಣ್ಣೆಯು ಅವನ ಮೀಸೆಯಲ್ಲಿ ಹಿಡಿಯಿತು. ಅದನ್ನು ನೋಡಿ, 'ನಾನು ಹೀಗೆಯೇ ಕೆಲವು ದಿವಸಗಳ ವರೆಗೆ ಮಜ್ಜಿಗೆಯನ್ನು ಕುಡಿದರೆ ಬಹಳ ಬೆಣ್ಣೆಯು ಜಮೆಯಾದೀತು' ಎಂದು ಯೋಚಿಸಿ ಪ್ರತಿನಿತ್ಯವೂ ಅಲ್ಲಿಗೆ ಹೋಗಿ ಮಜ್ಜಿಗೆಯನ್ನು ಕುಡಿಯುತ್ತಿದ್ದನು ಮತ್ತು ಮೀಸೆಯಲ್ಲಿ ಹಿಡಿದ ಬೆಣ್ಣೆಯನ್ನು ಒಂದು ಪಾತ್ರದಲ್ಲಿ ಹಾಕಿಡುತ್ತಿದ್ದನು. ಹೀಗಿರುವಾಗ ಅಲ್ಲಿಯ ಗೊಲ್ಲರು ಅವನಿಗೆ 'ಶ್ಮಶ್ರುನವನೀತ'ನೆಂದು ಹೆಸರಿಟ್ಟರು. ಮುಂದೆ ಕೆಲವು ದಿವಸಗಳಲ್ಲಿ ಒಂದೆರಡು ಸೇರು ತುಪ್ಪವು ಜಮೆಯಾಯಿತು. ಆಗ ಅವನು ಅಲ್ಲಿಯೇ ಒಂದು ಹುಲ್ಲಿನ ಸಣ್ಣ ಜೋಪಡಿಯನ್ನು ಮಾಡಿಕೊಂಡು ಶೀತನಿವಾರಣೆಗೋಸ್ಕರ ಒಂದು ಅಗ್ಗಿಷ್ಟಿಕೆಯನ್ನಿಟ್ಟುಕೊಂಡು ಒಂದು ಜೀರ್ಣವಾದ ಚಾಪೆಯ ಮೇಲೆ ಮಲಗಿಕೊಂಡಿದ್ದನು. ಆ ಜೋಪಡಿಯ ಬಾಗಿಲಿನ ಹತ್ತಿರ ಒಂದು ನೆಲುವಿನಲ್ಲಿ ತನ್ನ ತುಪ್ಪದ ಪಾತ್ರೆಯನ್ನು ಇರಿಸಿದ್ದನು. ಆಗ ಅದನ್ನು ನೋಡಿ ಈ ರೀತಿಯಾದ ಮನಃಸಾಮ್ರಾಜ್ಯದಲ್ಲಿದ್ದನು.

"ಈಗ ಬಹಳ ತುಪ್ಪವು ಜಮೆಯಾಗಿದೆ. ಈಗ ಇದನ್ನು ವಿಕ್ರಯಿಸಿದರೆ ಬಹಳ ದ್ರವ್ಯಪ್ರಾಪ್ತಿಯಾಗುವುದು. ಅದರಿಂದ ನಾನು ದೊಡ್ಡ ವ್ಯಾಪಾರವನ್ನು ಮಾಡಬೇಕು. ಆಗ ಇನ್ನೂ ಹೆಚ್ಚು ದ್ರವ್ಯಸಂಪಾದನೆಯಾಗಬಹುದು. ಆಗ ನನ್ನನ್ನು ಎಲ್ಲರೂ 'ಶ್ರೀಮಾನ್ ಶೇಠ್ ಸಾಹೇಬ್' ಎಂದು ಕರೆಯುವರು. ನಾನಾಗ ಪ್ರಸಿದ್ಧಿಯನ್ನು ಹೊಂದಿದವನಾಗಿ ನನ್ನನ್ನು ಎಲ್ಲರೂ ಸನ್ಮಾನಿಸುವರು. ಅನಂತರ ಕ್ರಮದಿಂದ ರಾಜ್ಯಸಂಪಾದನೆಗೋಸ್ಕರ ಪ್ರಯತ್ನಿಸಿದರೆ ನನಗೆ ರಾಜ್ಯದೊರೆತರೆ ನನ್ನನ್ನು ಎಲ್ಲರೂ ರಾಜನೆಂದು ಕರೆಯುವರು. ಇದೇ ಕ್ರಮದಿಂದ ಕೆಲವು ವರ್ಷಗಳು ಹೋಗುವಾಗ ಸಾರ್ವಭೌಮರಾಜನಾಗಿ ಚಕ್ರವರ್ತಿಯಾಗುವೆನು. ಆಗ ನನಗೆ ಸಾಮಂತರಾಜರು

ಬಂದು ನಮುಸ್ಕರಿಸಿ, ನನ್ನ ಪರಾಕ್ರಮುವನ್ನು ಸ್ತುತಿಸುವರು. ಹೀಗಿರಲು ರಾತ್ರಿಯಲ್ಲಿ ನಾನು ನನ್ನ ಅರಮನೆಯ ಏಳಂತಸ್ತಿನ ಉಪ್ಪರಿಗೆಯ ಮೇಲೆ ಸುಂದರವಾದ ಕೋಣೆಯಲ್ಲಿರುವ ಸುವರ್ಣ ಮಂಚದಲ್ಲಿ ಮೃದುವಾದ ಹಂಸತೂಲಿಕಾತಲ್ಪದಲ್ಲಿ ಮಲಗಿರುವಾಗ ನನ್ನ ಪ್ರೀಯಪತ್ನಿಯು ನನ್ನ ಕಾಲ ನ್ನೊತ್ತುವುದಕ್ಕೆ ಪ್ರಾರಂಭಿಸುವಳು. ಆಗ ನಾನು ತಮಾಷೆಗಾಗಿ 'ಏನು ನಿನೆಗೆ ಇನ್ನೂ ಕಾಲನ್ನೊತ್ತುವುದಕ್ಕೆ ತಿಳಿಯುವದಿಲ್ಲವೇನೇ ?' ಎಂದು ಹೇಳಿ ಆಕೆಯನ್ನು ಹೀಗೆ ಕಾಲಿನಿಂದ ಒದೆಯುವೆನು.'' ಇನ್ನು ಮುಂದೆಯೂ ರಾಯರ ಮನೋರಾಜ್ಯವು ಅತಿ ದೀರ್ಘವಾಗುತ್ತಿತ್ತು. ಪರಂತು ರಾಯರ ದೈವಯೋಗದಿಂದ ಅಲ್ಲಿಗೇನೇಯೇ ಫುಲ್‌ಸ್ಟಾಪ್—ಪೂರ್ಣವಿರಾಮುವನ್ನು ಮಾಡಬೇಕಾಗಿ ಬಂತು. ಆಗ ರಾಯರು ತನ್ನ ಚಿತ್ತಸ್ಥೈರ್ಯವಿಲ್ಲದೆ ಪ್ರಿಯ ಪತ್ನಿಗೆಂದು ತನ್ನ ಕಾಲಿನಿಂದ ನಿಜವಾಗಿಯೂ ತುಳಿದೇ ಬಿಟ್ಟರು. ಆಗ ರಾಯರ ಕಾಲು ಮೇಲೆ ನೆಲುವಿನಲ್ಲಿರುವ ತುಪ್ಪದ ಪಾತ್ರೆಗೆ ತಾಗಿ ಅದು ಕೆಳಗಿರುವ ಅಗ್ಗಿಷ್ಟಿಕೆಯ ಮೇಲೆ ಬಿದ್ದು ಅಗ್ನಿಯು ಪ್ರಜ್ವಲಿತವಾಗಿ ಮೊದಲು ಜೋಪಡಿಯ ಬಾಗಿಲದಲ್ಲಿಯೇ ಬೆಂಕಿ ಹತ್ತಿದ್ದರಿಂದ ರಾಯರಿಗೆ ಹೊರಗೆ ಹೋಗಲು ಅವಕಾಶವಾಗದೆ ಜೋಪಡಿಸಹಿತವಾಗಿ ಸುಟ್ಟು ಭಸ್ಮೀಭೂತ ರಾದರು. ಮತ್ತು ಈ ರೀತಿಯಾದ ರೌದ್ರಧ್ಯಾನದಿಂದ ದುರ್ಮರಣವನ್ನು ಹೊಂದಿ ನರಕಾದಿ ದುರ್ಗತಿ ದುಃಖಗಳನ್ನು ಅನುಭವಿಸಬೇಕಾಯಿತು.

ವಾಚಕರೇ! ಈ ಕಥೆಯಿಂದ ನೀವಾದರೂ ಏನು ಗ್ರಹಣ ಮಾಡುವಿರಿ ? ಇದರಿಂದ ನಿಮುಗೆ ಪರಿಗ್ರಹಪರಿಮಾಣವನ್ನು ಮಾಡಬೇಕೆಂದು ತೋರುವುದಿಲ್ಲವೇನು ? ಇಲ್ಲವೇ ಲುಬ್ಧದತ್ತ ಅಥವಾ ಶ್ಮಶ್ರುನವನೀತನಂತೆ ನೀವೂ ಮನೋರಾಜ್ಯದಿಂದ ದುಃಖಭಾಗಿಗಳಾಗುವಿರೇ ? ಆದ್ದರಿಂದ ಪ್ರತಿಯೊಬ್ಬನೂ ಅತ್ಯಾಶೆಪಡದೆ ಪರಿಗ್ರಹವನ್ನು ಪರಿಮಾಣ ಮಾಡಿಕೊಂಡು ಪುಣ್ಯಭಾಗಿಗಳಾಗಬೇಕೆಂದು ಮುಖ್ಯಾಭಿಪ್ರಾಯವು.

## ಅಷ್ಟಮೂಲ ಗುಣಗಳ ವರ್ಣನೆ.

ಮದ್ಯಮಾಂಸಮಧುತ್ಯಾಗೈಃ ಸಹಾಣುವ್ರತಪಂಚಕಂ ||
ಅಷ್ಟೌ ಮೂಲಗುಣಾನಾಹುರ್ಗೃಹಿಣಾಂ ಶ್ರಮಣೋತ್ತಮಾಃ ||೬೬||

ಅನ್ವಯಾರ್ಥ:—ಮದ್ಯಮಾಂಸಮಧುತ್ಯಾಗೈಃ ಸಹ- ಮದ್ಯಮಾಂಸ ಜೇನು ಇವುಗಳ ಬಿಡುವಿಕೆಯೊಡನೆ ಅಣುವ್ರತಪಂಚಕಂ—ಪಂಚಾಣುವ್ರತ ವನ್ನು ಶ್ರಮಣೋತ್ತಮಾಃ—ಗಣಧರರು ಗೃಹಿಣಾಂ— ಶ್ರಾವಕರ ಅಷ್ಟೌ- ಎಂಟು ಮೂಲಗುಣಾನ್—ಮೂಲಗುಣಗಳೆಂದು ಆಹುಃ—ಹೇಳುತ್ತಾರೆ.

ತಾತ್ಪರ್ಯಃ—ಧರ್ಮಶ್ರವಣವನ್ನು ಮಾಡುವವರಿಗೆ ಶ್ರಾವಕರೆಂದು ಹೆಸರು. ಜೈನಶಾಸ್ತ್ರದಲ್ಲಿ ಗೃಹಸ್ಥರಿಗೆ ಶ್ರಾವಕರೆನ್ನುತ್ತಾರೆ. ಶ್ರಾವಕನು ಎಂಟು ಮೂಲಗುಣಗಳನ್ನು ಪಾಲಿಸಬೇಕು. ಅವುಗಳನ್ನು ಪಾಲಿಸದಿದ್ದರೆ ಶ್ರಾವಕನೆನಿಸಲಾರನು. ಹಿಂಸೆ, ಅಸತ್ಯ, ಚೌರ್ಯ, ಕಾಮಸೇವನೆ, ಪರಿಗ್ರಹಾಭಿಲಾಷೆ ಇವೈದಕ್ಕೆ ಪಂಚಪಾಪಗಳೆಂದು ಹೆಸರು. ಈ ಪಂಚಪಾಪಗಳಲ್ಲಿ ಸ್ಥೂಲಪಾಪಗಳನ್ನು ಬಿಡತಕ್ಕವನು ಅಣುವ್ರತಿಯೆಂದೂ ಸ್ಥೂಲ ಮತ್ತು ಸೂಕ್ಷ್ಮರೂಪವಾದ ಸಮಸ್ತಪಾಪಗಳನು ಬಿಟತಕ್ಕವನು ಮಹಾವ್ರತಿಯೆಂದೂ ಹೇಳಲ್ಪಡುತ್ತಾನೆ. ಅಣುವ್ರತದಲ್ಲಿ ಅಹಿಂಸಾಣುವ್ರತ, ಸತ್ಯಾಣುವ್ರತ, ಅಚೌರ್ಯಾಣುವ್ರತ, ಪರಸ್ತ್ರೀತ್ಯಾಗಾಣುವ್ರತ, ಪರಿಗ್ರಹಪರಿಮಾಣಾಣುವ್ರತಗಳೆಂದು ಐದು ವಿಧ. ಹಿಂದೆ ಇವುಗಳ ಸ್ವರೂಪವು ವರ್ಣಿಸಲ್ಪಟ್ಟಿದೆ. ಮದ್ಯ ಮಾಂಸ ಮಧು ಈ ಮೂರರ ಆದ್ಯಕ್ಷರಗಳು ಮಕಾರಗಳಾಗಿರುವುದರಿಂದ ಇವುಗಳಿಗೆ ಮಕಾರತ್ರಯಗಳೆಂದು ಸಂಜ್ಞೆಯಿದೆ. ಮದ್ಯ—ಅಂದರೆ ಮೋಹವನ್ನೂ ಹೇಯೋಪಾದೇಯಜ್ಞಾನಶೂನ್ಯತೆಯನ್ನೂ ಮದವನ್ನೂ ಉಂಟು ಮಾಡುವ ಹೆಂಡ ಸರಾಯಿ ಭಂಗೀ ಅಫೀಮು ಮೊದಲಾದ ಮಾದಕ ಪದಾರ್ಥಗಳಿಗೆ ಮದ್ಯವೆಂದು ಹೆಸರು. ಮಾಂಸ—ಸ್ತ್ರೀಪುರುಷರ ಸಂಯೋಗದಿಂದುಂಟಾದ ರಕ್ತವೀರ್ಯಗಳ ಪಿಂಡಾಕೃತಿಯಾದ ಜೀವನಶರೀರಕ್ಕೆ ಮಾಂಸವೆಂದು ಹೆಸರು. ಸೂಕ್ಷ್ಮಜಂತುಗಳಿಂದ ಕೂಡಿರುವ ಪುಷ್ಪ ಮೊದಲಾದುವುಗಳ ರಸವನ್ನು ಜೇನುನೊಣಗಳು ಹೀರಿಕೊಂಡು ಬಂದು ತಮ್ಮ ಗೂಡಿನಲ್ಲಿ ಸಂಗ್ರಹಿಸಿರುತ್ತವೆ. ಈ ರಸವು ಬಹು ದಿನಗಳವರೆಗೆ ಕೊಳೆತು ಅವುಗಳ ಮಲಮೂತ್ರಗಳಿಂದ ಮಿಶ್ರವಾಗಿರುತ್ತದೆ ಮತ್ತು ಆ ಜೇನುವನ್ನು ತೆಗೆಯಬೇಕಾದರೆ ಕೆಳಗಡೆ ಬೆಂಕಿ ಹೊಗೆಯಿಂದ

ನೊಣಗಳನ್ನು ಓಡಿಸಿ ಆ ಗೂಡಿನಲ್ಲಿರುವ ಮೊಟ್ಟೆಮರಿಗಳನ್ನು ಹಿಂಡಿ ಆ ರಸವನ್ನು ತೆಗೆಯಬೇಕಾಗುತ್ತದೆ. ಇಂತಹ ಅಪವಿತ್ರವಾದ ರಸಕ್ಕೆ ಮದ್ಯ ಅಥವಾ ಜೇನುತುಪ್ಪವೆಂದು ಹೆಸರು. ಈ ಮಕಾರತ್ರಯಗಳು ಅನಂತಾನಂತ ಜೀವಗಳಿಗೆ ಉತ್ಪತ್ತಿಸ್ಥಾನವೂ ಪಾಪಕರವೂ ಅಪವಿತ್ರವೂ ಆಗಿವೆ. ಆದ ಕಾರಣ ಶ್ರಾವಕನು ಪಂಚಾಣುವ್ರತಗಳ ಪಾಲನೆಯನ್ನೂ ಮಕಾರತ್ರಯ ಗಳ ತ್ಯಾಗವನ್ನೂ ಮಾಡುವುದಕ್ಕೆ ೫+೩=೮ ಎಂಟು ಮೂಲ ಗುಣಗ ಳೆಂದು ಸಮಂತಭದ್ರಾಚಾರ್ಯರು ಹೇಳಿರುತ್ತಾರೆ.

ಅತ್ತಿ ಆಲ ಬಸರಿ ಗೋಳಿ ಅರಳಿಗಳೆಂಬ ಪಂಚೋದುಂಬರ ಫಲಗ ಳಲ್ಲಿ ಅನೇಕ ತ್ರಸಜೀವಗಳ ಉತ್ಪತ್ತಿ ಮತ್ತು ಹಿಂಸೆಯಾಗುವುದರಿಂದ ಅವುಗಳನ್ನು ಮಕಾರತ್ರಯವನ್ನೂ ಬಿಡುವುದಕ್ಕೆ 'ಅಷ್ಟಮೂಲಗುಣ' ವೆಂದು ಕೆಲವು ಆಚಾರ್ಯರ ಅಭಿಪ್ರಾಯವಾಗಿದೆ. ÷ ಮದ್ಯ ಮಾಂಸ ಮಧುತ್ಯಾಗ, ರಾತ್ರಿಭೋಜನತ್ಯಾಗ, ಪಂಚೋದುಂಬರಫಲತ್ಯಾಗ, ಪಂಚ ಪರಮೇಷ್ಠಿಗಳ ಸ್ತುತಿ, ಜೀವದಯೆ, ಜಲಶೋಧನ ಇವುಗಳಿಗೆ 'ಅಷ್ಟ ಮೂಲಗುಣ'ಗಳೆಂದು ಆಶಾಧರಸೂರಿಗಳ ಅಭಿಪ್ರಾಯವಾಗಿದೆ. ಇವು ಗಳಲ್ಲಿ ಆಶಾಧರರ ಮತವು ಮೊದಲು ಶ್ರಾವಕನಿಂದ ಪಾಲಿಸಲು ಸಾಧ್ಯವೂ ಯೋಗ್ಯವೂ ಆದುದಾಗಿದೆ. ಅದಲ್ಲದೆ ಪಂಚಾಣುವ್ರತಗಳು ಗೃಹಸ್ಥನ ಉತ್ತರಗುಣಗಳೆಂದು ಕೆಲವರೆ ಪ್ರತಿಪಾದಿಸಿರುತ್ತಾರೆ.

ಇತಿ ಶ್ರೀಸಮಂತಭದ್ರಾಚಾರ್ಯವಿರಚಿತೇ ರತ್ನಕರಂಡಕನಾಮ್ನಿ
ಉಪಾಸಕಾಧ್ಯಯನೇ ಅಣುವ್ರತವರ್ಣನಂ ನಾಮ
ತೃತೀಯಃ ಪರಿಚ್ಛೇದಃ



÷ಮದ್ಯಪಲಮಧುನಿಶಾಶನಪಂಚಫಲೀವಿರತಿ—ಪಂಚಕಾಪ್ತನುತೀ||
ಜೀವದಯಾಜಲಗಾಲನಮಿತಿ ಚ ಕ್ವಚಿದಷ್ಟಮೂಲಗುಣಾಃ ||
—ಸಾಗಾರಧರ್ಮಾಮೃತ.

# ಅಥ ಚತುರ್ಥಪರಿಚ್ಛೇದಃ



## ಗುಣವ್ರತಗಳ ಭೇದವರ್ಣನೆ.

**ದಿಗ್ವ್ರತಮನರ್ಥದಂಡವ್ರತಂ ಚ ಭೋಗೋಪಭೋಗಪರಿಮಾಣಂ ||**
**ಅನುಬೃಂಹಣಾದ್ಗುಣಾನಾಮಾಖ್ಯಾಂತಿ ಗುಣವ್ರತಾನ್ಯಾರ್ಯಾಃ ||೬೭||**

**ಅನ್ವಯಾರ್ಥಃ**—ಗುಣಾನಾಂ— ಸಮ್ಯಗ್ದರ್ಶನಾದಿ ಗುಣಗಳ ಅನುಬೃಹ್ಮಣಾತ್—ಅಭಿವೃದ್ಧಿಯನ್ನು ಮಾಡುವುದರಿಂದ ಆರ್ಯಾ:—ಸತ್ಪುರುಷರು ದಿಗ್ವ್ರತಂ—ದಿಗ್ವ್ರತವನ್ನು ಅನರ್ಥದಂಡವ್ರತಂ—ಅನರ್ಥದಂಡವ್ರತವನ್ನು ಚ—ಮತ್ತೆ ಭೋಗೋಪಭೋಗಪರಿಮಾಣಂ—ಭೋಗೋಪಭೋಗಪರಿಮಾಣವ್ರತವನ್ನು ಗುಣವ್ರತಾನಿ—ಗುಣವ್ರತಗಳೆಂದು ಆಖ್ಯಾಂತಿ ಹೇಳುತ್ತಾರೆ.

**ತಾತ್ಪರ್ಯ**:— ಸಮ್ಯಗ್ದರ್ಶನ ಪಂಚಾಣುವ್ರತ ಮೊದಲಾದ ಗುಣಗಳನ್ನು ಅಭಿವೃದ್ಧಿಪಡಿಸುವುದಕ್ಕೆ ಕಾರಣಗಳಾಗಿರುವುದರಿಂದ ಆಚಾರ್ಯರು ದಿಗ್ವ್ರತ, ಅನರ್ಥದಂಡವ್ರತ, ಭೋಗೋಪಭೋಗಪರಿಮಾಣವ್ರತ ಇವುಗಳಿಗೆ ಗುಣವ್ರತಗಳೆಂದು ಹೇಳುತ್ತಾರೆ.

## ದಿಗ್ವ್ರತವರ್ಣನೆ.

**ದಿಗ್ವಲಯಂ ಪರಿಗಣಿತಂ ಕೃತ್ವಾತೋऽಹಂ ಬಹಿರ್ನ ಯಾಸ್ಯಾಮಿ ||**
**ಇತಿ ಸಂಕಲ್ಪೋ ದಿಗ್ವ್ರತಮಾಮೃತ್ಯಣುಪಾಪವಿನಿವೃತ್ತ್ಯೈ ||೬೮||**

**ಅನ್ವಯಾರ್ಥ**:—ಆಮೃತಿ— ಮರಣಪರ್ಯಂತರ ಅಣುಪಾಪವಿನಿವೃತ್ತ್ಯೈ—ಸೂಕ್ಷ್ಮಪಾಪಗಳ ನಿವಾರಣೆಗೋಸ್ಕರ ದಿಗ್ವಲಯಂ—ದಶದಿಕ್ಕುಗಳನ್ನು ಪರಿಗಣಿತಂ ಕೃತ್ವಾ—ಯೆಲ್ಲೆಯನ್ನು ಮಾಡಿಕೊಂಡು ಅತಃ—ಇಲ್ಲಿಂದ ಬಹಿ:—ಹೊರಗೆ ಅಹಂ—ನಾನು ನ ಯಾಸ್ಯಾಮಿ—ಹೋಗುವುದಿಲ್ಲ ಇತಿ—ಈ ಪ್ರಕಾರವಾದ ಸಂಕಲ್ಪ:—ನಿಶ್ಚಯವು ದಿಗ್ವ್ರತಂ—ದಿಗ್ವ್ರತವಾಗಿ 'ಭವತಿ'—ಆಗುತ್ತದೆ.

**ತಾತ್ಪರ್ಯ:—**ಏಕೇಂದ್ರಿಯಾದಿ ಸೂಕ್ಷ್ಮಪಾಪಗಳ ನಾಶಕ್ಕೋಸ್ಕರ ದಶದಿಕ್ಕುಗಳಲ್ಲಿ ಒಂದು ಯೆಲ್ಲೆಯನ್ನು ಮಾಡಿಕೊಂಡು ಅದಕ್ಕಿಂತ ಹೊರಗೆ ಮರಣಪರ್ಯಂತರ ನಾನು ಹೋಗುವುದಿಲ್ಲವೆಂದು ಮಾಡಿಕೊಳ್ಳುವ ವ್ರತಕ್ಕೆ ದಿಗ್ವ್ರತವೆಂದು ಹೆಸರು.

**ದಿಗ್ವ್ರತಾವಧಿವರ್ಣನೆ.**

**ಮಕರಾಕರಸರಿದಟವೀಗಿರಿಜನಪದಯೋಜನಾನಿ ಮರ್ಯಾದಾಃ**
**ಪ್ರಾಹುರ್ದಿಶಾಂ ದಶಾನಾಂ ಪ್ರತಿಸಂಹಾರೇ ಪ್ರಸಿದ್ಧಾನಿ ||೬೯||**

**ಅನ್ವಯಾರ್ಥ:—**ದಶಾನಾಂ—ಹತ್ತಾದ ದಿಶಾಂ—ದಿಕ್ಕುಗಳ ಪ್ರತಿಸಂಹಾರೇ—ತ್ಯಾಗದಲ್ಲಿ ಪ್ರಸಿದ್ಧಾನಿ—ಪ್ರಸಿದ್ಧಗಳಾದ ಮಕರಾಕರಸರಿದಟವೀಗಿರಿಜನಪದಯೋಜನಾನಿ—ಸಮುದ್ರ, ನದೀ, ವನ, ಪರ್ವತ, ದೇಶ, ಯೋಜನ ಇವುಗಳನ್ನು ಮರ್ಯಾದಾ:—ಯೆಲ್ಲೆಗಳೆಂದು ಪ್ರಾಹುಃ—ಹೇಳುತ್ತಾರೆ.

**ತಾತ್ಪರ್ಯ:—**ದಶದಿಕ್ಕುಗಳಲ್ಲಿ ಇಂತಿಷ್ಟು ಅವಧಿಯೊಳಗೆ ಸಂಚಾರ-ವ್ಯವಹಾರವನ್ನು ಮಾಡಿಕೊಳ್ಳುತ್ತೇನೆಂದು ನಿಯಮ ಮಾಡುವಾಗ ಪ್ರಸಿದ್ಧಗಳಾದ ಸಮುದ್ರ, ಗಂಗಾ ಮೊದಲಾದ ನದಿ, ದಂಡಕಾರಣ್ಯ ಮೊದಲಾದ ವನ, ಸಹ್ಯವಿಂದ್ಯಾದ್ರಿಪರ್ವತ, ದೇಶ, ಇಂತಿಷ್ಟು ಯೋಜನ ಇವುಗಳನ್ನು ಯೆಲ್ಲೆಯನ್ನಾಗಿ ಮಾಡಿಕೊಳ್ಳಬೇಕೆಂದಭಿಪ್ರಾಯವು.

**ದಿಗ್ವ್ರತಧಾರಣಾಫಲವರ್ಣನೆ.**

**ಅವಧೇರ್ಬಹಿರಣುಪಾಪಪ್ರತಿವಿರತೇರ್ದಿಗ್ವ್ರತಾನಿ ಧಾರಯತಾಂ ||**
**ಪಂಚಮಹಾವ್ರತಪರಿಣತಿಮಣುವ್ರತಾನಿ ಪ್ರಪದ್ಯಂತೇ ||೭೦||**

**ಅನ್ವಯಾರ್ಥ:—**ಅವಧೇ:—ಯೆಲ್ಲೆಯ ಬಹಿಃ—**ಹೊರಗೆ** ಅಣುಪಾಪಪ್ರತಿವಿರತೇ:—ಸೂಕ್ಷ್ಮಪಾಪಗಳ ತ್ಯಾಗದಿಂದ ದಿಗ್ವ್ರತಾನಿ—ದಿಗ್ವ್ರತಗಳನ್ನು ಧಾರಯತಾಂ—ಪಾಲಿಸುವವರಿಗೆ ಅಣುವ್ರತಾನಿ—ಅಣುವ್ರತಗಳು ಪಂಚಮಹಾವ್ರತಪರಿಣತಿಂ—ಪಂಚಮಹಾವ್ರತಗಳ ಸಾದೃಶ್ಯವನ್ನು ಪ್ರಪದ್ಯಂತೇ—ಹೊಂದುತ್ತವೆ.

ತಾತ್ಪರ್ಯ:—ತಾನು ಮಾಡಿಕೊಂಡ ಅವಧಿಯ ಹೊರಗೆ ಸೂಕ್ಷ್ಮ ಮತ್ತು ಸ್ಥೂಲರೂಪವಾದ ಸಮಸ್ತಪಾಪಗಳನ್ನು ದಿಗ್ವ್ರತವುಳ್ಳವನು ಮಾಡದಿರುವುದರಿಂದ ಅವನ ಅಣುವ್ರತಗಳೂ ಮಹಾವ್ರತಗಳ ಸಾಮ್ಯವನ್ನು ಹೊಂದುತ್ತವೆ, ಯದ್ಯಪಿ, ಹಿಂಸಾದಿ ಪಂಚಪಾಪಗಳನ್ನು ಸಂಪೂರ್ಣರೀತಿಯಿಂದ ಬಿಡುವುದಕ್ಕೆ ಮಹಾವ್ರತವೆಂದು ಹೆಸರಾದರೂ ಇಲ್ಲಿ ಅಣುವ್ರತಿಗೆ ಮಹಾವ್ರತಿಯೆಂದು ಹೇಳಿದುದು ಉಪಚಾರಮಾತ್ರದಿಂದವೆಂದು ತಿಳಿಯಬೇಕು. ಇದು ಗೌಣವಲ್ಲದೆ ಮುಖ್ಯವಲ್ಲವೆಂದಭಿಪ್ರಾಯವು.

**ಅವಧಿಯ ಹೊರಗೆ ದಿಗ್ವ್ರತವು ಸಾಕ್ಷಾನ್ಮಹಾವ್ರತವಾಗಿ ಏಕಾಗಲಾರದು ?**

**ಪ್ರತ್ಯಾಖ್ಯಾನತನುತ್ವಾನ್ಮಂದತರಾಶ್ಚರಣಮೋಹಪರಿಣಾಮಾಃ ||**
**ಸತ್ವೇನ ದುರವಧಾರಾ ಮಹಾವ್ರತಾಯ ಪ್ರಕಲ್ಪ್ಯಂತೇ ||೭೧||**

**ಅನ್ವಯಾರ್ಥ:**—ಪ್ರತ್ಯಾಖ್ಯಾನತನುತ್ವಾತ್—ಪ್ರತ್ಯಾಖ್ಯಾನಾವರಣೀಯ ಕ್ರೋಧಾದಿಗಳ ಉಪಶಮತೆಯಿಂದ ಮಂದತರಾ:—ಅತ್ಯಂ ಮಂದಗಳಾದ ಚರಣಮೋಹಪರಿಣಾಮಾಃ—ಚಾರಿತ್ರಮೋಹನೀಯಕರ್ಮದ ಪರಿಣಾಮಗಳು ಮಹಾವ್ರತಾಯ—ಮಹಾವ್ರತಕ್ಕೋಸ್ಕರ ಪ್ರಕಲ್ಪ್ಯಂತೇ—ಕಲ್ಪಿಸಲ್ಪಡುತ್ತವೆ. 'ತೇ'— ಆ ಪರಿಣಾಮಾ:—ಭಾವಗಳು ಸತ್ವೇನ ಇರುವುದರಿಂದ ದುರವಧಾರಾಃ—ಬಹು ಕಷ್ಟದಿಂದ ತಿಳಿಯುವುದಕ್ಕೆ ಯೋಗ್ಯಗಳಾಗಿ 'ಭವಂತಿ'—ಆಗುತ್ತವೆ.

**ತಾತ್ಪರ್ಯ:**—ಶ್ರಾವಕನಿಗೆ ಸಕಲಸಂಯಮರೂಪವಾದ ಮಹಾವ್ರತವನ್ನು ಉಂಟಾಗದಂತೆ ಪ್ರತಿಬಂಧಿಸುವ ಕರ್ಮಕ್ಕೆ ಪ್ರತ್ಯಾಖ್ಯಾನಾವರಣೀಯವೆಂದು ಹೆಸರು. ಅಂದರೆ ಪ್ರತ್ಯಾಖ್ಯಾನಾವರಣೀಯ ಕ್ರೋಧಮಾನಮಾಯಾಲೋಭಗಳು ಮಹಾವ್ರತಕ್ಕೆ ವಿರೋಧಿಗಳೆಂದರ್ಥವು. ಅಂತಹ ಪ್ರತ್ಯಾಖ್ಯಾನಾವರಣೀಯ ದ್ರವ್ಯ—ಕ್ರೋಧಾದಿಗಳು ಸೂಕ್ಷ್ಮ—ಕಮ್ಮಿಯಾಗುವುದರಿಂದ ಭಾವರೂಪವಾದ ಚಾರಿತ್ರಮೋಹನೀಯಕರ್ಮಗಳು ಬಹಳ ಉಪಶಮಾವಸ್ಥೆಯನ್ನು ಹೊಂದಿ ಸಂಜ್ವಲನರೂಪವನ್ನು ಹೊಂದುವಾಗ ಮಹಾವ್ರತವು ಉಂಟಾಗುತ್ತದೆ. ಆ ಸೂಕ್ಷ್ಮತ್ವವನ್ನು

ಹೊಂದಿದ ಚಾರಿತ್ರಮೋಹನೀಯಪರಿಣಾಮಗಳ ಅಸ್ತಿತ್ವವನ್ನು ತಿಳಿಯುವುದಕ್ಕೆ ಬಹುಕಷ್ಟವಾಗುತ್ತದೆಂದು ಭಾವವು. ಇಲ್ಲಿ 'ದುರವಧಾರಾಃ' ಎಂಬಲ್ಲಿ 'ದುಃಖಧಾರಾಃ' ಎಂಬ ಪಾಠಾಂತರವೂ ಇದೆ.

## ಮಹಾವ್ರತವರ್ಣನೆ.

**ಪಂಚಾನಾಂ ಪಾಪಾನಾಂ ಹಿಂಸಾದೀನಾಂ ಮನೋವಚಃ ಕಾಯೈಃ ||**
**ಕೃತಕಾರಿತಾನುಮೋದ್ಯೈಸ್ತ್ಯಾಗಸ್ತು ಮಹಾವ್ರತಂ ಮಹತಾಂ ||೭೨||**

**ಅನ್ವಯಾರ್ಥಃ**— ಹಿಂಸಾದೀನಾಂ—ಹಿಂಸೆಯೇ ಮೊದಲಾದ ಪಂಚಾನಾಂ—ಐದಾದ ಪಾಪಾನಾಂ—ಪಾಪಗಳ ಮನೋವಚಃ ಕಾಯೈಃ—ಮನವಚನಕಾಯಗಳಿಂದ ತು—ಮತ್ತೆ ಕೃತಕಾರಿತಾನುಮೋದ್ಯೈಃ—ಕೃತಕಾರಿತಾನುಮೋದನಗಳಿಂದ ತ್ಯಾಗಃ—ಬಿಡುವಿಕೆಯು ಮಹತಾಂ—ಮಹಾತ್ಮರ ಮಹಾವ್ರತಂ—ಮಹಾವ್ರತವಾಗಿ 'ಭವತಿ' —ಆಗುತ್ತದೆ.

**ತಾತ್ಪರ್ಯಃ**—ಪಂಚಪಾಪಗಳನ್ನು ಮನವಚನಕಾಯಕೃತಕಾರಿತಾನುಮೋದನಗಳಿಂದ ಸಂಪೂರ್ಣವಾಗಿ ಬಿಡುವುದಕ್ಕೆ ಮಹಾಮುನಿಗಳು ಮಹಾವ್ರತವೆಂದು ಹೇಳುತ್ತಾರೆ.

## ಧಿಗ್ವ್ರತಾತಿಚಾರವರ್ಣನೆ.

**ಊರ್ಧ್ವಾಧಸ್ತಾತ್ತಿರ್ಯಗ್ವ್ಯತಿಪಾತಾಃ ಕ್ಷೇತ್ರವೃದ್ಧಿರವಧೀನಾಂ ||**
**ವಿಸ್ಮರಣಂ ದಿಗ್ವಿರತೇರತ್ಯಾಶಾಃ ಪಂಚ ಮನ್ಯಂತೇ ||೭೩||**

**ಅನ್ವಯಾರ್ಥಃ**— ಊರ್ಧ್ವಾಧಸ್ತಾತ್ತಿರ್ಯಗ್ವ್ಯತಿಪಾತಾಃ—ಮೇಲೆ ಕೆಳಗೆ ಮತ್ತು ವಿದಿಕ್ಕುಗಳ ಯೆಲ್ಲೆಗಳನ್ನು ಮೀರುವಿಕೆಯು ಕ್ಷೇತ್ರವೃದ್ಧಿಃ—ತನ್ನ ಯೆಲ್ಲೆಗಿಂತ ಹೆಚ್ಚಾದ ಕ್ಷೇತ್ರವನ್ನು ವೃದ್ಧಿಪಡಿಸಿಕೊಳ್ಳುವಿಕೆಯು ಅವಧೀನಾಂ—ಯೆಲ್ಲೆಗಳ ವಿಸ್ಮರಣಂ—ಮರೆಯುವಿಕೆಯು 'ಏತೇ' ಪಂಚ-ಈ ಐದು ದಿಗ್ವಿರತೇಃ—ದಿಗ್ವ್ರತದ ಅತ್ಯಾಶಾಃ—ಅತಿಚಾರಗಳೆಂದು ಮನ್ಯಂತೇ ಹೇಳಲ್ಪಡುತ್ತವೆ.

ತಾತ್ಪರ್ಯ:—ಎಲ್ಲಾ ವ್ರತಗಳಂತೆ ದಿಗ್ವ್ರತಕ್ಕೆ ಸಹ ಐದು ಅತಿಚಾರಗಳಿವೆ. ತನ್ನ ಅಜ್ಞಾನದಿಂದ ತಾನು ಮಾಡಿಕೊಂಡ ಅವಧಿ

ಗಿಂತ ಮೇಲೆ ಹೋಗುವುದಕ್ಕೆ 'ಉರ್ಧ್ವಾತಿಚಾರ' ವೆಂದೂ ಕೆಳಗೆ ಹೋಗವುದಕ್ಕೆ 'ಅಧೋತಿಚಾರವೆಂದೂ, ವಿದಿಕ್ಕುಗಳನ್ನು ಮೀರಿಹೋಗುವುದಕ್ಕೆ 'ತಿರ್ಯಗತಿಚಾರ' ವೆಂದೂ, ತಾನು ಮಾಡಿಕೊಂಡ ಅವಧಿಗಿಂತಲೂ ಹೆಚ್ಚಾದ ಹೊಲ—ಗದ್ದೆಗಳನ್ನು ವೃದ್ಧಿಪಡಿಸಿಕೊಳ್ಳುವುದಕ್ಕೆ 'ಕ್ಷೇತ್ರವೃದ್ಧಿಅತಿಚಾರ'ವೆಂದೂ, ತಾನು ನಿಯಮಮಾಡಿಕೊಂಡ ಯೆಲ್ಲೆಗಳನ್ನು ಮರೆತು ಬಿಡುವುದಕ್ಕೆ 'ವಿಸ್ಮರಣಾತಿಚಾರ'ವೆಂದೂ, ಹೆಸರು. ಇವೈದು ದಿಗ್ವ್ರತದ ಅತಿಚಾರಗಳು ತಾನು ನಿಯಮಿಸಿಕೊಂಡ ಅವಧಿಗಳನ್ನು ಮೀರಬಾರದೆಂದು ಭಾವವು

### ಅನರ್ಥದಂಡವ್ರತವರ್ಣನೆ

**ಅಭ್ಯಂತರಂ ದಿಗವಧೇರಪಾರ್ಥಿಕೇಭ್ಯ: ಸಪಾಹಯೋಗೇಭ್ಯ: ||**
**ವಿರಮಣಮನರ್ಥದಂಡವ್ರತಂ ವಿದುರ್ವ್ರತಧರಾಗ್ರಣ್ಯಃ ||೭೪||**

**ಅನ್ವಯಾರ್ಥಃ**—ದಿಗವಧೇಃ— ದಿಗ್ವ್ರತದ ಅಭ್ಯಂತರಂ—ಒಳಗೆ ಅಪಾರ್ಥಿಕೇಭ್ಯಃ—ನಿಷ್ಪ್ರಯೋಜನವಾದ ಸಪಾಪಯೋಗೇಭ್ಯ:—ಪಾಪಕ್ಕೆ ಕಾರಣವಾದ ಪರಿಣಾಮಗಳಿಂದ ವಿರಮಣಂ—ವಿರಕ್ತನಾಗುವುದಕ್ಕೆ ವ್ರತಧರಾಗ್ರಣ್ಯ:—ವ್ರತಧಾರಿಗಳಲ್ಲಿ ಶ್ರೇಷ್ಠರಾದ ಗಣಧರರು ಅನರ್ಥದಂಡವ್ರತಂ—ಅನರ್ಥದಂಡವ್ರತವೆಂದು ವಿದು:—ಹೇಳುತ್ತಾರೆ.

ತಾತ್ಪರ್ಯಃ—ಅಶುಭರೂಪವಾದ ಮನವಚನಕಾಯಗಳಿಗೆ 'ದಂಡ' ವೆಂದು ಹೆಸರು. ಪ್ರಯೋಜನವಿಲ್ಲದ ಮನವಚನಕಾಯರೂಪವಾದ ಕ್ರಿಯೆಗಳಿಗೆ 'ಅನರ್ಥದಂಡ'ವೆಂದು ಹೆಸರು. ಪ್ರಯೋಜನವಿಲ್ಲದುದೂ ಪಾಪಕ್ಕೆ ಕಾರಣವೂ ಆದ ಕಾರ್ಯಗಳನ್ನು ತನ್ನ ನಿಯಮವನ್ನು ಮಾಡಿಕೊಂಡ ಯೆಲ್ಲೆಯೊಳಗೆ ಮಾಡದಿರುವುದಕ್ಕೆ 'ಅನರ್ಥದಂಡವ್ರತ'ವೆಂದು ಹೆಸರು.

### ಅನರ್ಥದಂಡಭೇದವರ್ಣನೆ.

**ಪಾಪೋಪದೇಶಹಿಂಸಾದಾನಾಪಧ್ಯಾನದು:ಶ್ರುತೀ: ಪಂಚ ||**
**ಪ್ರಾಹು: ಪ್ರಮಾದಚರ್ಯಾಮನರ್ಥದಂಡಾನದಂಡಧರಾಃ ||೭೫||**

**ಅನ್ವಯಾರ್ಥಃ**—ಅದಂಡಧರಾಃ—ಅಶುಭಪರಿಣಾಮ:ವಿಲ್ಲದಿರುವ ಗಣಧರರು ಪಾಪೋಪದೇಶಹಿಂಸಾದಾನಾಪಧ್ಯಾನದುಃಶ್ರುತೀಃ—ಪಾಪೋಪ

ದೇಶ, ಹಿಂಸಾದಾನ, ಅಪಧ್ಯಾನ, ದುಃಶ್ರುತಿ ಇವುಗಳನ್ನೂ ಪ್ರಮಾದ ಚರ್ಯಾಂ—ಪ್ರಮಾದಚರ್ಯೆಯನ್ನೂ 'ಏತಾನ್' ಪಂಚ—ಇವೈದನ್ನು ಅನರ್ಥ ದಂಡಾನ್—ಅನರ್ಥದಂಡಗಳೆಂದು ಪ್ರಾಹುಃ—ಹೇಳುತ್ತಾರೆ.

**ತಾತ್ಪರ್ಯ:**—ಅನರ್ಥದಂಡದಲ್ಲಿ ಪಾಪೋಪದೇಶ, ಹಿಂಸಾದಾನ, ಅಪಧ್ಯಾನ, ದುಃಶ್ರುತಿ ಮತ್ತು ಪ್ರಮಾದಚರ್ಯೆಗಳೆಂದು ಐದು ಭೇದ ಗಳಿವೆ. ಇವುಗಳ ಸ್ವರೂಪವನ್ನು ಯಥಾಕ್ರಮವಾಗಿ ವರ್ಣಿಸುವರು. ಅಶುಭಪರಿಣಾಮುಗಳಿಲ್ಲದಿರುವ ಗಣಧರಾದಿಗಳು ಇವೈದಕ್ಕೆ ಅನರ್ಥದಂಡ ವೆಂದು ಹೇಳಿರುತ್ತಾರೆ.

**ಪಾಪೋಪದೇಶದವರ್ಣನೆ.**

**ತಿರ್ಯಕ್ಕ್ಲೇಶವಣಿಜ್ಯಾಹಿಂಸಾರಂಭಪ್ರಲಂಬನಾದೀನಾಂ ||**
**§ಕಥಾಪ್ರಸಂಗಪ್ರಸವ: ಸ್ಮರ್ತವ್ಯ: ಪಾಪ ಉಪದೇಶಃ ||೭೬||**

**ಅನ್ವಯಾರ್ಥಃ**—ತಿರ್ಯಕ್ಕ್ಲೇಶವಣಿಜ್ಯಾಹಿಂಸಾರಂಭಪ್ರಲಂಬ ನಾದೀನಾಂ—ತಿರ್ಯಂಚಗಳಿಗೆ ದುಃಖವನ್ನುಂಟು ಮಾಡುವ ವ್ಯಾಪಾರ, ಹಿಂಸೆ, ಕೃಷ್ಯಾದ್ಯಾರಂಭ, ವಂಚನೆ ಮೊದಲಾದವುಗಳ ಕಥಾಪ್ರಸಂಗ ಪ್ರಸವ:—ವಿಷಯುಗಳನ್ನು ಮಾತನಾಡುವಿಕೆಯು ಯಾ ಉಪದೇಶಿಸುವಿ ಕೆಯು ಪಾಪಃಉಪದೇಶಃ—ಪಾಪೋಪದೇಶವೆಂಬ ಅನರ್ಥದಂಡವೆಂದು ಸ್ಮರ್ತವ್ಯ:—ತಿಳಿಯತಕ್ಕುದು.

ತಾತ್ಪರ್ಯ:— ಪಶು ಪಕ್ಷಿ ಸರ್ಪ ಮೀನು ಮೊದಲಾದ ಪ್ರಾಣಿ ಗಳಿಗೆ ತಿರ್ಯಂಚಗಳೆಂದು ಹೆಸರು. ತಿರ್ಯಂಚ ಪ್ರಾಣಿಗಳಿಗೆ ದುಃಖವ ನ್ನುಂಟು ಮಾಡುವುದೂ ವ್ಯಾಪಾರಸಂಬಂಧವೂ ಹಿಂಸೆಯೂ ಕೃಷಿ ಮೊದ ಲಾದ ಆರಂಭವೂ ವಂಚನೆ—ಮೋಸಗಾರಿಕೆ ಕಳ್ಳತನ ಮೊದಲಾದುವುಗಳ ಸಂಬಂಧಿಯೂ ಆದ ಮಾತುಕತೆಗಳನ್ನಾಡುವುದಕ್ಕೆ ಅಥವಾ ಉಪದೇಶಿಸು ವುದಕ್ಕೆ ಪಾಪೋಪದೇಶವೆಂಬ ಅನರ್ಥದಂಡವೆಂದು ಹೆಸರು.

---

§ ಪ್ರಸವ: **ಕಥಾಪ್ರಸಂಗಃ**= ಎಂಬೀ ಪಾಠಾಂತರವೂ ಇದೆ.

## ಹಿಂಸಾದಾನಾರ್ಥದಂಡ ವರ್ಣನೆ.

**ಪರಶುಕೃಪಾಣಖನಿತ್ರಜ್ವಲನಾಯುಧಶೃಂಗಶೃಂಖಲಾದೀನಾಂ ||**
**ವಧಹೇತೂನಾಂ ದಾನಂ ಹಿಂಸಾದಾನಂ ಬ್ರುವಂತಿ ಬುಧಾಃ ||೭೭||**

**ಅನ್ವಯಾರ್ಥ:**—ಪರಶುಕೃಪಾಣಖನಿತ್ರಜ್ವಲನಾಯುಧಶೃಂಗಶೃಂಖಲಾದೀನಾಂ—ಕೊಡಲಿ ಕತ್ತಿ, ಗುದ್ದಲಿ, ಬೆಂಕಿ, ಆಯುಧ, ಕೊಂಬು, ಸಂಕೊಲೆ ಮೊದಲಾದ ವಧಹೇತೂನಾಂ—ಹಿಂಸೆಗೆ ಕಾರಣವಾದ ಪದಾರ್ಥಗಳ ದಾನಂ—ಕೊಡುವಿಕೆಯನ್ನು ಹಿಂಸಾದಾನಂ—ಹಿಂಸಾದಾನವೆಂಬ ಅನರ್ಥದಂಡವೆಂದು ಬುಧಾ:—ವಿದ್ವಾಂಸರು ಬ್ರುವಂತಿ—ಹೇಳುತ್ತಾರೆ.

**ತಾತ್ಪರ್ಯ:**—ಹಿಂಸೆಗೆ ಕಾರಣಗಳಾದ ಕೊಡಲಿ ಕತ್ತಿ ಖಡ್ಗ ತಲವಾರ ಗುದ್ದಲಿ ಹಾರೆ ಬೆಂಕಿ ಆಯುಧ ಕೊಂಬು ಸಂಕೊಲೆ ಮೊದಲಾದ ವಸ್ತುಗಳನ್ನು ಕೊಡುವುದಕ್ಕೆ ಹಿಂಸಾದಾನವೆಂದು ಹೆಸರು. ಅನರ್ಥದಂಡ ವ್ರತವುಳ್ಳವನು ಈ ಪದಾರ್ಥಗಳನ್ನು ಇತರರಿಗೆ ಕೊಡಬಾರದು. ಯದ್ಯಪಿ ಇವುಗಳನ್ನು ಕೊಟ್ಟರೆ ಅಹಿಂಸಾಣುವ್ರತಕ್ಕೆ ಅತಿಚಾರವುಂಟಾಗುವುದೆಂದು ಮುಖ್ಯಾಭಿಪ್ರಾಯವು.

## ಅಪಧ್ಯಾನಾನರ್ಥದಂಡ ವರ್ಣನೆ.

**ವಧಬಂಧಚ್ಛೇದಾದೇರ್ದ್ವೇಷಾದ್ರಾಗಾಚ್ಚ ಪರಕಲತ್ರಾದೇಃ ||**
**ಆಧ್ಯಾನಮಪಧ್ಯಾನಂ ಶಾಸತಿ ಜಿನಶಾಸನೇ ವಿಶದಾಃ ||೭೮||**

**ಅನ್ವಯಾರ್ಥಃ**—ಜಿನಶಾಸನೇ—ಜಿನಶಾಸ್ತ್ರದಲ್ಲಿ ವಿಶದಾ:–ಪ್ರವೀಣರಾದವರು ದ್ವೇಷಾತ್—ವೈರದಿಂದ ಚ—ಮತ್ತು ರಾಗಾತ್—ಪ್ರೀತಿಯಿಂದ ಪರಕಲತ್ರಾದೇಃ—ಪರಸ್ತ್ರೀ ಮೊದಲಾದವರ ವಧಬಂಧಚ್ಛೇದಾದೇಃ-ಹಿಂಸೆ ಬಂಧನ ಚ್ಛೇದನ ಮೊದಲಾದುವುಗಳ ಆಧ್ಯಾನಂ—ಚಿಂತಿಸುವಿಕೆಯು ಅಪಧ್ಯಾನಂ–ಅಪಧ್ಯಾನವೆಂಬ ಅನರ್ಥದಂಡವೆಂದು ಶಾಸತಿ—ಹೇಳುತ್ತಾರೆ.

**ತಾತ್ಪರ್ಯ:**—ತನಗೇನೂ ಪ್ರಯೋಜನವಿಲ್ಲದೆ ರಾಗದ್ವೇಷಗಳಿಂದ ಪರಸ್ತ್ರೀ ಇತರರ ಪುತ್ರ ಮೊದಲಾದವರ ಮರಣವೂ ಬಂಧನವೂ ನಾಶವೂ ಹಸ್ತಪಾದಾದಿಗಳ ಚ್ಛೇದನವೂ ದ್ರವ್ಯನಾಶವೂ ಜೀವನೋಪಾಯದ ವಿಚ್ಛೆ

ದವೂ ಉಂಟಾಗಲೆಂದು ಚಿಂತಿಸಿ ವೃಥಾ ಪಾಪಬಂಧವನ್ನು ಮಾಡಿಕೊಳ್ಳು ವುದಕ್ಕೆ 'ಅಪಧ್ಯಾನ'ವೆಂಬ ಅನರ್ಥದಂಡವೆಂದು ಹೆಸರು.

**ದುಃಶ್ರುತಿ ಅನರ್ಥದಂಡವರ್ಣನೆ.**

**ಆರಂಭಸಂಗಸಾಹಸಮಿಥ್ಯಾತ್ವದ್ವೇಷರಾಗಮದಮದನೈಃ ||**
**ಚೇತಃಕಲುಷಯತಾಂ ಶ್ರುತಿರವಧೀನಾಂ ದುಃಶ್ರುತಿರ್ಭವತಿ ||೭೯||**

**ಅನ್ವಯಾರ್ಥಃ**—ಆರಂಭಸಂಗಸಾಹಸಮಿಥ್ಯಾತ್ವದ್ವೇಷರಾಗಮದ ಮದನೈ:—ಆರಂಭ, ಪರಿಗ್ರಹ, ಸಾಹಸ, ಮಿಥ್ಯಾತ್ವ, ವೈರ, ಪ್ರೀತಿ, ಗರ್ವ, ಕಾಮವಿಕಾರ ಇವುಗಳಿಂದ ಚೇತಃಕಲುಷಯತಾಂ—ಮನೋವಿಕಾರವ ನ್ನುಂಟು ಮಾಡುವ ಅವಧೀನಾಂ—ಶಾಸ್ತ್ರಗಳ ಶ್ರುತಿ-ಕೇಳುವಿಕೆಯು ದು:ಶ್ರುತಿ—ದು:ಶ್ರುತಿಯೆಂಬ ಅನರ್ಥದಂಡವಾಗಿ ಭವತಿ—ಆಗುತ್ತದೆ.

**ತಾತ್ಪರ್ಯ:**—ಕೃಷಿ ಮೊದಲಾದ ಆರಂಭಸಂಬಂಧವಾದುದೂ ಪರಿಗ್ರಹ, ಸಾಹಸ—ಧೈರ್ಯ—ಇವುಗಳ ಸಂಬಂಧಿಯೂ ಮಿಥ್ಯಾತ್ವರಾಗ ದ್ವೇಷ ಅಹಂಕಾರ ಕಾಮವಿಕಾರ ಇವುಗಳನ್ನುಂಟು ಮಾಡುವುದೂ ಮನೋವಿಕಾರವನ್ನುಂಟು ಮಾಡುವುದೂ ಆದ—ಕುಶಾಸ್ತ್ರಗಳನ್ನು ಕೇಳು ವುದಕ್ಕೆ ದು:ಶ್ರುತಿಯೆಂಬ ಅನರ್ಥದಂಡವೆಂದು ಹೆಸರು.

**ಪ್ರಮಾದಚರ್ಯಾನರ್ಥದಂಡವರ್ಣನೆ.**

**ಕ್ಷಿತಿಸಲಿಲದಹನಪವನಾರಂಭಂ ವಿಫಲಂ ವನಸ್ಪತೀಚ್ಛೇದಂ ||**
**ಸರಣಂ ಸಾರಣಮಪಿ ಚ ಪ್ರಮಾದಚರ್ಯಾಂ ಪ್ರಭಾಷಂತೇ ||**

**ಅನ್ವಯಾರ್ಥಃ**—ವಿಫಲಂ-ಪ್ರಯೋಜನವಿಲ್ಲದೆ ಕ್ಷಿತಿಸಲಿಲದಹನ ಪವನಾರಂಭಂ ಭೂಮಿ, ನೀರು, ಅಗ್ನಿ, ವಾಯು ಇವುಗಳ ಆರಂಭವನ್ನು ಮಾಡುವಿಕೆಯು ವನಸ್ಪತೀಚ್ಛೇದಂ-ಗಿಡ ಬಳ್ಳಿಗಳನ್ನು ಕತ್ತರಿಸುವಿಕೆಯು ಸರಣಂ- ಸಂಚರಿಸುವಿಕೆಯು ಚ—ಮತ್ತೆ ಸಾರಣಮಪಿ—ಸಂಚಾರ ಮಾಡಿ ಸುವಿಕೆಯೂ ಪ್ರಮಾದಚರ್ಯಾಂ—ಪ್ರಮಾದಚರ್ಯವೆಂಬ ಅನರ್ಥದಂಡ ವೆಂದು ಪ್ರಭಾಷಂತೇ-ಹೇಳುತ್ತಾರೆ.

**ತಾತ್ಪರ್ಯ:**—ಪ್ರಯೋಜನವಿಲ್ಲದೆ ಭೂಮಿಯನ್ನು ಅಗಿಯುವಿಕೆಯು ನೀರಿನಲ್ಲಾಡುವಿಕೆಯು ಅಥವಾ ಚೆಲ್ಲುವಿಕೆಯು ಅಗ್ನಿಯನ್ನು ಉರಿಸುವಿ

ಕೆಯು, ಗಾಳಿಯನ್ನು ಬೀಸಿಕೊಳ್ಳುವಿಕೆಯು, ಗಿಡ ಬಳ್ಳಿ ಮರ ಮೊದಲಾ ದುವುಗಳನ್ನು ಕಡಿಯುವಿಕೆಯು, ತಾನು ಸಂಚಾರವನ್ನು ಮಾಡುವಿಕೆಯು ಮತ್ತೊಬ್ಬರನ್ನು ಮಾಡಿಸುವಿಕೆಯು, ಇವುಗಳಿಗೆ ಪ್ರಮಾದಚರ್ಯವೆಂಬ ಅನರ್ಥದಂಡವೆಂದು ಹೆಸರು. ಈ ಪೂರ್ವೋಕ್ತವಾದ ಐದು ಅನರ್ಥದಂಡ ಗಳನ್ನು ತ್ಯಾಗಮಾಡುವುದಕ್ಕೆ ಅನರ್ಥದಂಡವ್ರತವೆಂದು ಹೆಸರು. ವ್ರತಿಕನು ಈ ಅನರ್ಥದಂಡಗಳನ್ನು ಬಿಡಬೇಕೆಂದು ಮುಖ್ಯಾಭಿಪ್ರಾಯವು.

**ಅನರ್ಥದಂಡವ್ರತಾತಿಚಾರವರ್ಣನೆ.**

**ಕಂದರ್ಪಂ ಕೌತ್ಕುಚ್ಯಂ ಮೌಖರ್ಯಮತಿಪ್ರಸಾಧನಂ ಪಂಚ ||**
**ಅಸಮೀಕ್ಷ್ಯ ಚಾಧಿಕರಣಂ ವ್ಯತೀತಯೋಽನರ್ಥದಂಡಕೃದ್ವಿರತೇಃ ||**

**ಅನ್ವಯಾರ್ಥ:**—ಕಂದರ್ಪಂ- ಅಶ್ಲೀಲವಚನಗಳನ್ನಾಡುವಿಕೆಯು ಕೌತ್ಕುಚ್ಯಂ—ಕಾಯಚೇಷ್ಟೆಯನ್ನು ಮಾಡುವಿಕೆಯು ಮೌಖರ್ಯಂ— ವ್ಯರ್ಥವಾಗಿ ಮಾತನಾಡುವಿಕೆಯು ಅತಿಪ್ರಸಾಧನಂ—ಭೋಗೋಪಭೋಗ ಸಾಮಗ್ರಿಗಳನ್ನು ಅಧಿಕವಾಗಿಟ್ಟುಕೊಳ್ಳುವಿಕೆಯು ಚ-ಮತ್ತು ಅಸಮೀಕ್ಷ್ಯ ವಿಚಾರವಿಲ್ಲದೆ ಅಧಿಕರಣಂ—ಮನವಚನಕಾಯಗಳ ಕ್ರಿಯೆಯು 'ಏತೇ' ಪಂಚ—ಇವೈದು ಅನರ್ಥದಂಡಕೃದ್ವಿರತೇಃ—ಅನರ್ಥದಂಡ ವ್ರತಕ್ಕೆ ವ್ಯತೀತಯಃ—ಅತಿಚಾರಗಳಾಗಿ ಭವಂತಿ- ಆಗುತ್ತವೆ.

**ತಾತ್ಪರ್ಯ:**—ಚಾರಿತ್ರಮೋಹನೀಯಕರ್ಮದ ಉದಯದಿಂದ ಹಾಸ್ಯಮಿಶ್ರಿತವಾದ ಮಾತುಗಳನ್ನಾಡುವುದಕ್ಕೆ ಕಂದರ್ಪವೆಂದೂ, ಕಾಯ ಚೇಷ್ಟೆಯನ್ನು ಮಾಡುವುದಕ್ಕೆ ಕೌತ್ಕುಚ್ಯವೆಂದೂ, ಪ್ರಯೋಜನವಿಲ್ಲದೆ ನಿಸ್ಸಾರವಾದ ಬಂಡುವಚನಗಳನ್ನಾಡುವುದಕ್ಕೆ ಮೌಖರ್ಯವೆಂದೂ, ಹೆಚ್ಚಾದ ಅಲಂಕಾರ ಭೋಗೋಪಭೋಗಗಳನ್ನು ಅಭಿವೃದ್ಧಿಪಡಿಸಿಕೊಳ್ಳು ವುದಕ್ಕೆ ಅತೀಪ್ರಸಾಧನವೆಂದೂ, ಪ್ರಯೋಜನವಿಲ್ಲದ ಕಾರ್ಯಗಳಲ್ಲಿ ಮನ ವಚನಕಾಯಗಳ ಪ್ರವೃತ್ತಿಗೆ ಅಸಮೀಕ್ಷ್ಯಾಧಿಕರಣವೆಂದೂ ಹೆಸರು. ಇವೈದು ಅನರ್ಥದಂಡವ್ರತದ ಅತಿಚಾರಗಳಿವೆ.

## ಭೋಗೋಪಭೋಗಪರಿಮಾಣವ್ರತವರ್ಣನೆ.

**ಅಕ್ಷಾರ್ಥಾನಾಂ ಪರಿಸಂಖ್ಯಾನಂ ಭೋಗೋಪಭೋಗಪರಿಮಾಣಂ ||**
**ಅರ್ಥವತಾಮಪ್ಯವಧೌ ರಾಗರತೀನಾಂ ತನೂಕೃತಯೇ ||೮೨||**

**ಅನ್ವಯಾರ್ಥಃ**— ರಾಗರತೀನಾಂ—ಪ್ರೀತಿ ಮತ್ತು ಮೋಹಗಳ ತನೂಕೃತಯೇ— ಕಮ್ಮಿ ಮಾಡುವುದಕ್ಕೋಸ್ಕರ ಅವಧೌ ಅಪಿ—ಪರಿಗ್ರಹ ಪರಿಮಾಣವ್ರತದ ಯೆಲ್ಲೆಯಲ್ಲಿ ಕೂಡ ಅರ್ಥವತಾಂ—ಪ್ರಯೋಜನಭೂತ ವಾದ ಅಕ್ಷಾರ್ಥಾನಾಂ—ಇಂದ್ರಿಯವಿಷಯಗಳ 'ನಿತ್ಯಂ'— ಪ್ರತಿನಿತ್ಯವೂ ಪರಿಸಂಖ್ಯಾನಂ—ನಿಯಮಮಾಡಿಕೊಳ್ಳುವಿಕೆಯು ಭೋಗೋಪಭೋಗ ಪರಿಮಾಣಂ—ಭೋಗೋಪಭೋಗಪರಿಮಾಣವ್ರತವೆಂದು 'ಉಚ್ಯತೇ'— ಹೇಳಲ್ಪಡುತ್ತದೆ.

**ತಾತ್ಪರ್ಯ**ಃ—ತನಿಗಿಷ್ಟವಾದ ಪತ್ನಿಪುತ್ರಾದಿಗಳ ಪ್ರೀತಿಗೆ ರಾಗ ವೆಂದೂ ಕಾಮಸೇವನೆಗೆ ರತಿಯೆಂದೂ ಹೆಸರು. ಆ ರಾಗಾದಿಭಾವಗಳನ್ನು ಕಡಿಮೆ ಮಾಡುವುದಕ್ಕೋಸ್ಕರ ಪರಿಗ್ರಹಪರಿಮಾಣವ್ರತದಲ್ಲಿ ಜನ್ಮಾವಧಿನಿ ಯಮ ಮಾಡಿಕೊಂಡುವೂ ಪ್ರಯೋಜನವುಳ್ಳವೂ ಇಂದ್ರಿಯ ಸಂಬಂಧಿ ಯೂ ಆದ ವಿಷಯಗಳನ್ನು ಪ್ರತಿನಿತ್ಯವೂ ಪ್ರಯೋಜನವಿಲ್ಲದ ಪರಿಗ್ರಹ ಗಳನ್ನು ನಿಯಮಮಾಡಿ ಬಿಡುವುಒಕ್ಕೆ ಭೋಗೋಪಭೋಗಪರಿಮಾಣವ್ರತ ವೆಂದು ಹೆಸರು.

### ಭೋಗ ಮತ್ತು ಉಪಭೋಗದ ಲಕ್ಷಣ

**ಭುಕ್ತ್ವಾ ಪರಿಹಾತವ್ಯೋ ಭೋಗೋ ಭುಕ್ತ್ವಾಪುನಶ್ಚಭೋಕ್ತವ್ಯಃ ||**
**ಉಪಭೋಗೋಽಶನವಸನಪ್ರಭೃತಿ: ಪಂಚೇಂದ್ರಿಯೋ ವಿಷಯಃ ||**

**ಅನ್ವಯಾರ್ಥ:**—ಅಶನವಸನಪ್ರಭೃತಿಃ—ಭೋಜನ ವಸ್ತ್ರ ಮೊದ ಲಾದ ಪಂಚೇಂದ್ರಿಯಃ—ಐದು ಇಂದ್ರಿಯ ಸಂಬಂಧವಾದ ವಿಷಯಃ–ಪದಾ ರ್ಥವು ಭುಕ್ತ್ವಾ—ಭೋಗಿಸಿ ಪರಿಹಾತವ್ಯ:—ಬಿಡುವುದಕ್ಕೆ ಯೋಗ್ಯವಾದು ದು ಭೋಗಃ—ಭೋಗವಸ್ತುವು ಚ— ಮತ್ತು ಭುಕ್ತ್ವಾ—-ಭೋಗಿಸಿ **ಪುನಃ**—

ಮರಳಿ ಭೋಕ್ತವ್ಯ:—ಅನುಭವಿಸತಕ್ಕುದು. ಉಪಭೋಗಃ—ಉಪಭೋಗ ಪದಾರ್ಥವಾಗಿ ಭವತಿ—ಆಗುತ್ತದೆ.

**ತಾತ್ಪರ್ಯ:**—ಪಂಚೇಂದ್ರಿಗಳ ಸಂಬಂಧವಾದ ಆಹಾರ ಸಂಗೀತ ಪುಷ್ಪಮಾಲೆ ಮೊದಲಾದ ಒಮ್ಮೆ ಅನುಭವಿಸುವುದಕ್ಕಾಗುವ ಪದಾರ್ಥ ಗಳಿಗೆ ಭೋಗವಸ್ತುವೆಂದೂ, ಪುನಃಪುನ: ಭೋಗಿಸುವುದಕ್ಕಾಗುವ ಸ್ತ್ರೀ, ವಸ್ತ್ರ, ಗೃಹ ಮೊದಲಾದುವುಗಳಿಗೆ ಉಪಭೋಗವಸ್ತುವೆಂದೂ ಹೆಸರು.

**ಜನ್ಮಾವಧಿ ಬಿಡತಕ್ಕುವು**

**ತ್ರಸಹತಿಪರಿಹರಣಾರ್ಥಂ ಕ್ಷೌದ್ರಂ ಪಿಶಿತಂ ಪ್ರಮಾದಪರಿಹೃತಯೇ ||**
**ಮದ್ಯಂಚ ವರ್ಜನೀಯಂ ಜಿನಚರಣೌ ಶರಣಮುಪಯಾತೈ:||೮೪||**

**ಅನ್ವಯಾರ್ಥ:**—ಜಿನಚರಣೌ—ಭಗವಂತನ ಪಾದಕಮಲಗಳೇ ಶರಣಂ—ರಕ್ಷಕವೆಂದು ಉಪಯಾತೈ:—ಬಂದ [ನಂಬಿದ]ವರಿಂದ ತ್ರಸಹತಿ ಪರಿಹರಣಾರ್ಥಂ—ತ್ರಸಜೀವಹಿಂಸೆಯ ನಿವಾರಣೆಗೋಸ್ಕರ ಕ್ಷೌದ್ರಂ—ಜೇನುತುಪ್ಪವನ್ನು ಪಿಶಿತಂ—ಮಾಂಸವನ್ನು ಚ—ಮತ್ತು ಪ್ರಮಾದಪರಿ ಹೃತಯೇ—ಅಜ್ಞಾನವನ್ನು ಹೋಗಲಾಡಿಸುವುದಕ್ಕೋಸ್ಕರ ಮದ್ಯಂ—ಹೆಂಡವನ್ನು ವರ್ಜನೀಯಂ—ಬಿಡತಕ್ಕುದು.

**ತಾತ್ಪರ್ಯ:**—ಜಿನಭಕ್ತರು ದ್ವಿಂದ್ರಿಯಾದಿ ತ್ರಸಜೀವಗಳ ಹಿಂಸಾ ಪರಿಹಾರಕ್ಕೋಸ್ಕರ ಮಧುಮಾಂಸಗಳನ್ನೂ ಅಜ್ಞಾನನಿವೃತ್ತಿಗೋಸ್ಕರ ಹೆಂಡ ಸರಾಯಿ ಮೊದಲಾದ ಮಾದಕಪದಾರ್ಥಗಳನ್ನೂ ಬಿಡಬೇಕು. ಅವುಗಳಲ್ಲಿ ಪೂರ್ವೋಕ್ತಪ್ರಕಾರ ಹೆಚ್ಚಾದ ದೋಷಗಳಿರುವುದರಿಂದ ಜನ್ಮಾ ವಧಿ ತ್ಯಜಿಸಬೇಕೆಂದು ಮುಖ್ಯಾಭಿಪ್ರಾಯವು.

**ಅಲ್ಪಫಲಬಹುವಿಘಾತಾನ್ಮೂಲಕಮಾರ್ದ್ರಾಣಿ ಶೃಂಗವೇರಾಣಿ ||**
**ನವನೀತನಿಂಬ ಕುಸುಮಂ ಕೈತಕಮಿತ್ಯೇವಮುವಹೆಯಂ ||೮೫||**

**ಅನ್ವಯಾರ್ಥ:**—ಅಲ್ಪಫಲಬಹುವಿಘಾತಾತ್—ಅಲ್ಪಪ್ರಯೋ ಜನವೂ ಬಹು ತ್ರಸಜೀವಗಳ ಹಿಂಸೆಯೂ ಆಗುವುದರಿಂದ ಆರ್ದ್ರಾಣಿ—ಹಸಿದಾದ ಶೃಂಗವೇರಾಣಿ—ಶುಂಠಿಗಳನ್ನು ಮೂಲಕಂ—ಮೂಲಂಗಿಯನ್ನು

ನವನೀತನಿಂಬ ಕುಸುಮಂ—ಬೆಣ್ಣೆ ಕೈಬೇವಿನ ಹೂ ಇವುಗಳನ್ನು ಕೈತಕಂ-ಕೇದಿಗೆಯನ್ನು ಇತ್ಯೇವಂ—ಇದು ಮೊದಲಾದ ಅಭಕ್ಷ್ಯವಸ್ತುಗಳನ್ನು ಅವಹೇಯಂ ಬಿಡತಕ್ಕುದು.

ತಾತ್ಪರ್ಯ:—ಅಭಕ್ಷ್ಯಗಳಾದ ಹಸಿಸುಂಠಿ ಮೂಲಂಗಿ ಗಡ್ಡೆ ಗೆಣಸು ಬೆಣ್ಣೆ ಕೈಬೇವಿನಪುಷ್ಪ ಮೊದಲಾದ ಹೂವುಗಳು ಕೇದಿಗೆ ನೀರುಳ್ಳಿ ಬೆಳ್ಳುಳ್ಳಿಗಡ್ಡೆ ಮೊದಲಾದ ಪದಾರ್ಥಗಳ ಭಕ್ಷಣೆಯಿಂದ ಅಲ್ಪಕಾಲದವರೆಗೆ ತೃಪ್ತಿಯೂ ಅನಂತಕಾಲದವರೆಗೆ ದುಃಖವನ್ನುಂಟುವ ತ್ರಸಜೀವಗಳ ಹಿಂಸೆಯೂ ಉಂಟಾಗುವುದರಿಂದ ಅವುಗಳನ್ನು ವರ್ಜಿಸಬೇಕೆಂದಭಿಪ್ರಾಯವು.

## ವ್ರತಸ್ವರೂಪವರ್ಣನೆ

**ಯದನಿಷ್ಟಂ ತದ್ವ್ರತಯೇದ್ಯಚ್ಚಾನುಪಸೇವ್ಯಮೇತದಪಿಜಹ್ಯಾತ್ ||**
**ಅಭಿಸಂಧಿಕೃತಾವಿರತಿರ್ವಿಷಯಾದ್ಯೋಗ್ಯಾದ್ವ್ರತಂ ಭವತಿ ||೮೬||**

**ಅನ್ವಯಾರ್ಥ:**—ಯತ್—ಯಾವದು ಅನಿಷ್ಟಂ—ಹಾನಿಯನ್ನುಂಟು ಮಾಡುವುದೋ ತತ್—ಅದನ್ನು ವ್ರತಯೇತ್—ನಿಯಮಮಾಡಿ ಬಿಡತಕ್ಕುದ್ದು. ಚ—ಮತ್ತು ಯತ್-ಯಾವದು ಅನುಪಸೇವ್ಯಂ-ಸೇವಿಸುವುದಕ್ಕೆ ಯೋಗ್ಯವಲ್ಲವೋ ಏತದಪಿ—ಇದನ್ನು ಕೂಡ ಜಹ್ಯಾತ್—ಬಿಡತಕ್ಕುದ್ದು ಯೋಗ್ಯಾತ್—ಯೋಗ್ಯವಾದ **ವಿಷಯಾತ್**—ಪದಾರ್ಥಗಳ ದೆಸೆಯಿಂದ ಅಭಿಸಂಧಿಕೃತಾ—ಮನಃಪೂರ್ವಕವಾಗಿ ಮಾಡಲ್ಪಟ್ಟ ವಿರ**ತಿ:**—ನಿಯಮವು ವ್ರತಂ- ವ್ರತವಾಗಿ **ಭವತಿ**—ಆಗುತ್ತದೆ.

**ತಾತ್ಪರ್ಯ:**—ತನಗೆ ಇಷ್ಟವಿಲ್ಲದುದೂ ತನ್ನ ಪ್ರಕೃತಿಗೆ ವಿರುದ್ಧವೂ ಆದ ವಸ್ತುಗಳನ್ನು ನಿಯಮ ಮಾಡಿ ಬಿಡುವುದಕ್ಕೆ ವ್ರತವೆಂದೂ, ಶಾಸ್ತ್ರೋಕ್ತ ಪ್ರಕಾರ ಅಭಕ್ಷ್ಯಪದಾರ್ಥಗಳನ್ನು ಸೇವಿಸದಿರುವುದಕ್ಕೆ ವ್ರತವೆಂದೂ, ಸೇವಿಸುವುದಕ್ಕೆ ಯೋಗ್ಯವಾದ ಪದಾರ್ಥಗಳನ್ನು ಮನಃಪೂರ್ವಕವಾಗಿ ಬಿಡುವುದಕ್ಕೆ ವ್ರತವೆಂದೂ ಹೆಸರು. ಈ ರೀತಿಯಾಗಿ ವ್ರತದಲ್ಲಿ ಮೂರು ವಿಧವೆಂದಭಿಪ್ರಾಯವು.

## ಯಮನಿಯಮವ್ರತಸ್ವರೂಪವರ್ಣನೆ.

**ನಿಯಮೋ ಯಮಶ್ಚ ವಿಹಿತೌ ದ್ವೇಧಾ ಭೋಗೋಪಭೋಗಸಂಹಾರೇ**
**ನಿಯಮ: ಪರಿಮಿತಕಾಲೋ ಯಾವಜ್ಜೀವಂ ಯಮೋಧ್ರಿಯತೇ ||**

**ಅನ್ವಯಾರ್ಥ:**—ಭೋಗೋಪಭೋಗಸಂಹಾರೇ—ಭೋಗೋಪಭೋಗವಸ್ತುಗಳ ತ್ಯಾಗದಲ್ಲಿ ನಿಯಮಃ—ನಿಯಮವ್ರತವೆಂದೂ ಚ–ಮತ್ತು ಯಮ:—ಯಮವ್ರತವೆಂದೂ ದ್ವೇಧಾ—ಎರಡು ಪ್ರಕಾರವಾಗಿ ವಿಹಿತೌ—ಹೇಳಲ್ಪಟ್ಟಿವೆ. ಪರಿಮಿತಕಾಲ:- ಇಂತಿಷ್ಟು ಕಾಲದವರೆಗೆಂದು ಮಾಡಿಕೊಳ್ಳುವಿಕೆಯು ನಿಯಮ:—ನಿಯಮವ್ರತವು ಯಮ:—ಯಮವ್ರತವು ಯಾವಜ್ಜೀವಂ—ಜನ್ಮಾವಧಿಯ ವರೆಗೆ ಧ್ರಿಯತೆ-ಧರಿಸಲ್ಪಡುತ್ತದೆ,

**ತಾತ್ಪರ್ಯ:**—ವ್ರತದಲ್ಲಿ ನಿಯಮವ್ರತ—ಯಮವ್ರತಗಳೆಂದು ಎರಡು ವಿಧ. ಕಾಲಕ್ಲಪ್ತತೆಯಿಂದ ಇಂತಿಷ್ಟು ಸಮಯದವರೆಗೆಂದು ಮಾಡಿಕೊಳ್ಳುವ ನಿಯಮಕ್ಕೆ ನಿಯಮವ್ರತವೆಂದೂ ಜನ್ಮಾವಧಿ ಮಾಡಿಕೊಳ್ಳುವ ವ್ರತಕ್ಕೆ ಯಮವ್ರತವೆಂಬೂ ಹೆಸರು.

## ನಿಯಮದ ವಿಧಿ.

**ಭೋಜನವಾಹನಶಯನಸ್ನಾನಪವಿತ್ರಾಂಗರಾಗಕುಸುಮೇಷು ||**
**ತಾಂಬೂಲವಸನಭೂಷಣಮನ್ಮಥಸಂಗೀತಗೀತೇಷು ||೮೮||**
**ಅದ್ಯ ದಿವಾ ರಜನೀ ವಾ ಪಕ್ಷೋ ಮಾಸಸ್ತಥರ್ತುರಯನಂ ವಾ ||**
**ಇತಿ ಕಾಲಪರಿಚ್ಛಿತ್ತ್ಯಾ ಪ್ರತ್ಯಾಖ್ಯಾನಂ ಭವೇನ್ನಿಯಮಃ ||೮೯||**

**ಅನ್ವಯಾರ್ಥ:**—ಭೋಜನವಾಹನಶಯನಸ್ನಾನಪವಿತ್ರಾಂಗರಾಗಕುಸುಮೇಷು—ಆಹಾರ ವಾಹನ ಹಾಸಿಗೆ ಸ್ನಾನ ಪವಿತ್ರವಾದ ಸುಗಂಧ ಲೇಪನ ಪುಷ್ಪ ಇವುಗಳಲ್ಲಿ ತಾಂಬೂಲವಸನಭೂಷಣಮನ್ಮಥಸಂಗೀತಗೀತೇಷು—ತಾಂಬೂಲ ವಸ್ತ್ರ ಆಭರಣ ಕಾಮಸೇವನೆ ಸಂಗೀತ—ನೃತ್ಯ ಇವುಗಳಲ್ಲಿ ಅದ್ಯ—ಇವತ್ತು ದಿವಾ—ಹಗಲು ವಾ—ಅಥವಾ ರಜನೀ-ರಾತ್ರೆ ಪಕ್ಷಃ—ಹದಿನೈದು ದಿವಸ ಮಾಸ—ಒಂದು ತಿಂಗಳು ತಥಾ-ಹಾಗೆಯೇ ಋತುಃ—ಎರಡು ತಿಂಗಳು ವಾ–ಅಥವಾ ಅಯನಂ-ಆರು ತಿಂಗಳು ಇತಿ-ಈ ಪ್ರಕಾರವಾಗಿ ಕಾಲಪರಿಚ್ಛಿತ್ತ್ಯಾ—ಕಾಲವಿಭಾಗದಿಂದ ಪ್ರತ್ಯಾಖ್ಯಾನಂ-ಬಿಡುವಿಕೆಯು ನಿಯಮ:-ನಿಯಮವ್ರತವಾಗಿ ಭವೇತ್–ಆಗುವುದು.

ತಾತ್ಪರ್ಯ:—ಪೂರ್ವೋಕ್ತಪ್ರಕಾರವಾದ ಭೋಜನ ವಾಹನ ಮೊದಲಾದ ಪದಾರ್ಥಗಳನ್ನು ಕಾಲವಿಭಾಗದಿಂದ ವ್ರತಮಾಡಿ ಬಿಡುವುದಕ್ಕೆ ನಿಯಮವ್ರತವೆಂದು ಹೆಸರು.

**ಭೋಗೋಪಭೋಗವ್ರತಾತಿಚಾರವರ್ಣನೆ.**

ವಿಷಯವಿಷತೋಽನುಪೇಕ್ಷಾನುಸ್ಮೃತಿಲೌಲ್ಯಮತಿತೃಷಾನುಭವೋ
ಭೋಗೋಪಭೋಗಪರಿಮಾವ್ಯತಿಕ್ರಮಾಃ ಪಂಚ ಕಥ್ಯಂತೇ ॥೯೦॥

ಅನ್ವಯಾರ್ಥ:—ವಿಷಯವಿಷತಃ—ಪಂಚೇಂದ್ರಿಯವಿಷಯಗಳೆಂಬ ವಿಷದಿಂದ ಅನುಪೇಕ್ಷಾ—ತಿರಸ್ಕಾರವಿಲ್ಲದಿರುವಿಕೆಯು ಅನುಸ್ಮೃತಿ:-ಮೊದಲು ಅನುಭವಿಸಿದ ಭೋಗಗಳ ಸ್ಮರಣೆಯು ಅತಿಲೌಲ್ಯಂ—ಈಗಿರುವ ಭೋಗದಲ್ಲಿ ಅತ್ಯಾಶೆಯು ಅತಿತೃಷಾ—ಮುಂದಿನ ಭೋಗಾಕಾಂಕ್ಷೆಯು ಅನುಭವಃ—ಅನುಭವಿಸುವಿಕೆಯು 'ಏತೇ' ಪಂಚ—ಇವೈದು ಭೋಗೋಪಭೋಗಪರಿಮಾವ್ಯತಿಕ್ರಮಾ:—ಭೋಗೋಪಭೋಗಪರಿಮಾಣವ್ರತದ ಅತಿಚಾರಗಳೆಂದು ಕಥ್ಯಂತೇ—ಹೇಳಲ್ಪಡುತ್ತವೆ.

ತಾತ್ಪರ್ಯ:—ವಿಷವು ಪ್ರಾಣಹಾನಿಯನ್ನುಂಟು ಮಾಡುವಂತೆ ಈ ಪಂಚೇಂದ್ರಿಯ ಸಂಬಂಧವಾದ ವಿಷಯಗಳು ಕೂಡ ಹಲವು ವಿಧದ ದುಃಖ ಸಂಕಷ್ಟಗಳಿಗೆ ಕಾರಣಗಳಾಗಿವೆ. ಅಂತಹ ಪಂಚೇಂದ್ರಿಯ ವಿಷಯಗಳನ್ನು ತ್ಯಜಿಸದೆ ಅವುಗಳಲ್ಲಿ ಮಗ್ನನಾಗಿರುವುದಕ್ಕೆ 'ಅನುಪೇಕ್ಷೆ'ಯೆಂದೂ ಪೂರ್ವದಲ್ಲಿ ಭೋಗಿಸಿದ ವಿಷಯಗಳನ್ನು ಬಾರಿಬಾರಿಗೂ ಚಿಂತಿಸುವುದಕ್ಕೆ 'ಅನುಸ್ಮೃತಿ'ಯೆಂದೂ, ಈಗ ಅನುಭವಿಸುತ್ತಿರುವ ಭೋಗದಲ್ಲಿ ಅತ್ಯಾಸಕ್ತನಾಗಿರುವುದಕ್ಕೆ 'ಅತಿಲೌಲ್ಯ'ವೆಂದೂ, ಭವಿಷತ್ಕಾಲದಲ್ಲುಂಟಾಗುವ ಭೋಗದಲ್ಲಿ ಅತ್ಯಾಶೆಯನ್ನಿಡುವುದಕ್ಕೆ 'ಅತಿತೃಷೆ'ಯೆಂದೂ ವಿಷಯಗಳನ್ನು ಭೋಗಿಸದಿದ್ದರೂ ಭೋಗಿಸುತ್ತಿದ್ದೇನೆಂದು ಭಾವಿಸುವುದಕ್ಕೆ 'ಅನುಭವ'ವೆಂದೂ ಹೆಸರು. ಇವೈದು ಭೋಗೋಪಭೋಗಪರಿಮಾಣವ್ರತದ ಅತಿಚಾರಗಳಾಗಿವೆ. ವ್ರತಿಕನು ಇವುಗಳನ್ನು ಬಿಡಬೇಕೆಂದಭಿಪ್ರಾಯವು.

ಇತಿ ಶ್ರೀಸಮಂತಭದ್ರಾಚಾರ್ಯವಿರಚಿತೇ ರತ್ನಕರಂಡಕನಾಮ್ನಿ
ಉಪಾಸಕಾಧ್ಯಯನೇ ಗುಣವ್ರತವ್ಯಾವರ್ಣನಂ ನಾಮ
ಚತುರ್ಥಃ ಪರಿಚ್ಛೇದಃ

# ಅಥ ಪಂಚಮಃ ಪರಿಚ್ಛೇದಃ



## ಶಿಕ್ಷಾವ್ರತದ ಭೇದಗಳು.

**ದೇಶಾವಕಾಶಿಕಂ ವಾ ಸಾಮಯಿಕಂ ಪ್ರೋಷಧೋಪವಾಸೋ ವಾ ||**
**ವೈಯಾವೃತ್ಯಂ ಶಿಕ್ಷಾವ್ರತಾನಿ ಚತ್ವಾರಿ ಶಿಷ್ಟಾನಿ ||೯೧||**

**ಅನ್ವಯಾರ್ಥಃ**—ದೇಶಾವಕಾಶಿಕಂ—ದೇಶಾವಕಾಶಿಕವ್ರತವು ವಾ—ಮತ್ತು ಸಾಮಯಿಕಂ—ಸಾಮಯಿಕವ್ರತವು ಪ್ರೋಷಧೋಪವಾಸ—ಪ್ರೋಷಧೋಪವಾಸವ್ರತವು ವಾ—ಮತ್ತು ವೈಯಾವೃತ್ಯಂ—ವೈಯಾವೃತ್ಯವು 'ಏತಾನಿ' ಚತ್ವಾರಿ—ಇವು ನಾಲ್ಕು ಶಿಕ್ಷಾವ್ರತಾನಿ—ಶಿಕ್ಷಾವ್ರತಗಳೆಂದು ಶಿಷ್ಟಾನಿ— ಹೇಳಲ್ಪಟ್ಟಿವೆ.

**ತಾತ್ಪರ್ಯ:**—ದೇಶಾವಕಾಶಿಕ, ಸಾಮಯಿಕ, ಪ್ರೋಷಧೋಪವಾಸ, ಮತ್ತು ವೈಯಾವೃತ್ಯಗಳೆಂದು ಶಿಕ್ಷಾವ್ರತದಲ್ಲಿ ನಾಲ್ಕುಭೇದಗಳಿವೆ.

## ದೇಶಾವಕಾಶಿಕವ್ರತಸ್ವರೂಪ.

**ದೇಶಾವಕಾಶಿಕಂ ಸ್ಯಾತ್ಕಾಲಪರಿಚ್ಛೇದನೇನ ದೇಶಸ್ಯ ||**
**ಪ್ರತ್ಯಹಮಣುವ್ರತಾನಾಂ ಪ್ರತಿಸಂಹಾರೋ ವಿಶಾಲಸ್ಯ ||೯೨||**

**ಅನ್ವಯಾರ್ಥ:**—ವಿಶಾಲಸ್ಯ—ವಿಸ್ತಾರವಾದ ದೇಶಸ್ಯ—ಪ್ರದೇಶದ ಕಾಲಪರಿಚ್ಛೇದನೇನ—ಕಾಲವಿಭಾಗದಿಂದ ಪ್ರತ್ಯಹಂ—ಪ್ರತಿದಿನವು ಪ್ರತಿಸಂಹಾರಃ—ಬಿಡುವಿಕೆಯು ಅಣುವ್ರತಾನಾಂ-ಅಣುವ್ರತವುಳ್ಳವರಿಗೆ ದೇಶಾವಕಾಶಿಕಂ—ದೇಶಾವಕಾಶಿಕವ್ರತವಾಗಿ ಸ್ಯಾತ್—ಆಗುವುದು.

**ತಾತ್ಪರ್ಯಃ**—ಗೃಹಸ್ಥಾವಸ್ಥೆಯಲ್ಲಿ ಮುನಿಧರ್ಮದ ಅಭ್ಯಾಸವನ್ನು ಮಾಡುವುದಕ್ಕೆ ಶಿಕ್ಷಾವ್ರತವೆಂದು ಹೆಸರು. ಅದರಲ್ಲಿ ನಾಲ್ಕು ಭೇದಗಳೆಂದು ಹೇಳಿತಷ್ಟೇ? ಶ್ರಾವಕರು ದಿವಸ ಪಕ್ಷ ಮೊದಲಾದ ಕಾಲನಿಯಮದಿಂದ ಮೊದಲು ದಿಗ್ವ್ರತದಲ್ಲಿ ಎಲ್ಲೆಯನ್ನು ಮಾಡಿಕೊಂಡು ವಿಸ್ತಾರವಾದ ಪ್ರತಿನಿತ್ಯವೂ ತನಗೆ ಪ್ರಯೋಜನವಿಲ್ಲದಿರುವ ಪ್ರದೇಶಗಳ

ಸಂಚಾರವ್ಯವಹಾರಸಂಬಂಧವನ್ನು ಬಿಡುವುದಕ್ಕೆ ದೇಶಾವಕಾಶಿಕವ್ರತವೆಂದು ಹೆಸರು. ದಿಗ್ವ್ರತವು ಜನ್ಮಾವಧಿ ಮಾಡಿಕೊಂಡುದೂ, ದೇಶಾವಕಾಶಿಕವ್ರತವು ಪ್ರತಿನಿತ್ಯ ಮಾಡಿಕೊಳ್ಳುವುದೆಂದು ಮುಖ್ಯಾಭಿಪ್ರಾಯವು.

**ದೇಶಾವಕಾಶಿಕವ್ರತದ ಕ್ಷೇತ್ರವಿಭಾಗ.**

**ಗೃಹಹಾರಿಗ್ರಾಮಾಣಾಂ ಕ್ಷೇತ್ರನದೀದಾವಯೋಜನಾನಾಂ ಚ ||**
**ದೇಶಾವಕಾಶಿಕಸ್ಯ ಸ್ಮರಂತಿ ಸೀಮಾಂ ತಪೋವೃದ್ಧಾಃ ||೯೩||**

**ಅನ್ವಯಾರ್ಥ:**—ತಪೋವೃದ್ಧಾಃ—ಗಣಧರರು ದೇಶಾವಕಾಶಿಕಸ್ಯ—ದೇಶಾವಕಾಶಿಕವ್ರತದ ಗೃಹಹಾರಿಗ್ರಾಮಾಣಾಂ—ಮನೆ ಬೀದಿ ಗ್ರಾಮ ಇವುಗಳನ್ನು ಚ—ಮತ್ತು ಕ್ಷೇತ್ರನದೀದಾವಯೋಜನಾನಾಂ—ಹೊಲಗದ್ದೆ ನದಿ ವನ ಯೋಜನ ಇವುಗಳನ್ನು ಸೀಮಾಂ—ಯೆಲ್ಲೆಯೆಂದು ಸ್ಮರಂತಿ—ಹೇಳುತ್ತಾರೆ.

**ತಾತ್ಪರ್ಯ:**—ಈ ಮನೆ, ಬೀದಿ ಗ್ರಾಮ ಹೊಲ ಗದ್ದೆ ನದಿ ವನ ಇಂತಿಷ್ಟು ಯೋಜನ ಇವುಗಳನ್ನು ಉಲ್ಲಂಘಿಸಿ ಹೋಗುವುದಿಲ್ಲವೆಂದು ಮಾಡಿಕೊಳ್ಳುವ ಭೂಮಿಯ ವಿಭಾಗಕ್ಕೆ ದೇಶಾವಕಾಶಿಕವ್ರತದ ಕ್ಷೇತ್ರಾವಧಿಯೆಂದು ಹೆಸರು.

**ದೇಶಾವಕಾಶಿಕವ್ರತದ ಕಾಲಾವಧಿ**

**ಸಂವತ್ಸರಮೃತುರಯನಂ ಮಾಸಚತುರ್ಮಾಸಪಕ್ಷಮೃಕ್ಷಂ ಚ ||**
**ದೇಶಾವಕಾಶಿಕಸ್ಯ ಪ್ರಾಹುಃ ಕಾಲಾವಧಿಂ ಪ್ರಾಜ್ಞಾಃ ||೯೪||**

**ಅನ್ವಯಾರ್ಥ:**—ಪ್ರಾಜ್ಞಾಃ—ಗಣಧರಾದಿಬುದ್ಧಿಶಾಲಿಗಳು ಸಂವತ್ಸರಂ—ಒಂದು ವರ್ಷವು ಋತುಃ—ಎರಡು ತಿಂಗಳು ಅಯನಂ—ಆರು ಮಾಸವು ಮಾಸಚತುರ್ಮಾಸಪಕ್ಷಂ—ಒಂದು ತಿಂಗಳು ನಾಲ್ಕು ತಿಂಗಳು ಹದಿನೈದು ದಿವಸ ಚ—ಮತ್ತು ಋಕ್ಷಂ—ಒಂದು ದಿವಸ ಇವುಗಳನ್ನು ದೇಶಾವಕಾಶಿಕಸ್ಯ—ದೇಶಾವಕಾಶಿಕವ್ರತದ ಕಾಲಾವಧಿಂ—ಕಾಲವಿಭಾಗವೆಂದು ಪ್ರಾಹುಃ—ಹೇಳುತ್ತಾರೆ.

**ತಾತ್ಪರ್ಯ:**—ಇಂತಿಷ್ಟು ಸಂವತ್ಸರ ಇಂತಿಷ್ಟುಮಾಸ ಮೊದಲಾದ ಕಾಲನಿಯಮವನ್ನು ಮಾಡಿಕೊಳ್ಳುವುದಕ್ಕೆ ದೇಶಾವಕಾಶಿಕವ್ರತದ ಕಾಲಾವಧಿಯೆಂದು ಹೆಸರು.

**ದೇಶಾವಕಾಶಿಕವ್ರತದ ಪ್ರಯೋಜನ**

**ಸೀಮಾಂತಾನಾಂ ಪರತ: ಸ್ಥೂಲೇತರಪಂಚಪಾಪಸಂತ್ಯಾಗಾತ್॥**
**ದೇಶಾವಕಾಶಿಕೇನ ಚ ಮಹಾವ್ರತಾನಿ ಪ್ರಸಾಧ್ಯಂತೇ ॥೯೫॥**

**ಅನ್ವಯಾರ್ಥ:**—ಸೀಮಾಂತಾನಾಂ-–ಪರತಃ-ಅವಧಿಯ ಹೊರಗೆ ಸ್ಥೂಲೇತರಪಂಚಪಾಪಸಂತ್ಯಾಗಾತ್—ಸ್ಥೂಲ ಮತ್ತು ಸೂಕ್ಷ್ಮರೂಪವಾದ ಪಂಚಪಾಪಗಳ ತ್ಯಾಗದಿಂದ ದೇಶಾವಕಾಶಿಕೇನ ಚ—ದೇಶಾವಕಾಶಿಕ ವ್ರತದಿಂದಲೂ ಮಹಾವ್ರತಾನಿ—ಮಹಾವ್ರತಗಳು ಪ್ರಸಾಧ್ಯಂತೇ—ಸಾಧಿಸಲ್ಪಡುತ್ತವೆ.

**ತಾತ್ಪರ್ಯ:**—ದೇಶಾವಕಾಶಿಕವ್ರತದಲ್ಲಿ ತಾನು ಮಾಡಿಕೊಂಡ ಅದಧಿಯ ಹೊರಗೆ ಸ್ಥೂಲ ಮತ್ತು ಸೂಕ್ಷ್ಮರೂಪವಾದ ಯಾವ ಪಾಪಗಳನ್ನು ಮಾಡದಿರುವುದರಿಂದ ಆ ದೇಶಾವಕಾಶಿಕವ್ರತಿಕನಿಗೆ ಸಹ ಉಪಚಾರದಿಂದ ಮಹಾವ್ರತಿಯೆಂದು ಹೇಳುತ್ತಾರೆ. ಮುಖ್ಯವಲ್ಲವೆಂದರ್ಥವು.

**ದೇಶಾವಕಾಶಿಕವ್ರತಾತಿಚಾರವರ್ಣನೆ.**

**ಪ್ರೇಷಣಶಬ್ದಾನಯನಂ ರೂಪಾಭಿವ್ಯಕ್ತಿಪುದ್ಗಲಕ್ಷೇಪೌ ॥**
**ದೇಶಾವಕಾಶಿಕಸ್ಯ ವ್ಯಪದಿಶ್ಯಂತೇಽತ್ಯಯಾಃ ಪಂಚ ॥೯೬॥**

**ಅನ್ವಯಾರ್ಥ:**—ಪ್ರೇಷಣಶಬ್ದಾನಯನಂ—ಅವಧಿಯ ಹೊರಗೆ ಕಳುಹಿಸುವಿಕೆಯು, ಶಬ್ದಮಾಡುವಿಕೆಯು, ತರಿಸುವಿಕೆಯು, ರೂಪಾಭಿವ್ಯಕ್ತಿಪುದ್ಗಲಕ್ಷೇಪೌ—ತನ್ನರೂಪವನ್ನು ತೋರಿಸುವಿಕೆಯು, ಕಲ್ಲು ಮೊದಲಾದ ಪುದ್ಗಲಗಳನ್ನು ಬಿಸಾಡುವಿಕೆಯು 'ಏತೇ' ಪಂಚ—ಇವೈದು ದೇಶಾವಕಾಶಿಕಸ್ಯ—ದೇಶಾವಕಾಶಿಕವ್ರತದ, ಅತ್ಯಯಾಃ-ಅತಿಚಾರಗಳೆಂದು ವ್ಯಪದಿಶ್ಯಂತೇ-ಹೇಳಲ್ಪಟ್ಟಿವೆ.

**ತಾತ್ಪರ್ಯ:**—ತಾನು ಮಾಡಿಕೊಂಡ ಎಲ್ಲೆಯ ಹೊರಗೆ ಕಾರ್ಯ

ನಿಮಿತ್ತವಾಗಿ ಸೇವಕ ಪುತ್ರಮಿತ್ರಾದಿಗಳನ್ನು ಕಳುಹಿಸಿಕೊಡುವುದಕ್ಕೆ 'ಪ್ರೇಷಣಾತಿಚಾರ'ವೆಂದೂ, ತನ್ನ ಅವಧಿಯ ಹೊರಗಿನ ಕ್ಷೇತ್ರದಲ್ಲಿ ನಿಂತು ವಚನಾಲಾಪ ಅಥವಾ ಶಬ್ದದಿಂದ ಸಂಜ್ಞೆಮಾಡಿ ಸೂಚಿಸುವುದಕ್ಕೆ 'ಶಬ್ದಾತಿಚಾರ'ವೆಂದೂ, ತನ್ನ ಅವಧಿಯ ಬಾಹ್ಯಕ್ಷೇತ್ರದಿಂದ ಯಾವದಾದರೊಂದು ಪದಾರ್ಥಗಳನ್ನು ತರಿಸುವಿಕೆ ಅಥವಾ ಯಾರನ್ನಾದರೂ ಕರೆಯುವುದಕ್ಕೆ 'ಆನಯನಾತಿಚಾರ'ವೆಂದೂ, ತನ್ನ ಎಲ್ಲೆಯ ಬಾಹ್ಯಕ್ಷೇತ್ರದಲ್ಲಿರುವವರಿಗೆ ಆಕಾರದಿಂದ ಸಂಜ್ಞೆಮಾಡಿ ತಿಳಿಸುವುದಕ್ಕೆ 'ರೂಪಾಭಿವ್ಯಕ್ತಿಅತಿಚಾರ'ವೆಂದೂ, ತನ್ನ ಎಲ್ಲೆಯ ಬಾಹ್ಯಕ್ಷೇತ್ರಕ್ಕೆ ಕಲ್ಲು ಮೊದಲಾದ ಪುದ್ಗಲಖಂಡಗಳನ್ನು ಬಿಸಾಡಿ ತನ್ನಾಭಿಪ್ರಾಯವನ್ನು ಸೂಚಿಸುವುದಕ್ಕೆ ಪುದ್ಗಲಕ್ಷೇಪಾತಿಚಾರ'ವೆಂದೂ ಹೆಸರು. ಇವೈದು ದೇಶಾವಕಾಶಿಕ ವ್ರತದ ಅತಿಚಾರಗಳಾಗಿವೆ.

## ಸಾಮಯಿಕಶಿಕ್ಷಾವ್ರತವರ್ಣನೆ.

**ಆಸಮಯಮುಕ್ತಿಮುಕ್ತಂ ಪಂಚಾಘಾನಾಮಶೇಷಭಾವೇನ ||**
**ಸರ್ವತ್ರ ಚ ಸಾಮಯಿಕಾಃ ಸಾಮಯಿಕಂ ನಾಮ ಶಂಸಂತಿ ||೯೭**

ಅನ್ವಯಾರ್ಥಃ— ಅಶೇಷಭಾವೇನ.—ಸಮಸ್ತವಾದ ಪರಿಣಾಮದಿಂದ ಸರ್ವತ್ರ—ಎಲ್ಲಾ ಕಡೆಯಲ್ಲಿ ಆಸಮಯಮುಕ್ತಿ—ತನ್ನ ನಿಯತಸಮಯದ ವರೆಗೆ ಪಂಚಾಘಾನಾಂ—ಪಂಚಪಾಪಗಳನ್ನು ಮುಕ್ತಂ—ಬಿಡುವುದಕ್ಕೆ ಸಾಮಯಿಕಾಃ—ಶಾಸ್ತ್ರಜ್ಞರು ಸಾಮಯಿಕಂ ನಾಮ—ಸಾಮಾಯಿಕವೆಂದು ಶಂಸಂತಿ—ಹೇಳುತ್ತಾರೆ.

ತಾತ್ಪರ್ಯಃ—ತನ್ನ ಎಲ್ಲೆಯ ಒಳಗೂ ಹೊರಗೂ ಮನವಚನಕಾಯ—ಕೃತಕಾರಿತಾನುಮೋದನಗಳಿಂದ ತನ್ನ ನಿಯತಸಮಯದ ವರೆಗೆ ಪಂಚಪಾಪಗಳನ್ನು ಮಾಡದೆ ಶುಭಧ್ಯಾನದಲ್ಲಿರುವುದಕ್ಕೆ 'ಸಾಮಯಿಕ'ವೆಂದು ಹೆಸರು.

## ಸಾಮಯಿಕದ ವಿಧಿ

**ಮೂರ್ಧರುಹಮುಷ್ಟಿವಾಸೋಬಂಧಂ ಪರ್ಯಂಕಬಂಧನಂ ಚಾಪಿ**
**ಸ್ಥಾನಮುಪವೇಶನಂ ವಾ ಸಮಯಂ ಜಾನಂತಿ ಸಮಯಜ್ಞಾಃ ||೯೮||**

**ಅನ್ವಯಾರ್ಥ:**—ಸಮಯಜ್ಞಾ:—ಶಾಸ್ತ್ರಜ್ಞರು ಮೂರ್ಧರುಹ ಮುಷ್ಟಿವಾಸೋಬಂಧಂ—ತಲೆ – ಕೂದಲನ್ನು ಬಂಧಿಸುವಿಕೆ, ಮುಷ್ಟಿಬಂಧನ, ವಸ್ತ್ರಬಂಧನ ಇವುಗಳನ್ನು ಚ—ಮತ್ತೆ ಪರ್ಯಂಕಬಂಧನಂ—ಪಲ್ಯಂಕಾ ಸನವನ್ನು ಅಪಿ—ಮತ್ತೆ ಸ್ಥಾನಂ—ಕಾಯೋತ್ಸರ್ಗವನ್ನು ವಾ—ಅಥವಾ ಉಪವೇಶನಂ—ಕೂತುಕೊಳ್ಳುವಿಕೆಯನ್ನು ಸಮಯಂ—ಸಮಯವೆಂದು ಜಾನಂತಿ–ತಿಳಿಯುತ್ತಾರೆ.

ತಾತ್ಪರ್ಯ:—ಸಾಮಯಿಕವನ್ನು ಮಾಡಲು ಸನ್ನದ್ಧನಾದ ಶ್ರಾವಕನು ಮೊದಲು ತನ್ನ ತಲೆಕೂದಲನ್ನೂ ಹಸ್ತ ಮತ್ತು ವಸ್ತ್ರಗಳನ್ನೂ ಕಟ್ಟಿಕೊಂಡು ಇದನ್ನು ಪುನಃ ನಾನು ಬಿಚ್ಚುವ ವರೆಗೆ ಸಮತಾಭಾವದಿಂದ ಸಾಮಯಿಕವನ್ನು ಮಾಡುತ್ತೇನೆಂದು ಪ್ರತಿಜ್ಞೆಯನ್ನು ಮಾಡಬೇಕು. ಎಷ್ಟರ ವರೆಗೆ ಸಮತಾಭಾವವಿರುತ್ತದೋ ಅದುವರೆಗೆ ಸಾಮುಯಿಕವನ್ನು ಮಾಡಬಹುದು. ಯದ್ಯಪಿ ಮನೋಚಾಂಚಲ್ಯವುಂಟಾದರೆ ಆ ವ್ರತವನ್ನು ಬಿಡಲೂ ಬಹುದು. ಹಾಗೆಯೇ ಆ—ಸಮತಾಭಾವವು ಬಹುಸಮಯದ ವರೆಗೆ ಚಂಚಲವಾಗದಿದ್ದರೆ ವಸ್ತ್ರಬಂಧನ ಮೊದಲಾದುವುಗಳ ಬಿಚ್ಚುವಿಕೆಯು ನಮ್ಮಾಧೀನದಲ್ಲಿರುವುದರಿಂದ ಬಹುಕಾಲದ ವರೆಗೆ ಸಾಮಯಿಕವನ್ನು ಮಾಡಲೂ ಬಹುದು. ಆದುದರಿಂದ ಗಣಧರರು ಶಿರೋಬಂಧನ, ಹಸ್ತಬಂಧನ, ವಸ್ತ್ರಬಂಧನ, ಪಲ್ಯಂಕಾಸನ, ಕಾಯೋತ್ಸರ್ಗ ಮೊದಲಾದುವುಗಳಿಗೆ ಸಾಮಯಿಕದ ಸಮಯವೆಂದು ಹೇಳಿರುತ್ತಾರೆ.

**ಸಾಮಯಿಕಕ್ಕೆ ಯೋಗ್ಯಸ್ಥಾನನಿರ್ದೇಶ.**

**ಏಕಾಂತೇ ಸಾಮಯಿಕಂ ನಿರ್ವ್ಯಾಕ್ಷೇಪೇ ವನೇಷು ವಾಸ್ತುಷು ಚ**
**ಚೈತ್ಯಾಲಯೇಷು ವಾಪಿ ಚ ಪರಿಚೇತವ್ಯಂ ಪ್ರಸನ್ನಧಿಯಾ ॥೯೯॥**

**ಅನ್ವಯಾರ್ಥ:**—ನಿರ್ವ್ಯಾಕ್ಷೇಪೇ–ಉಪದ್ರವವಿಲ್ಲದಿರುವ ಏಕಾಂತೇ–ಯಾರೂ ಇಲ್ಲದಿರುವಲ್ಲಿ ಚ—ಮತ್ತೆ ವನೇಷು—ವನಗಳಲ್ಲಿ ವಾ—ಅಥವಾ ವಾಸ್ತುಷು–ಮನೆಗಳಲ್ಲಿ ಅಪಿಚ–ಮತ್ತು ಚೈತ್ಯಾಲಯೇಷು—ಜಿನಮಂದಿರಗಳಲ್ಲಿ ಪ್ರಸನ್ನಧಿಯಾ—ಶಾಂತಚಿತ್ತದಿಂದ ಸಾಮಯಿಕಂ—ಸಾಮಯಿಕವನ್ನು ಪರಿಚೇತವ್ಯಂ–ಮಾಡತಕ್ಕದ್ದು.

**ತಾತ್ಪರ್ಯ**:—ಸ್ತ್ರೀಯರು ನಪುಂಸಕರು ಪಶುಗಳು ಬಾಲಕರು ಮೊದಲಾದವರು ಇಲ್ಲದಿರುವ ಸ್ಥಾನಕ್ಕೆ ಏಕಾಂತಸ್ಥಾನವೆಂದು ಹೆಸರು. ಅಂತಹ ಯಾವ ವಿಧದ ಉಪದ್ರವಗಳಿಲ್ಲದಿರುವ ವನ ಮನೆ ದೇವಸ್ಥಾನ ಮೊದಲಾದ ಸ್ಥಾನಗಳಲ್ಲಿ ಸಾಮಾಯಿಕವನ್ನು ಶಾಂತಚಿತ್ತದಿಂದ ಮಾಡ ಬೇಕೆಂದಭಿಪ್ರಾಯವು.

**ವ್ಯಾಪಾರವೈಮನಸ್ಯಾದ್ವಿನಿವೃತ್ಯಾಮಂತರಾತ್ಮವಿನಿವೃತ್ಯಾ ||**
**ಸಾಮಯಿಕಂ ಬಧ್ನೀಯಾದುಪವಾಸೇ ಚೈಕಭುಕ್ತೇ ವಾ ||೧೦೦||**

**ಅನ್ವಯಾರ್ಥ**:— ವ್ಯಾಪಾರವೈಮನಸ್ಯಾತ್—ಕಾಯಚೇಷ್ಟೆ ಮತ್ತು ಮನೋವಿಕಾರ ಇವುಗಳ ದೆಸೆಯಿಂದ ವಿನಿವೃತ್ಯಾಂ—'ಸತ್ಯಾಂ'—ನಿವೃತ್ತಿ ಯನ್ನು ಹೊಂದುತ್ತಿರಲು ಅಂತರಾತ್ಮವಿನಿವೃತ್ಯಾ—ಮನಸ್ಸಿನ ವಿಕಲ್ಪಗಳನ್ನು ಸಂಪೂರ್ಣವಾಗಿ ಬಿಡುವುದರಿಂದ ಉಪವಾಸೇ—ಉಪವಾಸ ದಿವಸದಲ್ಲಿ ಚ—ಮತ್ತೆ ಏಕಭುಕ್ತೇ ವಾ—ಒಮ್ಮೆ ಭೋಜನದ ದಿನದಲ್ಲಿ ಸಾಮಯಿಕಂ— ಸಾಮಾಯಿಕವನ್ನು ಬಧ್ನೀಯಾತ್-ಮಾಡತಕ್ಕದು.

**ತಾತ್ಪರ್ಯ**:—ಸಂಸಾರಸಂಬಂಧವಾದ ಮನವಚನಕಾಯಿಕಕ್ರಿಯೆ ಗಳನ್ನೆಲ್ಲಾ ಬಿಟ್ಟು ಉಪವಾಸ ಅಥವಾ ಏಕಭುಕ್ತವನ್ನು ಮಾಡಿದ ದಿವಸ ಗಳಲ್ಲಿ ಶ್ರಾವಕನು ಸಾಮಾಯಿಕವನ್ನು ಮಾಡಬೇಕು. ಅಥವಾ ಪ್ರತಿನಿತ್ಯವೂ ಯಾ ಸಮಯವಿದ್ದರೆ ತ್ರಿಕಾಲದಲ್ಲಿಯೂ ಸಮತಾಭಾವದಿಂದ ಸಾಮಾಯಿ ಕವನ್ನು ಮಾಡಬೇಕು. ಸಾಮಾಯಿಕವನ್ನು ಮಾಡತಕ್ಕವನು ಏಕಾಂತ ಸ್ಥಾನದಲ್ಲಿ ಪರ್ಯಂಕಾಸನ ಅಥವಾ ಕಾಯೋತ್ಸರ್ಗದಿಂದ ಕಾಷ್ಟ—ಪಾಷಾ ಣದಂತೆ ನಿಶ್ಚಲನಾಗಿ ಯಾರೊಡನೆಯೂ ವಾರ್ತಾಲಾಪಗಳನ್ನು ಮಾಡದೆ ಅತ್ತಿತ್ತ ನೋಡದೆ ಪಂಚೇಂದ್ರಿಯಗಳ ವಿಷಯಾಭಿಲಾಷೆಯನ್ನು ತಡೆದು ಚೇತನಾಚೇತನಪದಾರ್ಥಗಳಲ್ಲಿ ರಾಗದ್ವೇಷಗಳನ್ನಿಡದೆ ಸಮತಾಭಾವವನ್ನು ಧರಿಸಿದವನಾಗಿ ನಾಸಾಗ್ರದೃಷ್ಟಿಯಿಂದ ಪರಮಾತ್ಮಸ್ವರೂಪಚಿಂತನೆ, ಪಂಚಪರಮೇಷ್ಠಿಗುಣಸ್ಮರಣೆ, ದ್ವಾದಶಾನುಪ್ರೇಕ್ಷೆ, ಷೋಡಶಭಾವನೆ ದಶ ಭಕ್ತಿ, ಚತುರ್ವಿಂಶತಿಸ್ತವನ ಮೊದಲಾದುವುಗಳ ಶುಭಚಿಂತನೆಯನ್ನು ಮಾಡು ವುದಕ್ಕೆ ಸಾಮಾಯಿಕವೆಂದು ಮುಖ್ಯಾಭಿಪ್ರಾಯವು.

**ಪ್ರತಿದಿನ ಸಾಮಾಯಿಕ ಮಾಡಬೇಕೆಂದು ಹೇಳುತ್ತಾರೆ.**

**ಸಾಮಾಯಿಕಂ ಪ್ರತಿದಿವಸಂ ಯಥಾವದಪ್ಯನಲಸೇನ ಚೇತವ್ಯಂ ||**
**ವ್ರತಪಂಚಕಪರಿಪೂರಣಕಾರಣಮವಧಾನಯುಕ್ತೇನ ||೧೦೧||**

**ಅನ್ವಯಾರ್ಥ:**—ವ್ರತಪಂಚಕಪರಿಪೂರಣಕಾರಣಂ—ಪಂಚಾಣು ವ್ರತಗಳ ಪೂರ್ತಿಗೆ ಕಾರಣವಾದ ಸಾಮಯಿಕಂ—ಸಾಮಾಯಿಕವ್ರತವನ್ನು ಪ್ರತಿದಿವಸಂ—ಪ್ರತಿನಿತ್ಯವೂ ಅನಲಸೇನ—ಆಲಸ್ಯವಿಲ್ಲದಿರುವ ಅಪಿ-ಮತ್ತೆ ಅವಧಾನಯುಕ್ತೇನ—ಏಕಾಗ್ರಚಿತ್ತನಾದವನಿಂದ ಯಥಾವತ್– ಶಾಸ್ತ್ರೋ ಕ್ತವಿಧಿಯಂತೆ ಚೇತವ್ಯಂ–ಮಾಡತಕ್ಕದ್ದು.

**ತಾತ್ಪರ್ಯ:**—ಸಾಮಾಯಿಕವನ್ನು ಮಾಡುವ ಸಮಯದಲ್ಲಿ ಹಿಂಸಾದಿ ಪಂಚಪಾಪಗಳನ್ನು ಸಂಪೂರ್ಣವಾಗಿ ತ್ಯಾಗಮಾಡಿರುವುದರಿಂದ ಈ ಸಾಮಾಯಿಕವು ಪಂಚಮಹಾವ್ರತಗಳ ಪ್ರಾಪ್ತಿಗೆ ಕಾರಣವಾಗಿದೆ. ಆದುದರಿಂದ ಆಲಸ್ಯರಹಿತನೂ ಏಕಾಗ್ರಚಿತ್ತನೂ ಆದ ಶ್ರಾವಕನು ಪ್ರತಿ ದಿವಸವೂ ಶಾಸ್ತ್ರೋಕ್ತವಿಧಿಯಂತೆ ಸಾಮಾಯಿಕವನ್ನು ಮಾಡಬೇಕೆಂದ ಭಿಪ್ರಾಯವು.

**ಸಾಮಯಿಕಶಿಕ್ಷಾವ್ರತದ ಸಾರ್ಥಕತೆ**

**ಸಾಮಯಿಕೇ ಸಾರಂಭಾಃ ಪರಿಗ್ರಹಾ ನೈವ ಸಂತಿ ಸರ್ವೇಽಪಿ ||**
**ಚೇಲೋಪಸೃಷ್ಟಮುನಿರಿವ ಗೃಹೀ ತದಾ ಯಾತಿ ಯತಿಭಾವಂ**

**ಅನ್ವಯಾರ್ಥಃ**—ಸಾಮಯಿಕೇ—ಸಾಮಾಯಿಕ ಸಮಯದಲ್ಲಿ ಸಾರಂಭಾಃ—ಆರಂಭದೊಡನೆ. ಕೂಡಿರುವ ಸರ್ವೇ ಅಪಿ–ಸಮಸ್ತವಿಧವಾದ ಪರಿಗ್ರಹಾಃ—ಪರಿಗ್ರಹಗಳು ನೈವ ಸಂತಿ-ಇರುವುದಿಲ್ಲ 'ಅತಏವ'-ಆದ್ದರಿಂದ ತದಾ-ಆ ಸಮಯದಲ್ಲಿ ಗೃಹೀ-ಗೃಹಸ್ಥನು ಚೇಲೋಪಸೃಷ್ಟಮುನಿರಿವ- ವಸ್ತ್ರದಿಂದ ಕೂಡಿರುವ ಮುನಿಯಂತೆ ಯತಿಭಾವಂ-ಮುನಿತ್ವವನ್ನು ಯಾತಿ ಹೊಂದುತ್ತಾನೆ.

**ತಾತ್ಪರ್ಯ:**— ಸಾಮಾಯಿಕವನ್ನು ಮಾಡುವ ಸಮಯದಲ್ಲಿ ಕೃಷ್ಯಾದ್ಯಾರಂಭಗಳೂ ಸಮಸ್ತವಾದ ಬಾಹ್ಯಾಭ್ಯಂತರಪರಿಗ್ರಹಗಳೂ ಇಲ್ಲ ದಿರುವುದರಿಂದ ಆಗ ಶ್ರಾವಕನು ಉಪಸರ್ಗದಿಂದ ವೇಷ್ಟಿತವಾದ ವಸ್ತ್ರ

ದೊಡನೆ ಕೂಡಿರುವ ಮುನಿಯಂತೆ ಉಪಚಾರದಿಂದ ಯತಿಭಾವವನ್ನು ಹೊಂದುತ್ತಾನೆಂದಭಿಪ್ರಾಯವು.

**ಸಾಮಯಿಕಪರೀಷಹಸಹನ.**

**ಶೀತೋಷ್ಣದಂಶಮಶಕಪರೀಷಹಮುಪಸರ್ಗಮಪಿ ಚ ಮೌನಧರಾಃ**
**ಸಾಮಯಿಕಂ ಪ್ರತಿಪನ್ನಾ ಅಧಿಕುರ್ವೀರನ್ನಚಲಯೋಗಾಃ ||೧೦೩||**

**ಅನ್ವಯಾರ್ಥಃ**—ಸಾಮಯಿಕಂ-ಸಾಮಾಯಿಕವನ್ನು ಪ್ರತಿಪನ್ನಾಃ—ಮಾಡತಕ್ಕವರು ಮೌನಧರಾಃ—ಮೌನಧಾರಿಗಳೂ ಅಚಲಯೋಗಾಃ 'ಸಂತಃ' ಸ್ಥಿರವಾದ ಮನವಚನಕಾಯವುಳ್ಳವರೂ ಆಗಿ ಶೀತೋಷ್ಣ ದಂಶಮಶಕಪರೀಷಹಂ—ಶೀತ ಉಷ್ಣ ನೊಣ ಸೊಳ್ಳೆ ಇವುಗಳ ಬಾಧೆಯನ್ನು ಚ—ಮತ್ತೆ ಉಪಸರ್ಗಂ ಅಪಿ—ಉಪಸರ್ಗವನ್ನು ಕೂಡ ಅಧಿಕುರ್ವೀರನ್—ಸಹಿಸತಕ್ಕದ್ದು.

**ತಾತ್ಪರ್ಯ:**—ಸಾಮಯಿಕವನ್ನು ಮಾಡತಕ್ಕವರು ತನ್ನ ನಿಯಮವು ಪೂರ್ತಿಯಾಗುವ ವರೆಗೆ ಮೌನಧಾರಿಗಳಾಗಿ ಮನವಚನಕಾಯಗಳನ್ನು ಚಂಚಲಗೊಳಿಸದೆ ಶೀತ ಉಷ್ಣ ಸೊಳ್ಳೆ ನೊಣ ಇವು ಮೊದಲಾದುವುಗಳ ಉಪದ್ರವವನ್ನೂ ಇತರರಿಂದುಂಟಾದ ಉಪಸರ್ಗಗಳನ್ನೂ ಸಮತಾಭಾವದಿಂದ ಸಹನಮಾಡಿಕೊಳ್ಳಬೇಕೆಂದಭಿಪ್ರಾಯವು.

**ಸಾಮಯಿಕ ಸಮಯ ಏನು ಚಿಂತಿಸಬೇಕು ?**

**ಅಶರಣಮಶುಭಮನಿತ್ಯಂ ದುಃಖಮನಾತ್ಮಾನಮಾವಸಾಮಿ ಭವಂ**
**ಮೋಕ್ಷಸ್ತದ್ವಿಪರೀತಾತ್ಮೇತಿ ಧ್ಯಾಯಂತು ಸಾಮಯಿಕೇ ||೧೦೪||**

**ಅನ್ವಯಾರ್ಥಃ**—'ಅಹಂ'—ನಾನು ಅಶರಣಂ—ರಕ್ಷಕರಿಲ್ಲದುದೂ ಅಶುಭಂ—ಶುಭವಲ್ಲದುದೂ ಅನಿತ್ಯಂ—ನಿತ್ಯವಲ್ಲದುದೂ ದುಃಖಂ—ದುಃಖಮಯವೂ ಅನಾತ್ಮಾನಂ—ಪರಸ್ವರೂಪವೂ ಆದ ಭವಂ—ಸಂಸಾರದಲ್ಲಿ ಆವಸಾಮಿ —ನಿವಾಸಿಸುತ್ತೇನೆ. ಮೋಕ್ಷಃ—ಮೋಕ್ಷವು ತದ್ವಿಪರೀತಾತ್ಮಾ-ಇದಕ್ಕೆ ವಿಪರೀತವಾದುದು, ಇತಿ—ಹೀಗೆಂದು ಸಾಮಯಿಕೇ—ಸಾಮಾಯಿಕದಲ್ಲಿ ಧ್ಯಾಯಂತು—ಚಿಂತಿಸತಕ್ಕದ್ದು.

**ತಾತ್ಪರ್ಯ:**—ಈ ಚತುರ್ಗತಿಭ್ರಮಣರೂಪವಾದ ಸಂಸಾರದಲ್ಲಿ

ಜೀವನು ಅನಾದಿಕಾಲದಿಂದಲೂ ಅನಂತಾನಂತವಾದ ಜನ್ಮಮರಣಗಳನ್ನು ಹೊಂದಿ ಹಲವು ವಿಧದ ಕಷ್ಟಗಳನ್ನು ಅನುಭವಿಸುತ್ತಿದ್ದರೂ ಯಾರೂ ರಕ್ಷಕರಿಲ್ಲ. ಆದಕಾರಣ ಸಂಸಾರವು—ಅಶರಣವಾದುದೂ' ಅಶುಭ-ಪಾಪ ರೂಪವಾದ ಕರ್ಮಬಂಧನ, ದುಃಖ, ದೇಹ ಮೊದಲಾದುವುಗಳುಂಟಾಗು ವುದರಿಂದ ಅಶುಭವಾದುದೂ, ರೂಪಯೌವನ ಧನಧಾನ್ಯ—ರಾಜ್ಯಭೋಗ ಪತ್ನಿ ಪುತ್ರ ಮಿತ್ರಾದಿ ಸಕಲೈಶ್ವರ್ಯಗಳೂ ಮಿಂಚಿನಂತೆ ಅಸ್ಥಿರವಾದುವೂ ಸದಾ ದುಃಖಮಯವೂ ಆತ್ಮನ ನಿಜಸ್ವರೂಪದ ಪರಿಜ್ಞಾನವಿಲ್ಲದುದೂ ಆದ ಸಂಸಾರದಲ್ಲಿ ನಾನು ವಾಸಿಸಿಕೊಂಡಿದ್ದೇನೆ. ಪರಂತು, ಮೋಕ್ಷವು ಸಂಸಾರದು:ಖದಿಂದ ಅತ್ಯಂತಾಭಾವದಿಂದ ಶರಣಭೂತವೂ ಕಲ್ಯಾಣಮಯ ವೂ ಅವಿನಾಶಿಯೂ ಅನಂತಸುಖವುಳ್ಳುದೂ ಆತ್ಮಸ್ವರೂಪದ ಸಂಪೂರ್ಣ ಪರಿಜ್ಞಾನವುಳ್ಳುದೂ ಆಗಿದೆ, ಎಂದು ಸಾಮಾಯಿಕ ಸಮಯದಲ್ಲಿ ಧ್ಯಾನಿ ಸಬೇಕೆಂದಭಿಪ್ರಾಯವು.

## ಸಾಮಯಿಕಾತಿಚಾರವರ್ಣನೆ.

**ವಾಕ್ಕಾಯಮಾನಸಾನಾಂ ದುಃಪ್ರಣಿಧಾನಾನ್ಯನಾದರಾಸ್ಮರಣೇ ||**
**ಸಾಮಯಿಕಸ್ಯಾತಿಗಮಾ ವ್ಯಜ್ಯಂತೇ ಪಂಚ-ಭಾವೇನ ||೧೦೫||**

**ಅನ್ವಯಾರ್ಥಃ**—ವಾಕ್ಕಾಯಮಾನಸಾನಾಂ—ವಚನಕಾಯಮನಸ್ಸು ಇವುಗಳ ದುಃಪ್ರಣಿಧಾನಾನಿ—ಚಂಚಲತ್ವವೂ ಅನಾದರಾಸ್ಮರಣೇ—ತಿರ ಸ್ಕಾರ ಮತ್ತು ಮರೆಯುವಿಕೆಯು 'ಏತೇ' ಪಂಚ—ಇವೈದು ಭಾವೇನ— ಪರಮಾರ್ಥದಿಂದ ಸಾಮಯಿಕಸ್ಯ—ಸಾಮಾಯಿಕವ್ರತದ ಅತಿಗಮಾಃ— ಅತಿಚಾರಗಳೆಂದು ವ್ಯಜ್ಯಂತೇ—ಪ್ರಕಟಸಲ್ಪಡುತ್ತವೆ.

**ತಾತ್ಪರ್ಯ**—ಸಾಮಾಯಿಕ ಮಾಡುವ ಸಮಯದಲ್ಲಿ ಮಂತ್ರ ಗಳನ್ನು ಅಶುದ್ಧವಾಗಿ ಉಚ್ಚರಿಸುವಿಕೆ, ಸಂಸಾರಸಂಬಂಧವಾದ ವಚನಗಳ ನ್ನಾಡುವಿಕೆಗೆ 'ವಾಕ್‌ದು:ಪ್ರಣಿಧಾನಾತಿಚಾರ' ವೆಂದೂ, ಕಾಯಚೇಷ್ಟೆ— ಮೊದಲಾದುವುಗಳನ್ನು ಮಾಡುವುದಕ್ಕೆ 'ಕಾಯದುಃಪ್ರಣಿಧಾನಾತಿಚಾರ' ವೆಂದೂ, ಚಿತ್ತದಲ್ಲಿ ಆರ್ತರೌದ್ರಧ್ಯಾನಗಳನ್ನು ಮಾಡುವುದಕ್ಕೆ 'ಮನೋ

ದುಃಪ್ರಣೀಧಾನಾತಿಚಾರ'ವೆಂದೂ, ಸಾಮಾಯಿಕದಲ್ಲಿ ಉತ್ಸಾಹವಿಲ್ಲದಿರುವುದಕ್ಕೆ 'ಅನಾದರಾತಿಚಾರ'ವೆಂದೂ, ಸಾಮಾಯಿಕದ ಕಾಲ, ಆವಶ್ಯಕ ಕ್ರಿಯೆ, ಕಾಯೋತ್ಸರ್ಗ ಮೊದಲಾದುವುಗಳನ್ನು ಮರೆತು ಬಿಡುವುದಕ್ಕೆ 'ವಿಸ್ಮರಣಾತಿಚಾರ'ವೆಂದೂ, ಹೆಸರು. ಇವೈದು ಸಾಮಾಯಿಕವ್ರತದ ಅತಿಚಾರಗಳು. ಇವುಗಳನ್ನು ಬಿಡಬೇಕೆಂದು ಭಾವವು.

## ಪ್ರೋಷಧೋಪವಾಸಶಿಕ್ಷಾವ್ರತವರ್ಣನೆ.

**ಪರ್ವಣ್ಯಷ್ಟಮ್ಯಾಂ ಚ ಜ್ಞಾತವ್ಯಂ ಪ್ರೋಷಧೋಪವಾಸಸ್ತು ||**
**ಚತುರಭ್ಯವಹಾರ್ಯಾಣಾಂ ಪ್ರತ್ಯಾಖ್ಯಾನಂ ಸದೇಚ್ಛಾಭಿಃ ||೧೦೬||**

**ಅನ್ವಯಾರ್ಥ:**—ತು—ಮತ್ತೆ ಪರ್ವಣಿ—ಚತುರ್ದಶಿಯಲ್ಲಿ ಚ—ಮತ್ತು ಅಷ್ಟಮ್ಯಾಂ—ಅಷ್ಟಮಿಯಲ್ಲಿ ಸದಾ—ಯಾವಾಗಲೂ ಇಚ್ಛಾಭಿಃ—ವ್ರತವನ್ನು ಮಾಡಬೇಕೆಂಬ ಇಚ್ಛೆಗಳಿಂದ ಚತುರಭ್ಯವಹಾರ್ಯಾಣಾಂ—ಚತುರ್ವಿಧವಾದ ಆಹಾರಗಳ ಪ್ರತ್ಯಾಖ್ಯಾನಂ—ಬಿಡುವಿಕೆಯು ಪ್ರೋಷಧೋಪವಾಸ:—ಪ್ರೋಷಧೋಪವಾಸವ್ರತವೆಂದು ಜ್ಞಾತವ್ಯಃ—ತಿಳಿಯತಕ್ಕುದು.

ತಾತ್ಪರ್ಯ:—ಪ್ರತಿಯೊಂದು ಮಾಸದ ಎರಡು ಅಷ್ಟಮಿ ಮತ್ತು ಚತುರ್ದಶಿಯ ದಿನಗಳಲ್ಲಿ ಮನಃಪೂರ್ವಕವಾಗಿ ವ್ರತವಿಧಾನದ ಇಚ್ಛೆಯಿಂದ ಅನ್ನ, ಪಾನ, ಖಾದ್ಯ ಲೇಹ್ಯಗಳೆಂಬ ಚತುರ್ವಿಧವಾದ ಆಹಾರಗಳನ್ನ ಬಿಡುವುದಕ್ಕೆ ಇದೊಂದು ವಿಧವಾದ ಸಾಮಾನ್ಯಪ್ರೋಷಧೋಪವಾಸವೆಂದೂ, ಪ್ರತಿಮಾಸದ ಶುಕ್ಲಕೃಷ್ಣಪಕ್ಷಗಳ ಸಪ್ತಮೀ ಮತ್ತು ತ್ರಯೋದಶಿಯ ದಿನಗಳಲ್ಲಿ ಮಧ್ಯಾಹ್ನ ಏಕಭುಕ್ತವನ್ನು ಮಾಡಿ ಸಮಸ್ತವಾದ ಆರಂಭಾದಿಕಾರ್ಯಗಳನ್ನು ತೊರೆದು, ದೇಹ ಮೊದಲಾದ ಎಲ್ಲಾ ಪರಿಗ್ರಹಗಳ ಮಮತೆಯನ್ನು ಬಿಟ್ಟು ಏಕಾಂತಸ್ಥಾನದಲ್ಲಿ ಧರ್ಮಧ್ಯಾನ ಸ್ವಾಧ್ಯಾಯಗಳನ್ನು ಮಾಡುತ್ತಾ ಅಂದಿನ ದಿವಸವನ್ನು ಕಳೆದು, ಮರುದಿವಸ ಅಂದರೆ ಅಷ್ಟಮೀ ಮತ್ತು ಚತುರ್ದಶಿ ದಿನಗಳಲ್ಲಿ ನಿತ್ಯವಿಧಿಗಳನ್ನು ತೀರಿಸಿ ಅಂದು ಉಪವಾಸಪೂರ್ವಕವಾಗಿ ದೇವಪೂಜಾ, ಶಾಸ್ತ್ರಸ್ವಾಧ್ಯಾಯ ಧರ್ಮಧ್ಯಾನ ಮೊದಲಾದುವುಗಳಿಂದ ಅಂದಿನ ದಿನಗಳನ್ನೆಲ್ಲಾ ಕಳೆದು, ಪಾರಣೆಯ ನವಮಿ ಮತ್ತು ಪೂರ್ಣಿಮೆಯ ದಿನಗಳಲ್ಲಿ ನಿತ್ಯವಿಧಿಗಳನ್ನು

ತೀರಿಸಿ ಉತ್ತಮ ಮಧ್ಯಮಜಘನ್ಯಪಾತ್ರಗಳಿಗೆ ಆಹಾರದಾನವನ್ನು ಮಾಡಿ ತಾನು ಭೋಜನವನ್ನು ಮಾಡಬೇಕು. ಈ ಪ್ರಕಾರವಾಗಿ ಹದಿನಾರು ಪ್ರಹರ [ಜಾವ] ಅಥವಾ ೧೨೦ ಗಳಿಗೆಯ ಉಪವಾಸ ವ್ರತಕ್ಕೆ ಉತ್ಕೃಷ್ಟ ಪ್ರೋಷಧೋಪವಾಸವೆಂದೂ ಹೆಸರು. ಇವುಗಳಲ್ಲಿ ಎರಡನೆಯ ನೆಲೆಯ ವ್ರತಿಕಶ್ರಾವಕನು ಯಥಾಶಕ್ತಿಯಾಗಿ ಸಾಮಾನ್ಯ ಪ್ರೋಷಧೋಪವಾಸವನ್ನೂ ನಾಲ್ಕನೆಯ ಪ್ರೋಷಧಪ್ರತಿಮಾಧಾರಿಯು ಉತ್ಕೃಷ್ಟಪ್ರೋಷಧೋಪವಾಸವನ್ನೂ ಅವಶ್ಯವಾಗಿ ಆಚರಿಸಬೇಕೆಂದು ಭಾವವು, ಚತುರ್ವಿಧಾಹಾರಗಳನ್ನು ಬಿಡುವುದಕ್ಕೆ 'ಉಪವಾಸ' ವೆಂದೂ, ಒಮ್ಮೆ ನೀರು ಅಥವಾ ಎಳನೀರನ್ನು ಪಾನಮಾಡಿರುವುದಕ್ಕೆ 'ಅನುಪವಾಸ' ಯಾ 'ಈಷದುಪವಾಸ' ವೆಂದೂ, ದಿನದಲ್ಲೊಮ್ಮೆ ಭೋಜನ ಮಾಡಿರುವುದಕ್ಕೆ 'ಏಕಭುಕ್ತಿ' ಯಾ 'ಏಕಠಾಣ'ವೆಂದೂ, ಹೆಸರು. ಅಷ್ಟಮಿ—ಚತುರ್ದಶಿ ತಿಥಿಗಳಿಗೆ ಪರ್ವತಿಥಿಗಳೆಂದು ಹೆಸರು. ಒಂದು ಮಾಸದಲ್ಲಿ ನಾಲ್ಕು ಪರ್ವತಿಥಿಗಳೆಂದೂ, ಕೆಲವರು ಶುಕ್ಲಪಕ್ಷದ ಪಂಚಮಿಯನ್ನು ಸೇರಿಸಿ ಪಂಚಪರ್ವತಿಥಿಗಳೆಂದೂ ಹೇಳುತ್ತಾರೆ. ಅಶನ ಮೊದಲಾದ ಭೋಜನ ದ್ರವ್ಯಗಳಿಗೆ 'ಅನ್ನ'ವೆಂದೂ, ನೀರು ಹಾಲು ಮೊದಲಾದ ಪೇಯದ್ರವ್ಯಗಳಿಗೆ 'ಪಾನ'ವೆಂದೂ ಜಗಿದು ತಿನ್ನಬೇಕಾಗುವ ಉತ್ತುತ್ತೆ, ದ್ರಾಕ್ಷೆ ಮೊದಲಾದ ವಸ್ತುಗಳಿಗೆ 'ಖಾದ್ಯ ವೆಂದೂ, ಅವಲೇಹನ[ನೆಕ್ಕು] ಪೂರ್ವಕವಾಗಿ ತಿನ್ನುವ ಔಷಧಿ ಮೊದಲಾದುವುಗಳಿಗೆ 'ಲೆಹ್ಯ'ವೆಂದೂ ಹೆಸರು. ಪೂರ್ವೋಕ್ತ ಪ್ರಕಾರವಾಗಿ ಚತುರ್ವಿಧಾಹಾರತ್ಯಾಗ, [ಉಪವಾಸ) ಅನುಪವಾಸ, ಏಕಭುಕ್ತಗಳೆಂಬೀ ಉತ್ತಮಮಧ್ಯಮಜಘನ್ಯರೂಪವಾದ ವ್ರತವನ್ನು ಶ್ರಾವಕನು ಯಥಾಶಕ್ತಿಯಾಗಿ ಆಚರಿಸಬೇಕೆಂದಭಿಪ್ರಾಯ.

### ಪ್ರೋಷಧೋಪವಾಸದಿನ ತ್ಯಾಜ್ಯವಿಷಯಗಳು

**ಪಂಚಾನಾಂ ಪಾಪಾನಾಮಲಂಕ್ರಿಯಾರಂಭಗಂಧಪುಷ್ಪಾಣಾಂ ||**
**ಸ್ನಾನಾಂಜನನಸ್ಯಾನಾಮುಪವಾಸೇ ಪರಿಹೃತಿಂ ಕುರ್ಯಾತ್ ||**

**ಅನ್ವಯಾರ್ಥಃ**—ಉಪವಾಸೇ—ಉಪವಾಸದಿನದಲ್ಲಿ ಪಂಚಾನಾಂ—

ಐದಾದ ಪಾಪಾನಾಂ—ಪಾಪಗಳ ಅಲಂಕ್ರಿಯಾರಂಭಗಂಧಪುಷ್ಪಾಣಾಂ- ಶೃಂಗಾರ, ಆರಂಭ, ಪರಿಮಳದ್ರವ್ಯ, ಪುಷ್ಪ ಇವುಗಳ, ಸ್ನಾನಾಂಜನ ನಶ್ಯಾನಾಂ—ಅಭ್ಯಂಗಸ್ನಾನ, ಅಂಜನ, ನಶ್ಯ ಇವುಗಳ ಪರಿಹೃತಿಂ—ತ್ಯಾಗ ವನ್ನು ಕುರ್ಯ್ಯಾತ್-ಮಾಡಬೇಕು.

**ತಾತ್ಪರ್ಯ**:—ಉಪವಾಸದಿವಸದಲ್ಲಿ ಶ್ರಾವಕನು ಹಿಂಸಾದಿ ಪಂಚ ಪಾಪಗಳನ್ನೂ ಆಭರಣ ಮೊದಲಾದುವುಗಳಿಂದ ತನ್ನ ದೇಹಾಲಂಕಾರವನ್ನೂ ಕೃಷ್ಯಾದ್ಯಾರಂಭ, ಸುಗಂಧಲೇಪನ, ಪುಷ್ಪಧಾರಣ, ಅಭ್ಯಂಗಸ್ನಾನ, ನೇತ್ರಾಂಜನ, ನಶ್ಯ, ಬೀಡಿ ಮೊದಲಾದ ಸೇವನೆಗಳನ್ನೂ ತ್ಯಾಗ ಮಾಡಿ ಪಂಚೇಂದ್ರಿಯದಮನ, ಧ್ಯಾನಸಾಧನ, ಕಾಮನಿರೋಧನ, ಪರೀಷಹಸಹನ ಮೊದಲಾದ ಶುಭಭಾವನೆಗಳಿಂದ ಉಪವಾಸವ್ರತವನ್ನು ಮಾಡಬೇಕಲ್ಲದೆ, ತನಗೆ ಕೀರ್ತಿ ಸಂಪತ್ತಿ ಮೊದಲಾದ ಐಹಿಕಫಲಾಭಿಲಾಷೆಯಿಂದ ಮಾಡ ಬಾರದೆಂದು ಮುಖ್ಯಾಭಿಪ್ರಾಯವು.

## ಉಪವಾಸದಿನ ಕರ್ತವ್ಯವಿಷಯಗಳು

**ಧರ್ಮಾಮೃತಂ ಸತೃಷ್ಣಃಶ್ರವಣಾಭ್ಯಾಂ ಪಿಬತು ಪಾಯಯೇದ್ವಾ-**
**ನ್ಯಾನ್ ॥ ಜ್ಞಾನಧ್ಯಾನಪರೋ ವಾ ಭವತೂಪವಸನ್ನತಂದ್ರಾಲುಃ ॥**

**ಅನ್ವಯಾರ್ಥ**:—ಉಪವಸನ್—ಉಪವಾಸವ್ರತವನ್ನಾಚರಿಸುವ ಶ್ರಾವಕನು ಅತಂದ್ರಾಲುಃ—ಆಲಸ್ಯರಹಿತನಾಗಿ ಶ್ರವಣಾಭ್ಯಾಂ-ಕಿವಿಗಳಿಂದ ಸತೃಷ್ಣಃ 'ಸನ್'—ಬಹಳ ಉತ್ಕಂಠಿತನಾಗಿ ಧರ್ಮಾಮೃತಂ—ಧರ್ಮವೆಂ ಬಾಮೃತವನ್ನು ಪಿಬತು—ಪಾನಮಾಡಲಿ ವಾ—ಮತ್ತೆ ಅನ್ಯಾನ್-ಇತರ ರನ್ನು ಪಾಯಯೇತ್—ಪಾನಮಾಡಿಸಲಿ ವಾ—ಅಥವಾ-ಜ್ಞಾನಧ್ಯಾನಪರಃ 'ಸನ್'—ಜ್ಞಾನಧ್ಯಾನಪರನಾಗಿ ಭವತು—ಆಗಲಿ.

**ತಾತ್ಪರ್ಯ**:—ಉಪವಾಸವ್ರತದ ದಿವಸದಲ್ಲಿ ಶ್ರಾವಕನು ಆಲಸ್ಯ ವಿಲ್ಲದೆ ಉತ್ಸಾಹಪರನಾಗಿ ತಾನು ಧರ್ಮಶಾಸ್ತ್ರವನ್ನು ಶ್ರವಣ ಮಾಡುತ್ತ ಲೂ, ಇತರರಿಗೆ ಉಪದೇಶಿಸುತ್ತಲೂ ಜ್ಞಾನಾಭ್ಯಾಸ, ಧರ್ಮಧ್ಯಾನ ಇವು ಗಳನ್ನು ಮಾಡುತ್ತಲೂ ಶುಭಪರಿಣಾಮದಿಂದಿರಬೇಕೆಂದಭಿಪ್ರಾಯವು.

## ಪ್ರೋಷಧ ಮತ್ತು ಉಪವಾಸದ ಲಕ್ಷಣ.

**ಚತುರಾಹಾರವಿಸರ್ಜನಮುಪವಾಸಃ ಪ್ರೋಷಧಃ ಸಕೃದ್ಭುಕ್ತಿಃ ॥**
**ಪ್ರೊಷಧೋಪವಾಸೋ ಯದುಪೋಷ್ಯಾರಂಭಮಾಚರತಿ ॥**

**ಅನ್ವಯಾರ್ಥಃ**—ಚತುರಾಹಾರವಿಸರ್ಜನಂ—ಚತುರ್ವಿಧವಾದ ಆಹಾರಗಳನ್ನು ಬಿಡುವಿಕೆಯು ಉಪವಾಸಃ—ಉಪವಾಸವು ಸಕೃದ್ಭುಕ್ತಿಃ—ಒಮ್ಮೆ ಭೋಜನವನ್ನು ಮಾಡವಿಕೆಯು ಪ್ರೊಷಧಃ—ಪ್ರೋಷಧವು ಯತ್ ಯಾವದು ಉಪೋಷ್ಯ— ಉಪವಾಸವನ್ನು ಮಾಡಿ ಆರಂಭಂ-ಭೋಜನವನ್ನು ಆಚರತಿ—ಮಾಡುತ್ತಾನೆಯೋ ಸಃ—ಅದು ಪ್ರೋಷಧೋಪವಾಸಃ-ಪ್ರೋಷಧೋಪವಾಸವ್ರತವೆಂದು 'ಕಥ್ಯತೇ'—ಹೇಳಲ್ಪಡುತ್ತದೆ.

**ತಾತ್ಪರ್ಯ:**—ಅನ್ನಪಾನಖಾದ್ಯಲೇಹ್ಯಗಳೆಂಬ ಚತುರ್ವಿಧಾಹಾರಗಳನ್ನು ತ್ಯಾಗ ಮಾಡುವುದಕ್ಕೆ ಉಪವಾಸವೆಂದೂ, ದಿನದಲ್ಲಿ ಒಂದುಸಾರಿ ಭೋಜನವನ್ನು ಮಾಡುವುದಕ್ಕೆ ಪ್ರೋಷಧವೆಂದೂ, ಪಾರಣೆಯ ದಿನ ಒಮ್ಮೆ ಭೋಜನವನ್ನು ಮಾಡಿ ಮರುದಿವಸ ಉಪವಾಸವ್ರತವನ್ನಾಚರಿಸಿ, ಪಾರಣೆಯ ದಿನ ಏಕಭುಕ್ತವನ್ನು ಮಾಡುವುದಕ್ಕೆ ಪ್ರೋಷಧೋಪವಾಸವೆಂದೂ ಹೆಸರು.

## ಪ್ರೋಷಧೋಪವಾಸಾತಿಚಾರವರ್ಣನೆ.

**ಗ್ರಹಣವಿಸರ್ಗಾಸ್ತರಣಾನ್ಯದೃಷ್ಟಮೃಷ್ಟಾನ್ಯನಾದರಾಸ್ಮರಣೇ ॥**
**ಯತ್ಪ್ರೋಷಧೋಪವಾಸವ್ಯತಿಲಂಘನಪಂಚಕಂ ತದಿದಂ ॥೧೧೦॥**

**ಅನ್ವಯಾರ್ಥಃ**—ಯತ್—ಯಾವದು ಅದೃಷ್ಟಮೃಷ್ಟಾನಿ—ನೋಡಿ ಪರಿಶೋಧಿಸದಿರುವ ಗ್ರಹಣವಿಸರ್ಗಾಸ್ತರಣಾನಿ—ಗ್ರಹಣ—ಪೂಜಾಸಾಮಗ್ರಿಗಳನ್ನು ಗ್ರಹಣಮಾಡುವಿಕೆಯು ವಿಸರ್ಗ—ಮಲಮೂತ್ರಗಳನ್ನು ಬಿಡುವಿಕೆಯು ಆಸ್ತರಣಾನಿ—ಚಾಪೆ ಮೊದಲಾದುವುಗಳನ್ನು ಹಾಸುವಿಕೆಯು ಅನಾದರಾಸ್ಮರಣೇ—ಅನಾದರ—ಉಪವಾಸವ್ರತದಲ್ಲಿ ಪ್ರೀತಿ ಇಲ್ಲದಿರುವಿಕೆಯು ಅಸ್ಮರಣ—ಮರತುಬಿಡುವಿಕೆಯು [ ಯಾವುದುಂಟೋ ]ತದಿದಂ—ಆ ಇದು ಪ್ರೋಷಧೋಪವಾಸವ್ಯತಿಲಂಘನಪಂಚಕಂ—ಪ್ರೋಷಧೋಪವಾಸವ್ರತದ ಪಂಚಾತಿಚಾರವಾಗಿ 'ಭವತಿ'—ಆಗುತ್ತದೆ.

**ತಾತ್ಪರ್ಯ**ಃ—ನಾವು ಪ್ರತಿಯೊಂದು ವಸ್ತುಗಳನ್ನು ಗ್ರಹಣ ಮಾಡುವಾಗಲೂ ಇಡುವಾಗಲೂ ನೋಡಿ ವಿಚಾರಪೂರ್ವಕವಾಗಿ ಪರಿಶೋಧಿಸಿ ಗ್ರಹಿಸಬೇಕು. ಆ ರೀತಿಯಾಗಿ ಪರಿಶೋಧಿಸದೆ ಉಪವಾಸದಿನದಲ್ಲಿ ಪೂಜಾದಿದ್ರವ್ಯಗಳನ್ನು ಪರಿಗ್ರಹಿಸುವುದಕ್ಕೆ 'ಗ್ರಹಣಾತಿಚಾರ' ವೆಂತಲೂ ನೋಡಿ ಪರಿಶೋಧಿಸದಿರುವ ಸ್ಥಳದಲ್ಲಿ ಮಲಮೂತ್ರಗಳನ್ನು ಬಿಡುವುದಕ್ಕೆ 'ವಿಸರ್ಗಾತಿಚಾರ'ವೆಂತಲೂ, ನೊಡಿ ಪರಿಶೋಧಿಸದಿರುವಲ್ಲಿ ಚಾಪೆ ಹಾಸಿಗೆ ಮೊದಲಾದ ಆಸ್ತರಣಗಳನ್ನು ಹಾಸುವುದಕ್ಕೆ 'ಆಸ್ತರಣಾತಿಚಾರ'ವೆಂತಲೂ, ಉಪವಾಸವ್ರತದಲ್ಲಿ ಪ್ರೀತಿಯಿಲ್ಲದಿರುವುದಕ್ಕೆ 'ಅನಾದರಾತಿಚಾರ' ವೆಂತಲೂ, ಉಪವಾಸದ ದಿವಸದಲ್ಲಾಚರಿಸುವ ಕ್ರಿಯೆಗಳನ್ನು ಮರೆತು ಬಿಡುವುದಕ್ಕೆ 'ವಿಸ್ಮರಣಾತಿಚಾರ'ವೆಂತಲೂ ಹೆಸರು. ಇವೈದು ಪ್ರೋಷಧೋಪವಾಸವ್ರತದ ಅತಿಚಾರಗಳಾಗಿವೆ. ಇವುಗಳನ್ನು ಬಿಟ್ಟು ಆ ವ್ರತವನ್ನಾಚರಿಸಬೇಕೆಂದು ಭಾವವು.

## ವೈಯ್ಯಾವೃತ್ಯಶಿಕ್ಷಾವ್ರತದ ವರ್ಣನೆ.

**ದಾನಂ ವೈಯ್ಯಾವೃತ್ಯಂ ಧರ್ಮಾಯ ತಪೋಧನಾಯ ಗುಣನಿಧಯೇ||**
**ಅನಪೇಕ್ಷಿತೋಪಚಾರೋಪಕ್ರಿಯಮಗೃಹಾಯ ವಿಭವೇನ ||**

**ಅನ್ವಯಾರ್ಥ**ಃ—ಗುಣನಿಧಯೇ—ಸಮ್ಯಕ್ತ್ವಾದಿಗುಣಗಳಿಗೆ ಭಂಡಾರದಂತಿರುವ ಅಗೃಹಾಯ—ಮನೆಯಿಲ್ಲದಿರುವ ತಪೋಧನಾಯ—ಮುನಿಗಳಿಗೋಸ್ಕರ ವಿಭವೇನ—ವಿಧಿ—ದ್ರವ್ಯಾದಿಸಂಪತ್ತಿನಿಂದ ಧರ್ಮಾಯ-ಪುಣ್ಯಪ್ರಾಪ್ತಿಗೋಸ್ಕರ ಅನಪೇಕ್ಷಿತೋಪಚಾರೋಪಕ್ರಿಯಂ—ಪ್ರತ್ಯುಪಕಾರಾಪೇಕ್ಷೆಯಿಲ್ಲದೆ ದಾನಂ—ದಾನಮಾಡುವಿಕೆಯು ವೈಯ್ಯಾವೃತ್ಯಂ—ವೈಯ್ಯಾವೃತ್ಯಶಿಕ್ಷಾವ್ರತವೆಂದು 'ಉಚ್ಯತೇ'—ಹೇಳಲ್ಪಡುತ್ತದೆ.

**ತಾತ್ಪರ್ಯ**ಃ—ಸಮ್ಯಕ್ತ್ವಾದಿ ಗುಣಗಳಿಂದ ಭೂಷಿತರೂ ಮನೆ ಮೊದಲಾದ ಪರಿಗ್ರಹಗಳಿಲ್ಲದವರೂ ಆದ ಮುನಿಗಳಿಗೆ ತನ್ನ ಶಕ್ತಿ ಮತ್ತು ಸಂಪತ್ತಿಗನುಸಾರವಾಗಿ ಐಹಿಕಖ್ಯಾತಿಪೂಜಾಲಾಭಾದಿ ಅಪೇಕ್ಷೆಗಳಿಲ್ಲದೆ ಪುಣ್ಯಪ್ರಾಪ್ತಿಗೋಸ್ಕರ ಆಹಾರ ಮೊದಲಾದ ದಾನವನ್ನು ಕೊಡುವುದಕ್ಕೆ ವೈಯ್ಯಾವೃತ್ಯವೆಂದು ಹೆಸರು.

**ವ್ಯಾಪತ್ತಿವ್ಯಪನೋದಃ ಪದಯೋಃ ಸಂವಾಹನಂ ಚ ಗುಣರಾಗಾತ್ ||**
**ವೈಯ್ಯಾವೃತ್ಯಂ ಯಾವಾನುಪಗ್ರಹೋಽನ್ಯೋಽಪಿ ಸಂಯಮಿನಾಂ ||**

**ಅನ್ವಯಾರ್ಥಃ**—ಗುಣರಾಗಾತ್—ಗುಣಗಳ ಪ್ರೀತಿಯಿಂದ ಸಂಯಮಿನಾಂ—ಯತಿಗಳ ವ್ಯಾಪತ್ತಿವ್ಯಪನೋದಃ—ಕಷ್ಟವನ್ನು ಪರಿಹರಿಸುವುದು ಚ—ಮತ್ತು ಪದಯೋಃ—ಪಾದಗಳ ಸಂವಾಹನಂ—ಒತ್ತುವಿಕೆಯು ಅನ್ಯೋಽಪಿ—ಬೇರೆ ಕೂಡ ಯಾವಾನ್—ಎಷ್ಟು ಉಪಗ್ರಹಃ—ಉಪಕಾರವಿದೆಯೋ 'ತತ್'—ಅದು ವೈಯ್ಯಾವೃತ್ಯಂ—ವೈಯ್ಯಾವೃತ್ಯವೆಂದು 'ಉಚ್ಯತೆ' ಹೇಳಲ್ಪಡುತ್ತದೆ.

**ತಾತ್ಪರ್ಯ:**—ದಿಗಂಬರಮುನಿಗಳ ರತ್ನತ್ರಯಾದಿಗುಣಗಳಲ್ಲಿ ಪ್ರೀತಿಯನ್ನಿಟ್ಟು ಭಕ್ತಿಯಿಂದ ದೇವ ಮನುಷ್ಯ ತಿರ್ಯಂಚ ಮತ್ತು ಅಚೇತನಕೃತವಾದ ಉಪಸರ್ಗಗಳನ್ನೂ, ಅಥವಾ ದೇಹದಲ್ಲುಂಟಾದ ಜ್ವರರೋಗಾದಿಬಾಧೆಗಳನ್ನೂ ದೂರಮಾಡಿ, ಸೇವಾಶುಶ್ರೂಷೆ, ಪಾದಮರ್ದನ. ಮೊದಲಾದ ಸೇವೆ—ಉಪಕಾರವನ್ನು ಮಾಡುವುದಕ್ಕೆ ವೈಯ್ಯಾವೃತ್ಯವೆಂವೆಂದಭಿಪ್ರಾಯವು.

## ದಾನದ ವಿಶೇಷವರ್ಣನೆ.

**ನವಪುಣ್ಯೈಃ ಪ್ರತಿಪತ್ತಿಃ ಸಪ್ತಗುಣಸಮಾಹಿತೇನ ಶುದ್ಧೇನ ||**
**ಅಪಸೂನಾರಂಭಾಣಾಮಾರ್ಯಾಣಾಮಿಷ್ಯತೇ ದಾನಂ ||೧೧೩||**

**ಅನ್ವಯಾರ್ಥ:**—ಸಪ್ತ ಗುಣಸಮಾಹಿತೇನ—ಏಳು ಗುಣಗಳಿಂದ ಕೂಡಿದವನೂ ಶುದ್ಧೇನ—ಪರಿಶುದ್ಧನೂ ಆದ 'ಶ್ರಾವಕೇನ'—ಗೃಹಸ್ಥನಿಂದ ಅಪಸೂನಾರಂಭಾಣಾಂ-—ಪಂಚಸೂನು ಮತ್ತು ಆರಂಭಗಳಿಲ್ಲದಿರುವ ಆರ್ಯಾಣಾಂ—ಮುನಿಗಳಿಗೆ ನವಪುಣ್ಯೈಃ- ನವಧಾಭಕ್ತಿಗಳಿಂದ ಪ್ರತಿಪತ್ತಿಃ-ಸತ್ಕಾರವನ್ನು ಮಾಡುವಿಕೆಯು ದಾನಂ—ದಾನವೆಂದು ಇಷ್ಯತೇ-ಹೇಳಲ್ಪಡುತ್ತದೆ.

**ತಾತ್ಪರ್ಯಃ**—ಸಪ್ತಗುಣಗಳಿಂದ ಕೂಡಿದವನೂ ಬಾಹ್ಯಾಭ್ಯಂತರಪರಿಶುದ್ಧನೂ ಆದ ಶ್ರಾವಕನು, ಪಂಚಸೂನು ಮತ್ತು ಕೃಷ್ಯಾದ್ಯಾರಂಭಗಳಿಲ್ಲದಿರುವ ಮುನಿಗಳಿಗೆ ನವವಿಧವಾದ ಭಕ್ತಿಯಿಂದ ಐಹಿಕಫಲಾಪೇಕ್ಷೆಯಿಲ್ಲದೆ ಪುಣ್ಯಪ್ರಾಪ್ತಿಗೋಸ್ಕರ ಆದರ—ಸತ್ಕಾರ, ಆಹಾರ ಮೊದಲಾದ

ದಾನವನ್ನು ಮಾಡುವುದಕ್ಕೆ ದಾನವೆಂದು ಹೆಸರು. ÷ ಶ್ರದ್ಧೆ, ಸಂತೋಷ, ಭಕ್ತಿ, ಜ್ಞಾನ, ಅಲುಬ್ಧತೆ, ಕ್ಷಮೆ, ಮತ್ತು ಸತ್ವ ಇವುಗಳಿಗೆ ಸಪ್ತಗುಣ ಗಳೆಂದು ಹೆಸರು. ದಾತೃವಿನಲ್ಲಿ ಈ ಏಳು ಗುಣಗಳಿರಬೇಕು. ಅವನು ಪ್ರಶಂಸಿಸುವುದಕ್ಕೆ ಯೋಗ್ಯನು. ಮುನಿಗಳಿಗೆ ಆಹಾರಾದಿದಾನಗಳನ್ನು ಮಾಡುವುದರಿಂದ ಇಹಪರಗಳಲ್ಲಿ ಪರಮಕಲ್ಯಾಣವಾಗುವುದೆಂಬ ನಂಬಿ ಕೆಗೆ ಶ್ರದ್ಧೆಯೆಂದೂ, ಮುನಿಗಳಿಗೆ ದಾನ ಮಾಡುವುದರಲ್ಲಿ ಆನಂದವನ್ನು ಪಡುವುದಕ್ಕೆ ಸಂತೋಷವೆಂದೂ, ಅವರ ಗುಣಗಳಲ್ಲಿ ವಿಶ್ವಾಸವನ್ನಿಡುವು ದಕ್ಕೆ ಭಕ್ತಿಯೆಂದೂ, ದ್ರವ್ಯಕ್ಷೇತ್ರಕಾಲಭಾವಕ್ಕನುಸಾರವಾಗಿ ಯೋಗ್ಯ ವಾದ ದ್ರವ್ಯಗಳನ್ನು ಕೊಡುವ ಪರಿಜ್ಞಾನಕ್ಕೆ ವಿಜ್ಞಾನವೆಂದೂ, ಖ್ಯಾತಿ ಪೂಜಾಲಾಭಾದಿ ಐಹಿಕಫಲಾಪೇಕ್ಷೆಯಿಲ್ಲದೆ ದಾನವನ್ನು ಕೊಡುವುದಕ್ಕೆ ಅಲುಬ್ಧತೆಯೆಂದೂ, ಕ್ರೋಧಾದಿಗಳಿಲ್ಲದೆ ಶಾಂತಪರಿಣಾಮದಿಂದ ದಾನ ವನ್ನು ಕೊಡುವುದಕ್ಕೆ ಕ್ಷಮೆಯೆಂದೂ, ಹೆಚ್ಚು ಧನಿಕನಲ್ಲದಿದ್ದರೂ ಬಹಳ ಉತ್ಸಾಹದಿಂದ ದಾನವನ್ನು ಮಾಡುವುದಕ್ಕೆ ಸತ್ವವೆಂದೂ ಹೆಸರು. ಇವು ಸಪ್ತಗುಣಗಳು.

○ ಖಂಡನೀ, ಪೇಷಣೀ, ಚುಲ್ಲೀ, ಉದಕುಂಭೀ, ಪ್ರಮಾರ್ಜನೀ ಎಂಬ ಇವೈದರಿಂದ ಗೃಹಸ್ಥನಿಗೆ ಪಾಪಾಸ್ರವವಾಗುವ ಕಾರಣ ಮೋಕ್ಷವನ್ನು ಹೊಂದಲಾರನು. ಅಕ್ಕಿಮೊದಲಾದವುಗಳ ಕುಟ್ಟುವಿಕೆಗೆ ಖಂಡನಿಯೆಂದೂ, ಅಕ್ಕಿ ಗೋದಿ ಮೊದಲಾದ ಬೀಸುವಿಕೆಗೆ ಪೇಷಣಿಯೆಂದೂ, ಬೆಂಕಿಯನ್ನು ರಿಸುವುದಕ್ಕೆ ಚುಲ್ಲಿಯೆಂದೂ, ನೀರುತುಂಬಿಸುವುದು ಮೊದಲಾದುದಕ್ಕೆ ಉದಕುಂಭಿಯೆಂದೂ, ಕಸಗೂಡಿಸುವಿಕೆ, ಸಾರಿಸುವುದು ಮೊದಲಾದುದಕ್ಕೆ ಪ್ರಮಾರ್ಜನಿಯೆಂದೂ ಹೆಸರು. ಇವುಗಳು ಪಾಪಾಶ್ರವಕ್ಕೆ ಕಾರಣವಾಗಿರು ವುದರಿಂದ ಇವೈದಕ್ಕೆ ಪಂಚಸೂನುಗಳೆದು ಹೆಸರು. ಯತಿಗಳು ಈ ಪ್ರಕಾರ

---

÷ ಶ್ರದ್ಧಾತುಷ್ಟಿರ್ಭಕ್ತಿರ್ವಿಜ್ಞಾನಮಲುಬ್ಧತಾ ಕ್ಷಮಾಸತ್ವಂ |
ಯಸ್ಯೈತೇ ಸಪ್ತಗುಣಾಸ್ತಂ ದಾತಾರಂ ಪ್ರಶಂಸಂತಿ ||೧||
○ ಖಂಡನೀ ಪೇಷಣೀ ಚುಲ್ಲೀ ಉದಕುಂಭೀ ಪ್ರಮಾರ್ಜನೀ ||
ಪಂಚಸೂನಾಗ್ಯಹಸ್ಥಸ್ಯ ತೇನ ಮೋಕ್ಷಂ ನ ಗಚ್ಛತಿ ||೨||

ವಾದ ಪಂಚಸೂನುಗಳಿಂದಲೂ ಕೃಷ್ಯಾದ್ಯಾರಂಭಗಳಿಂದಲೂ ರಹಿತರಾಗಿರುತ್ತಾರೆ.

ಒಂಭತ್ತು ವಿಧವಾದ ಭಕ್ತಿಗಳಿಗೆ ನವಪುಣ್ಯಗಳೆಂದು ಹೆಸರು. † ಸ್ಥಾಪನ, ಉಚ್ಚಸ್ಥಾನ, ಪಾದೋದಕ, ಅರ್ಚನ, ಪ್ರಣಾಮ, ಮನಃಶುದ್ಧಿ, ವಚನಶುದ್ಧಿ, ಕಾಯಶುದ್ಧಿ, ಏಷಣಶುದ್ಧಿ ಇವುಗಳಿಗೆ ನವಧಾಭಕ್ತಿಯೆಂದು ಹೆಸರು. ಮುನಿಗಳಿಗೆ ಅಥವಾ ಕ್ಷುಲ್ಲಕರಿಗೆ ಆಹಾರದಾನಾರ್ಥವಾಗಿ ತ್ರಿ:ಪ್ರದಕ್ಷಿಣೆಯನ್ನು ಮಾಡಿ ನಿಲ್ಲಿಸುವುದಕ್ಕೆ 'ಸ್ಥಾಪನಾ' ಅಥವಾ 'ಪ್ರತಿಗ್ರಹಣ'ವೆಂದು ಹೆಸರು. ಅವರನ್ನು ಉನ್ನತವಾದ ಆಸನದಲ್ಲಿ ಕುಳ್ಳಿರಿಸುವುದಕ್ಕೆ 'ಉಚ್ಚಸ್ಥಾನ'ವೆಂದೂ, ಪಾದಪ್ರಕ್ಷಾಲನೆಯನ್ನು ಮಾಡುವುದಕ್ಕೆ 'ಅರ್ಚನ'ವೆಂದೂ, ಅವರವರ ಯೋಗ್ಯತಾನುಸಾರವಾಗಿ ನಮಸ್ಕರಿಸುವುದಕ್ಕೆ 'ಪ್ರಣಾಮ'ವೆಂದೂ, ಮನಸ್ಸಿನ ಶುದ್ಧ ಪರಿಣಾಮಕ್ಕೆ 'ಮನಃಶುದ್ಧಿ'ಯೆಂದೂ, ಅಸಭ್ಯವಚನಗಳನ್ನಾಡದಿರುವುದಕ್ಕೆ 'ವಚನಶುದ್ಧಿ' ಯೆಂದೂ, ಯತ್ನಾಚಾರಪೂರ್ವಕವಾಗಿ ಭಕ್ತಿಯಿಂದ ದಾನಮಾಡುವುದಕ್ಕೆ 'ಕಾಯಶುದ್ಧಿ'ಯೆಂದೂ, ಶುದ್ಧವಾದ ಆಹಾರವನ್ನು ಕೊಡುವುದಕ್ಕೆ 'ಏಷಣಶುದ್ಧಿ'ಯೆಂದೂ ಹೆಸರು. ಈ ಪೂರ್ವೋಕ್ತಪ್ರಕಾರವಾಗಿ ಸಪ್ತಗುಣಗಳಿಂದ ಭೂಷಿತನಾದ ಶ್ರಾವಕನು ನವವಿಧವಾದ ಭಕ್ತಿಗಳಿಂದ ಪಂಚಸೂನುಗಳಿಂದ ರಹಿತರಾದ ಮುನಿಗಳಿಗೆ ಆಹಾರವೊದಲಾದುದನ್ನು ಕೊಡುವುದಕ್ಕೆ ದಾನವೆಂದು ಮುಖ್ಯಾಭಿಪ್ರಾಯವು.

ಇಲ್ಲಿ ಪ್ರಸಂಗಾನುಸಾರ ಸ್ವಲ್ಪ ವೀಶೇಷ ವಿಚಾರ ಮಾಡುತ್ತೇವೆ. ಸಂ.

## ದಿಗಂಬರ ಜೈನ ಮುನಿ, ಅರ್ಜಿಕಾ, ಐಲಕ, ಕ್ಷುಲ್ಲಕ, ಕ್ಷುಲ್ಲಿಕಾ ಇವರ ಆಹಾರದಾನ ವಿಧಿ.

ಗೃಹಸ್ಥಾಶ್ರಮಿ ಶ್ರಾವಕ ಶ್ರಾವಿಕೆಯರಿಗೆ ಶಾಸ್ತ್ರದಲ್ಲಿ ಪ್ರತಿಪಾದಿಸಿರುವ ದೇವಪೂಜಾದಿ ಷಟ್ಕರ್ಮಗಳಲ್ಲಿ ದಾನವೂ ಒಂದಾಗಿರುತ್ತದೆ. "ಅನುಗ್ರಹಾರ್ಥಂ ಸ್ವಸ್ಯಾತಿಸರ್ಗೋ ದಾನಂ" ಎಂದು ತತ್ವಾರ್ಥಸೂತ್ರದಲ್ಲಿ

---

† ಸ್ಥಾಪನಮುಚ್ಚೈ:ಸ್ಥಾನಂ ಪಾದೋದಕಮರ್ಚನಂ ಪ್ರಣಾಮಶ್ಚ॥
ಮನವಚನಕಾಯಶುದ್ಧಯ ಏಷಣಶುದ್ಧಿಶ್ಚ ನವವಿಧಂ ಪುಣ್ಯಂ ॥೧॥

ಹೇಳಿರುವಂತೆ ಉಪಕಾರಕ್ಕೋಸ್ಕರ ಧನವನ್ನು ತ್ಯಾಗ ಮಾಡುವುದಕ್ಕೆ ದಾನವೆಂದು ಹೆಸರು. ಅಂದರೆ ತನಗೂ ಪರರಿಗೂ ಉಪಕಾರವಾಗುವುದಕ್ಕೋಸ್ಕರ ದಾನಮಾಡುವುದೆಂದರ್ಥವು. ದಾನ ಮಾಡುವುದರಿಂದ ತನಗೆ ಪುಣ್ಯಸಂಚಯರೂಪವಾದ ಉಪಕಾರವೂ ಪರರಿಗೆ—ಪಾತ್ರಗಳಿಗೆ ರತ್ನತ್ರಯಾಭಿವೃದ್ಧಿರೂಪವಾದ ಉಪಕಾರವೂ ಆಗುತ್ತದೆ.

ಈ ಪೂರ್ವೋಕ್ತವಾದ ದಾನದಲ್ಲಿ ಆಹಾರದಾನ, ಅಭಯದಾನ, ಭೈಷಜ್ಯ—ಔಷಧದಾನ, ಶಾಸ್ತ್ರ—ಜ್ಞಾನದಾನವೆಂದು ನಾಲ್ಕು ವಿಧ. ಈ ಪ್ರಕರಣದಲ್ಲಿ ಮುನಿಗಳು ಮೊದಲಾದವರಿಗೆ ಆಹಾರದಾನವನ್ನು ಹೇಗೆ ಮಾಡಬೇಕು ? ಎಂಬೀ ವಿಷಯವೇ ಮುಖ್ಯವಾಗಿ ವಿವರಿಸಲ್ಪಡತಕ್ಕುದಾಗಿದೆ. ಆ ದಾನದಲ್ಲಿ ಸಾಮಾನ್ಯದಾನ, ವಿಶೇಷದಾನವೆಂದು ಇತ್ತರವಾಗಿದೆ.

**ವಿಧಿದ್ರವ್ಯದಾತೃಪಾತ್ರವಿಶೇಷಾತ್ತದ್ವಿಶೇಷ: ||**

ಎಂದು ಉಮಾಸ್ವಾಮಿಗಳು ಅಪ್ಪಣೆ ಕೊಡಿಸಿರುವುದರಿಂದ ವಿಶೇಷರೂಪವಾದ ಆ ದಾನದಲ್ಲಿ ವಿಧಿವಿಶೇಷ, ದ್ರವ್ಯವಿಶೇಷ, ದಾತೃವಿಶೇಷ, ಮತ್ತು ಪಾತ್ರವಿಶೆಷವೆಂದು ನಾಲ್ಕುವಿಧವಾಗಿದೆ. ಈ ರೀತಿಯಾಗಿ ವಿಶಿಷ್ಟತೆಗಳಿಂದ ಕೂಡಿದ ದಾನವು ವಿಶೇಷ ದಾನವೆನಿಸುವುದು. ಇದರಿಂದ ವಿಶೇಷವಾದ ಫಲವು ಉಂಟಾಗುವುದು. ಯಥಾಕ್ರಮವಾಗಿ ಅವುಗಳ ಸ್ವರೂಪ ವಿವೇಚನೆಯು ಈ ಪ್ರಕಾರವಾಗಿದೆ.

**ವಿಧಿವಿಶೇಷಃ**—ಪ್ರತಿನಿತ್ಯವೂ ಶ್ರಾವಕರು ತಮ್ಮ ಮನೆಯ ಅಂಗಳವನ್ನು ಗುಡಿಸಿ, ಸಾರಿಸಿ, ರಂಗವಲಿಯಿಂದ ಸ್ವಸ್ತಿಕ, ಚಂದ್ರ, ಸೂರ್ಯ ಮೊದಲಾದ ಮಂಗಲ ಚಿಹ್ನೆಗಳನ್ನು ಬರೆಯಬೇಕು. ಈ ಬಾಹ್ಯಚಿಹ್ನೆಗಳಿಂದಲೇ, ಸಾಮಾನ್ಯವಾಗಿ ಇದು ಶ್ರಾವಕರ ಮನೆಯೆಂದು ಊಹಿಸಬಹುದಾಗಿದೆ. ಈ ರಂಗವಲಿಯನ್ನು ಬರೆಯುವ ಪದ್ಧತಿಯು ಈಗಲೂ ಕೆಲವು ಕಡೆಯಲ್ಲಿ ರೂಢಿಯಾಗಿರುತ್ತದೆ. ಶ್ರಾವಕಿ ಶ್ರಾವಕರು ಪ್ರತಿನಿತ್ಯವೂ ತಮ್ಮ ಸ್ನಾನ ಸಂಧ್ಯಾವಂದನೆ, ದೇವಪೂಜಾದಿಗಳನ್ನು ಮಾಡಿದ ಬಳಿಕ ಶುದ್ಧವಾಗಿ ಅಂತರೀಯೋತ್ತರೀಯ [ಉಡುವ ಹೊದಿಯುವ] ವಸ್ತ್ರಗಳನ್ನು

ಧರಿಸಿಕೊಂಡು ಕೈಯಲ್ಲಿ ಪ್ರಾಸುಕವಾದ ನೀರಿರುವ ಕಳಸ, ಅಷ್ಟವಿಧಾರ್ಚನೆ ದ್ರವ್ಯಾದಿ ಫಲ ಪುಷ್ಪಾದಿಗಳನ್ನು ಹಿಡಿದುಕೊಂಡು ತನ್ನ ಮನೆಯ ಮುಂಭಾಗದಲ್ಲಿ ಪಂಚನಮಸ್ಕಾರ ಮಂತ್ರವನ್ನು ಸ್ಮರಿಸುತ್ತಾ ಮುನಿಗಳು ಮೊದಲಾದ ಅತಿಥಿಗಳ ಆಗಮನವನ್ನು ನಿರೀಕ್ಷಿಸುತ್ತಿರಬೇಕು.

ಮುಖ್ಯವಾಗಿ ಮುನಿಗಳು ಮೊದಲಾದವರ ಭೀಕ್ಷಾವೃತ್ತಿಯ ನಿಯಮ ಸಂಕಲ್ಪವು ದಾತೃ, ಚರಣ, ಅಮತ್ರ, ಆಹಾರ ಮತ್ತು ಸದ್ಮ [ಮನೆ] ಇವುಗಳನ್ನು ಉದ್ದೇಶಿಸಿ ಕೊಂಡಿರುತ್ತದೆ.

೧ **ದಾತೃಸಂಕಲ್ಪ**:—ನಾನು ಇಂದು ಉಚ್ಛಕುಲದಲ್ಲಿ ಹುಟ್ಟಿದಂಥಾ ಜೈನ ಸ್ತ್ರೀ ಪುರುಷರ್‍ಯಾರಾದರೂ ಈ ರೀತಿಯಾದ ಅಲಂಕಾರಯುಕ್ತರಾಗಿ, ಮಂಗಲವಸ್ತು ಫಲ ಮೊದಲಾದುವುಗಳನ್ನು ಹಿಡಿದುಕೊಂಡಿದ್ದರೆ ಆಹಾರವನ್ನು ಸ್ವೀಕರಿಸುವೆನು. ಇಲ್ಲವಾದರೆ ತೆಗೆದುಕೊಳ್ಳಲಾರೆನು. ಎಂದು ಮುನಿಗಳು ಮೊದಲಾದವರು. ದಾತೃಗಳ ವಿಷಯವಾಗಿ ಮಾಡುವ ಸಂಕಲ್ಪಕ್ಕೆ ದಾತೃಸಂಕಲ್ಪವೆಂದು ಹೆಸರು.

೨ **ಚರಣಸಂಕಲ್ಪ**:—ಇಂದು ನಾನು ಈ ಒಂದೇ ಮಾರ್ಗದಲ್ಲಿ ಆಹಾರಕ್ಕೆ ಹೋಗುವೆನು. ಆ ರೀತಿಯಾಗಿ ಹೋದಾಗ ಮಾತ್ರ ಆಹಾರ ದೊರೆತರೆ ಸ್ವೀಕರಿಸುವೆನು, ಎಂದು ಮುನಿಗಳು ಮೊದಲಾದವರು ಮಾಡಿಕೊಳ್ಳುವ ಸಂಕಲ್ಪಕ್ಕೆ **ಚರಣಸಂಕಲ್ಪ** ವೆಂದು ಹೆಸರು,

೩ **ಅಮತ್ರಸಂಕಲ್ಪ**:—ಇಂದು ನಾನು, ಬೆಳ್ಳಿ, ಬಂಗಾರ, ಅಥವಾ ಹಿತ್ತಾಳೆ ಮೊದಲಾದ ಪಾತ್ರೆಗಳಲ್ಲಿ ಆಹಾರಮಾಡಿದರೆ, ಯಾ ಕೊಟ್ಟರೆ ಮಾತ್ರ ಸ್ವೀಕರಿಸುವೆನು, ಎಂಬೀ ಸಂಕಲ್ಪಕ್ಕೆ **ಅಮತ್ರಸಂಕಲ್ಪ** ವೆಂದು ಹೆಸರು.

೪ **ಅನ್ನಸಂಕಲ್ಪ**:— ನಾನು ಇಂದು ಇಂತಹ ರಸಪದಾರ್ಥಗಳ ಅಥವಾ ಇಂತಹ ಧಾನ್ಯಗಳ ಆಹಾರವನ್ನು ಮಾತ್ರ ಸ್ವೀಕರಿಸುವೆನು., ಎಂಬೀ ಸಂಕಲ್ಪಕ್ಕೆ **ಅನ್ನಸಂಕಲ್ಪ** ವೆಂದು ಹೆಸರು.

ಈ ರೀತಿಯಾಗಿ ಮುನಿಗಳು ಮೊದಲಾದವರ ಭಿಕ್ಷಾನಿಯಮವು ಅನೇಕ ಪ್ರಕಾರವಾಗಿರುತ್ತದೆ. ಈ ಭಿಕ್ಷಾಪದ್ಧತಿಗೆ "ಭ್ರಾಮರೀವೃತ್ತಿ"

ಯೆಂದು ಹೆಸರು. ಭ್ರಮರವು ಕಮಲ ಮೊದಲಾದ ಪುಷ್ಪಗಳಿಗೆ ಯಾವ ವಿಧದ ಉಪದ್ರವವನ್ನೂ ಕೊಡದೆ ಮೆಲ್ಲಗೆ ಪುಷ್ಪರಸವನ್ನು ಪಾನ ಮಾಡುವಂತೆ, ಮುನಿ ಮೊದಲಾದವರು ದಾತೃವಿಗೆ ಯಾವ ವಿಧದ ಉಪದ್ರವ ಭೀತಿ ಮೊದಲಾದುವುಗಳನ್ನುಂಟು ಮಾಡದೆ ಭಿಕ್ಷೆಯನ್ನು ಮಾಡುವುದಕ್ಕೆ ಭ್ರಾಮರೀವೃತ್ತಿಯೆಂದರ್ಥವು.

ಈ ಪೂರ್ವೋಕ್ತವಾದ ನಿಯಮದಿಂದ ಮುನಿಗಳು ಕಮಲದ ಮೊಗ್ಗಿನಂತೆ ಹಸ್ತಮುದ್ರೆಯನ್ನು ಮಾಡಿಕೊಂಡು **ಭುಜದಲ್ಲಿರಿಸಿಕೊಂಡೂ,** ಅರ್ಜಿಕಾ, ಐಲಕ, ಕ್ಷುಲ್ಲಕ, ಕ್ಷುಲ್ಲಿಕೆಯರು ಕಮಲಮೊಗ್ಗಿನಂತೆ ಹಸ್ತಮುದ್ರೆಯನ್ನು ಮಾಡಿಕೊಂಡು ಎದೆಯಲ್ಲಿರಿಸಿಕೊಂಡು ನಮ್ಮ ಮನೆಯ ಸಮೀಪಕ್ಕೆ ಬರುವಾಗ ನಾವು ಈ ಕೆಳಗಿನ ಪ್ರಕಾರದ ನವಧಾಭಕ್ತಿಯಿಂದ ಆಹಾರದಾನವನ್ನು ಮಾಡಬೇಕು,

**ತ್ರಿವಿಧೇ ಪಾತ್ರೇ ಸದಾ ಶ್ರದ್ಧಾದಿಗುಣೈ: ಸಂಯುತ: ಜ್ಞಾನೀ ||**
**ದಾನಂ ಯ: ದದಾತಿ ಸ್ವಕಂ ನವದಾನವಿಧಿಭಿ: ಸಂಯುತ: ||**
**ಪ್ರತಿಗ್ರಹೋಚ್ಚಸ್ಥಾನಾಂಘ್ರಿ- | ಕ್ಷಾಲನಾರ್ಚಾನತಿರ್ವಿದು: ||**
**ಯೋಗಾನ್ನಶುದ್ಧೀ ಚ ವಿಧೀನ್ನವಾದರವಿಶೇಷಿತಾನ್ ||**

೧ ಮುನಿಗಳ ಆಗಮನವನ್ನು ಕಂಡು ಹರ್ಷಚಿತ್ತದಿಂದ ಯುಕ್ತನಾಗಿ, **ಪ್ರತಿಗ್ರಹ:**—ನಮೋಸ್ತು ಸ್ವಾಮಿನ್, ನಮೋಸ್ತು, ಅತ್ರ ತಿಷ್ಠ ತಿಷ್ಠ ಭ್ರಾಮರಿಶುದ್ಧಿಕಾರಣಂ ಕರೋಮಿ ಸ್ವಾಹಾ, ಎಂಬೀ ಮಂತ್ರವನ್ನು ಮೂರಾವರ್ತಿ ಹೇಳಿ ಅವರು ನಿಂತ ಮೇಲೆ ಅವರನ್ನು ತನ್ನ ಬಲಕ್ಕೆ ಹಾಕಿಕೊಂಡು ಮೂರು ಪ್ರದಕ್ಷಿಣೆಯನ್ನು ಕೊಡಬೇಕು. ಮನಶುದ್ಧಿ ವಚನಶುದ್ಧಿ ಕಾಯಶುದ್ಧಿ, ಪಿಂಡಶುದ್ಧಿ ಇದೆ. ನಿರ್ಮಾಲ್ಯ ಮಿಥ್ಯಾತ್ವಗಳನ್ನು ಬಿಟ್ಟಿರುತ್ತೇನೆ. ಆಹಾರ ಜಲಶುದ್ಧವಿದೆ. ನಮ್ಮ ಮನೆಗೆ ಆಹಾರಕ್ಕೆ ದಯಮಾಡಿಸಬೇಕು. ಭೂಮಿ ಶುದ್ಧಿಂ ಕರೋಮಿ ಸ್ವಾಹಾ, ಎಂದು ಜಲದಿಂದ ಭೂಮಿಯನ್ನು ಸೇಚಿಸುತ್ತಾ ಮುಂದಾಗಬೇಕು. ಮನೆಯ ಬಾಗಿಲಿನಲ್ಲಿ ತಂಬಿಗೆ ನೀರನ್ನು ಇಟ್ಟಿರಬೇಕು. ಆ ನೀರಿನಿಂದ ಕಾಲುಗಳನ್ನು ತೊಳೆದುಕೊಂಡು ಒಳಕ್ಕೆ ಹೋಗಬೇಕು. ಇದಕ್ಕೆ **ಪ್ರತಿಗ್ರಹವಿಧಿ** ಯೆಂದು ಹೆಸರು.

೨ **ಉಚ್ಚಸ್ಥಾನಃ**—ನಮೋಸ್ತು ಸ್ವಾಮಿನ್, ನಮೋಸ್ತು ಇದಂ ಉಚ್ಚಾಸನಂ ಗೃಹಾಣ ಗೃಹಾಣ ಎಂಬೀ ಮಂತ್ರದಿಂದ ನಿರ್ಜಂತುಕವೂ ಉನ್ನತವೂ ಆದ ಮಣೆ ಮೊದಲಾದ ಅಸನದಲ್ಲಿ ಅವರನ್ನು ಕುಳ್ಳಿರಿಸಬೇಕು. ಇದಕ್ಕೆ ಉಚ್ಚಾಸನವೆಂದು ಹೆಸರು.

೩ **ಅಂಘ್ರಿಕ್ಷಾಲನಃ**—ನಮೋಸ್ತು ಸ್ವಾಮಿನ್ ನಮೋಸ್ತು ಮುನಿ ಆದಿಗಳ ಮಣೆಯ ಮೇಲೆ ಕೂತುಕೊಂಡ ಬಳಿಕ ಅವರ ಮುಂದೆ ಬಂದು ಅಗಲವಾದ ಬಾಯಿಯುಳ್ಳ ಪಾತ್ರೆ ಇಟ್ಟು ಪಾದಪ್ರಕ್ಷಾಲನಂ ಕರೋಮಿ ಸ್ವಾಹಾ ಎಂದು ಹೇಳುತ್ತಾ ಮುನಿ ಆದಿಗಳ ಎರಡು ಪಾದಗಳನ್ನು ಬಿಸಿ ನೀರಿನಿಂದ ತೊಳೆಯಬೇಕು, ಮತ್ತು ಗಂಧೋದಕವನ್ನು ತೆಗೆದುಕೊಳ್ಳಬೇಕು. ಇದಕ್ಕೆ ಅಂಘ್ರಿಕ್ಷಾಲನವೆಂದು ಹೆಸರು.

೪ **ಅರ್ಚಾಃ**—ಆ ಮೇಲೆ ಒಂದು ಮಣೆಯ ಮೇಲೆ ಅಷ್ಟವಿಧದ್ರವ್ಯದಿಂದ ಮುನಿ ಆದಿಗಳ ಪೂಜೆಯನ್ನು ಮಾಡಬೇಕು.

ಪೂಜಾವಿಧಿಯಲ್ಲಿ ಸ್ವಸ್ತಿಕಾದಿಗಳ ರಚನೆಯನ್ನು ಮಂತ್ರೋಚ್ಚಾರಣಪೂರ್ವಕ ಮಾಡಿ ಅನಂತರ ಗುರುಪೂಜೆಯ ಅಷ್ಟಕವನ್ನು ಹೇಳಿ ಭಕ್ತಿಯಿಂದ ಪೂಜಿಸಬೇಕು.

**ಪೂಜಾವಿಧಿಃ**—ಕೆಳಗಿನ ರೀತಿ ಸ್ವಸ್ತಿಕವನ್ನು ಬರೆದು ಸ್ವಸ್ತಿಕದ ನಾಲ್ಕು ಮೂಲೆಯಲ್ಲಿ ಅಂಕೆಗಳನ್ನು ಬರೆಯುವಾಗ ಕೆಳಗೆ ಬರೆದಿರುವ ಹಾಗೆ ಪಠಣ ಮಾಡುತ್ತಾ ಅಂಕೆಗಳನ್ನು ಬರೆಯಬೇಕು.

ಪಂಚಗುರುಣಾಂ ಚ ವಂದೇ ೫

ಚೋವ್ವೀಸಜಿಣಂಚ ಸವ್ವದಾ ವಂದೇ೨ಳ 卐 ಳಚಾರಣಚರಣಂ ಸದಾವಂದೇ

ರಯಣತ್ತಯಂ ಚ ವಂದೇ ೩

ಈ ಶ್ಲೋಕದಲ್ಲಿ ಹೇಳಿದ ಮೆಲೆ ಈ ರೀತಿ ಪುಂಜವನ್ನಿಡಬೇಕು.

o o o

o o o o

ಪುಂಜವನ್ನಿಡುವಾಗ ಪ್ರಥಮಾನುಯೋಗ, ಕರಣಾನುಯೋಗ, ಚರಣಾನುಯೋಗ, ದ್ರವ್ಯಾನುಯೋಗಗಳ ನಾಮೋಚ್ಚಾರಣೆಯನ್ನು ಮಾಡಿ

ನಾಲ್ಕು ಪುಂಜಗಳನ್ನೂ ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಕ್‌ಚಾರಿತ್ರವೆಂದು ಉಚ್ಚರಿಸಿ ಮೂರು ಪುಂಜಗಳನ್ನು ಇಡಬೇಕು, ಇಷ್ಟಾದ ಮೇಲೆ ಸ್ಥಾಪನೆ, ಆಹ್ವಾನ ಮಾಡಿ ಶ್ರುತ, ಗಣಧರರ ಮತ್ತು ಆಹ್ವಾನಿಸಲ್ಪಟ್ಟಿರುವ ತ್ಯಾಗಿಗಳ ಅಷ್ಟವಿಧಾರ್ಚನೆಯನ್ನು ಮಾಡಬೇಕು.

**ಸತೀಂ ಶ್ರುತಸ್ಕಂಧವನೇ ವಿಹಾರಿಣೀ- ।**
**ಮನೇಕಶಾಖಾಗಹನೇ ಸರಸ್ವತೀಂ ॥**
**ಗುರು ಪ್ರವಾಹೇಣ ಜಡಾನುಕಂಪಿನಾ ।**
**ಸ್ತುವೇಭಿವಂದೇ ವನದೇವತಾಮಿಹ ॥**

ಓಂ ಹ್ರೀಂ ಹ್ಸ್ಕ್ಲೀಂ ಹ್ಸ್ಕ್ಲೂಂ ಸರ್ವಶಾಸ್ತ್ರ ಪ್ರಕಾಶಿನಿ ವದ ದದ ವಾಗ್ವಾದಿನಿ ಸರಸ್ವತೀದೇವಿ ಏಹಿ, ಏಹಿ,, ಸಂವೌಷಟ್, ಅತ್ರ ತಿಷ್ಠ ತಿಷ್ಠ ಠ ಠ ಅತ್ರ ಮಮ ಸನ್ನಿಹಿತಾ ಭವ ಭವ ವಷಟ್ ಎಂದು ಆಹ್ವಾನ ಸ್ಥಾಪನಾ ಸನ್ನಿಧಿಕರಣಗಳನ್ನು ಮಾಡಿ ಓಂ ಹ್ರೀಂ ಶಬ್ದ ಬ್ರಹ್ಮಮುಖೋತ್ಪನ್ನ ದ್ವಾದಶಾಂಗಶ್ರುತದೇವ್ಯೈ ಜಲಂ ನಿರ್ವಪಾಮಿ ಸ್ವಾಹಾ.

ಓಂ ಹ್ರೀಂ ಶಬ್ದಬ್ರಹ್ಮಮುಖೋತ್ಪನ್ನ ದ್ವಾದಶಾಂಗ ಶ್ರುತದೇವ್ಯೈ ಗಂಧಂ
ಓಂ ಹ್ರೀಂ ಶಬ್ದಬ್ರಹ್ಮಮುಖೋತ್ಪನ್ನ ದ್ವಾದಶಾಂಗ ಶ್ರುತದೇವ್ಯೈ ಅಕ್ಷತಂ
ಓಂ ಹ್ರೀಂ ಶಬ್ದಬ್ರಹ್ಮಮುಖೋತ್ಪನ್ನ ದ್ವಾದಶಾಂಗ ಶ್ರುತದೇವ್ಯೈ ಪುಷ್ಪಂ
ಓಂ ಹ್ರೀಂ ಶಬ್ದಬ್ರಹ್ಮಮುಖೋತ್ಪನ್ನ ದ್ವಾದಶಾಂಗ ಶ್ರುತದೇವ್ಯೈ ಚರುಂ
ಓಂ ಹ್ರೀಂ ಶಬ್ದಬ್ರಹ್ಮಮುಖೋತ್ಪನ್ನ ದ್ವಾದಶಾಂಗ ಶ್ರುತದೇವ್ಯೈ ದೀಪಂ
ಓಂ ಹ್ರೀಂ ಶಬ್ದಬ್ರಹ್ಮಮುಖೋತ್ಪನ್ನ ದ್ವಾದಶಾಂಗ ಶ್ರುತದೇವ್ಯೈ ಧೂಪಂ
ಓಂ ಹ್ರೀಂ ಶಬ್ದಬ್ರಹ್ಮಮುಖೋತ್ಪನ್ನ ದ್ವಾದಶಾಂಗ ಶ್ರುತದೇವ್ಯೈ ಫಲಂ
ಓಂ ಹ್ರೀಂ ಶಬ್ದಬ್ರಹ್ಮಮುಖೋತ್ಪನ್ನ ದ್ವಾದಶಾಂಗ ಶ್ರುತದೇವ್ಯೈ ಅರ್ಘ್ಯಂ
ಓಂ ಹ್ರೀಂ ಶಬ್ದಬ್ರಹ್ಮಮುಖೋತ್ಪನ್ನ ದ್ವಾದಶಾಂಗ ,, ಶಾಂತಿಧಾರಾಂ
ಓಂ ಹ್ರೀಂ ಶಬ್ದಬ್ರಹ್ಮಮುಖೋತ್ಪನ್ನ ದ್ವಾದಶಾಂಗ ,, ಪುಷ್ಪಾಂಜಲಿಂ

ನಿರ್ವಪಾಮಿ ಸ್ವಾಹಾ ಎಂದು ಹೇಳಿ ಪ್ರತ್ಯೇಕವಾಗಿ ಪೂಜಿಸಬೇಕು.

## ಗಣಧರ ಪೂಜೆ.

ಯೇ ಯೇನಗಾರಾ ಋಷಯೋ ಯತೀಂದ್ರಾ । ಮುನೀಶ್ವರಾಭವ್ಯ ಭವದ್ವ್ಯತೀತಾಃ ॥ ತೇಷಾಂ ವ್ರತೀನಾಂ ಪದಪಂಕಜಾನಿ ! ಸಂಪೂಜಯಾ ಮೋ ಗುಣಶೀಲಸಿದ್ಧೈ ॥

ಓಂ ಹ್ರೀಂ ಸಮ್ಯಗ್ದರ್ಶನಜ್ಞಾನಚಾರಿತ್ರಪವಿತ್ರತರಗಾತ್ರಚತುರ— ಶೀತಿ ಲಕ್ಷ ಗುಣಗಣಧರ ಚರಣಾ ಅತ್ರ ಆಗಚ್ಛತ ಆಗಚ್ಛತ ಸಂವೌ ಷಟ್, ಅತ್ರ ತಿಷ್ಠತ ತಿಷ್ಠತ, ಠ ಠ ಅತ್ರ ಮಮ ಸನ್ನಿಹಿತಾಭವತ ಭವತ ವಷಟ್ ಸ್ವಾಹಾ.

ಓಂ ಹ್ರೀಂ ಗಣಧರ ಚರಣೇಭ್ಯೋ ಜಲಂ ನಿರ್ವಪಾಮಿ ಸ್ವಾಹಾ
ಓಂ ಹ್ರೀಂ ಗಣಧರ ಚರಣೇಭ್ಯೋ ಗಂಧಂ ನಿರ್ವಪಾಮಿ ಸ್ವಾಹಾ
ಓಂ ಹ್ರೀಂ ಗಣಧರ ಚರಣೇಭ್ಯೋ ಅಕ್ಷತಾನ್ ನಿರ್ವಪಾಮಿ ಸ್ವಾಹಾ
ಓಂ ಹ್ರೀಂ ಗಣಧರ ಚರಣೇಭ್ಯೋ ಪುಷ್ಪಂ ನಿರ್ವಪಾಮಿ ಸ್ವಾಹಾ
ಓಂ ಹ್ರೀಂ ಗಣಧರ ಚರಣೇಭ್ಯೋ ಚರುಂ ನಿರ್ವಪಾಮಿ ಸ್ವಾಹಾ
ಓಂ ಹ್ರೀಂ ಗಣಧರ ಚರಣೇಭ್ಯೋ ದೀಪಂ ನಿರ್ವಪಾಮಿ ಸ್ವಾಹಾ
ಓಂ ಹ್ರೀಂ ಗಣಧರ ಚರಣೇಭ್ಯೋ ಧೂಪಂ ನಿರ್ವಪಾಮಿ ಸ್ವಾಹಾ
ಓಂ ಹ್ರೀಂ ಗಣಧರ ಚರಣೇಭ್ಯೋ ಫಲಂ ನಿರ್ವಪಾಮಿ ಸ್ವಾಹಾ
ಓಂ ಹ್ರೀಂ ಗಣಧರ ಚರಣೇಭ್ಯೋ ಅರ್ಘ್ಯಂ ನಿರ್ವಪಾಮಿ ಸ್ವಾಹಾ
ಓಂ ಹ್ರೀಂ ಗಣಧರ ಚರಣೇಭ್ಯೋ ಶಾಂತಿಧಾರಾಂ ನಿರ್ವಪಾಮಿ ಸ್ವಾಹಾ
ಓಂ ಹ್ರೀಂ ಗಣಧರ ಚರಣೇಭ್ಯೋ ಪುಷ್ಪಾಂಜಲಿಂ ನಿರ್ವಪಾಮಿ ಸ್ವಾಹಾ

**ಮುನಿಗಳಾದಿಯವರ ಪೂಜೆ:**—ಮುನಿ, ಅರ್ಜಿಕಾ, ಐಲಕ, ಕ್ಷುಲ್ಲಕ, ಕ್ಷುಲ್ಲಿಕಾ ಆದಿಯವರುಗಳಲ್ಲಿ ಯಾರು ಬಂದಿರುತ್ತಾರೆಯೋ ಅವರ ಹೆಸರನ್ನು ಮಾತ್ರ ಸೇರಿಸಿ, ಕೆಳಗಿನ ಪೂಜೆಯನ್ನು ಮಾಡಬೇಕು. ಇಲ್ಲಿ ಜ್ಞಾಪಕದಲ್ಲಿಟ್ಟುಕೊಳ್ಳಬೇಕಾದ ವಿಚಾರವೇನಂದರೆ ಮುನಿ, ಅರ್ಜಿಕೆಯರಿಗೆ 'ನಮೋಸ್ತು' ಎಂದು ಹೇಳಬೇಕು. ಐಲಕ, ಕ್ಷುಲ್ಲಕ, ಕ್ಷುಲ್ಲಿಕೆಯರಿಗೆ ಇಚ್ಛಾಮಿ ಎಂದು ಹೇಳಬೇಕು. ಈ ವಿಷಯವನ್ನು ಎಲ್ಲಾ ಕ್ರಿಯೆಗಳಲ್ಲಿ ಲಕ್ಷ್ಯದಲ್ಲಿಡತಕ್ಕದ್ದು.

ಓಂ ಹ್ರೀಂ ಶ್ರೀ ಪರಮಪೂಜ್ಯ..................ಆಗಚ್ಛ ಆಗಚ್ಛ ಸಂವೌ ಷಟ್ ಅತ್ರ ತಿಷ್ಠ, ತಿಷ್ಠ, ಠಠ ಅತ್ರ ಮಮ ಸನ್ನಿಹಿತೋ ಭವ ಭವವಷಟ್ ಸ್ವಾಹಾ.

ಓಂ ಹ್ರೀಂ ಶ್ರೀ ಪೂಜ್ಯ.........ಚರಣೇಭ್ಯೋ ಜಲಂ ನಿರ್ವಪಾಮಿ ಸ್ವಾಹಾ
ಓಂ ಹ್ರೀಂ ಶ್ರೀ ಪೂಜ್ಯ.........ಚರಣೇಭ್ಯೋಗಂಧಂ ನಿರ್ವಪಾಮಿ ಸ್ವಾಹಾ
ಓಂ ಹ್ರೀಂ ಶ್ರೀ ಪೂಜ್ಯ.........ಚರಣೇಭ್ಯೋ ಅಕ್ಷತಂ ನಿರ್ವಪಾಮಿ ಸ್ವಾಹಾ
ಓಂ ಹ್ರೀಂ ಶ್ರೀ ಪೂಜ್ಯ.........ಚರಣೇಭ್ಯೋ ಪುಷ್ಪಂ ನಿರ್ವಪಾಮಿ ಸ್ವಾಹಾ
ಓಂ ಹ್ರೀಂ ಶ್ರೀ ಪೂಜ್ಯ.........ಚರಣೇಭ್ಯೋ ಚರುಂ ನಿರ್ವಪಾಮಿ ಸ್ವಾಹಾ
ಓಂ ಹ್ರೀಂ ಶ್ರೀ ಪೂಜ್ಯ.........ಚರಣೇಭ್ಯೋ ದೀಪಂ ನಿರ್ವಪಾಮಿ ಸ್ವಾಹಾ
ಓಂ ಹ್ರೀಂ ಶ್ರೀ ಪೂಜ್ಯ.........ಚರಣೇಭ್ಯೋ ಧೂಪಂ ನಿರ್ವಪಾಮಿ ಸ್ವಾಹಾ
ಓಂ ಹ್ರೀಂ ಶ್ರೀ ಪೂಜ್ಯ.........ಚರಣೇಭ್ಯೋ ಫಲಂ ನಿರ್ವಪಾಮಿ ಸ್ವಾಹಾ
ಓಂ ಹ್ರೀಂ ಶ್ರೀ ಪೂಜ್ಯ.........ಚರಣೇಭ್ಯೋಅರ್ಘ್ಯಂ ನಿರ್ವಪಾಮಿ ಸ್ವಾಹಾ
ಓಂ ಹ್ರೀಂ ಶ್ರೀ ಪೂಜ್ಯಚರಣೇಭ್ಯೋ ಶಾಂತಿಧಾರಾಂ ನಿರ್ವಪಾಮಿ ಸ್ವಾಹಾ
ಓಂ ಹ್ರೀಂ ಶ್ರೀ ಪೂಜ್ಯ·ಚರಣೇಭ್ಯೋ ಪುಷ್ಪಾಂಜಲಿಂ ನಿರ್ವಪಾಮಿ ಸ್ವಾಹಾ

**೫ ಆನತಿ:**—ಬಳಿಕ ಮುನಿಗಳಿಗೆ ನಮೋಸ್ತು ಸ್ವಾಮಿನ್ ನಮೋಸ್ತು, ನಮೋಸ್ತು ಎಂದು ಹೇಳಿ ಪಂಚಾಂಗ ನಮಸ್ಕಾರವನ್ನು ಮಾಡಬೇಕು.

[ಅಕ್ಕಿ ಹಿಟ್ಟಿನಿಂದ ಎಲ್ಲರೂ ಕೈ ತೊಳೆದುಕೊಳ್ಳಬೇಕು. ಆ ಮೇಲೆ ಅವರಿಗೆ ಕೊಡತಕ್ಕ ಆಹಾರವನ್ನೆಲ್ಲಾ ಒಂದು ಮೇಜಿನ ಅಥವಾ ಮಣೆಯ ಮೇಲಿರಿಸಬೇಕು. ಆಹಾರಗಳಲ್ಲಿ ಹಾಕಿರುವ ಪದಾರ್ಥಗಳ ಹೆಸರುಗಳನ್ನೆಲ್ಲಾ ಹೇಳಬೇಕು. ಮುನಿಗಳು ನಿಂತುಕೊಂಡು ಭಿಕ್ಷೆಯನ್ನು ಮಾಡುತ್ತಾರೆ. ಅವರಿಗೆ ಅವರ ಹಸ್ತವೇ ಪಾತ್ರವಾಗಿರುವುದರಿಂದ ನಾವು ಅವರ ಪಾಣಿ ಪಾತ್ರ ಪುಟದಲ್ಲಿ ಆಹಾರವನ್ನಿಕ್ಕಬೇಕು. ಅವರು ಅದನ್ನು ಶೋಧಿಸಿ ತೆಗೆದುಕೊಳ್ಳುವಷ್ಟು ಪ್ರಮಾಣದಿಂದ ಇಡಬೇಕು. ನಾವು ಕೊಡುವಾಗ ಆಹಾರವು ಕೆಳಗೆ ಬಿದ್ದರೆ ಅಂತರಾಯವಾಗುವ ಸಂಭವವುಂಟು. ಆದುದರಿಂದ ಜಾಗರೂಕರಾಗಿರಬೇಕು.]

**೬ ಮನಶುದ್ಧಿ:**—ದಾತೃವು ತನ್ನ ಮನಸ್ಸಿನಲ್ಲಿ ಕ್ರೋಧ, ಮಾನ,

ಮಾಯಾ, ಲೋಭ, ಆಕುಲತೆ, ಗಾಬರಿಯಾಗುವಿಕೆ ಮೊದಲಾದುವುಗಳನ್ನು ಬಿಟ್ಟು ಶಾಂತಪರಿಣಾಮದಿಂದಿರಬೇಕು.

೭ **ವಚನಶುದ್ಧಿ:**—ಮುನಿಗಳು ಆಹಾರಕ್ಕಾಗಿ ಮನೆಗೆ ಬಂದು ಹೋಗುವ ವರೆಗೆ ಹಿತ, ಮಿತ, ಮೃದುವಾದ ಮಾತುಗಳನ್ನಾಡುತ್ತಿರಬೇಕು. ಕಠೋರವಾದ ಮಾತುಗಳನ್ನಾಡಬಾರದು.

೮ **ಕಾಯಶುದ್ಧಿ:**— ತಾನು ಶುದ್ಧ ಕುಲದವನು, ಪಿಂಡ ಶುದ್ಧಯಿದೆ. ನಿರ್ಮಾಲ್ಯವನ್ನು ಬಿಟ್ಟಿರುತ್ತೇನೆ. ಎಂದು ಹೇಳಿ ಪರಿಶುದ್ಧನಾಗಿ ಕೈಯನ್ನು ತೊಳೆದುಕೊಂಡನಂತರ ಆಹಾರವನ್ನು ಹೊರತು ತನ್ನ ಇತರ ಶರೀರ, ವಸ್ತ್ರ ತಲೆ ಮೊದಲಾದುವುಗಳನ್ನು ಮುಟ್ಟಬಾರದು, ನಮೋಸ್ತು ಸ್ವಾಮಿನ್ ನಮೋಸ್ತು ಮನವಚನಕಾಯ ಶುದ್ಧಿಂ ಕರೋಮಿ ಸ್ವಾಹಾ ಎಂದು ಹೇಳಿ ತ್ರಿಕರಣವನ್ನು ಶುದ್ಧಿ ಮಾಡಿಕೊಳ್ಳಬೇಕು.

೯ **ಆಹಾರಶುದ್ಧಿ:**—ಮುನಿಗಳಾದಿ ಆಹಾರಕ್ಕೆ ನಿಂತ ನಂತರ ಸಿದ್ಧಭಕ್ತಿ ಪೂರ್ವಕವಾಗಿ ಆಹಾರವನ್ನು ಸೇವಿಸುತ್ತಾರೆ. ಆದ ಕಾರಣ ಸಿದ್ಧಭಕ್ತಿಯನ್ನು ಹೇಳಿ ನಮೋಸ್ತು ಸ್ವಾಮಿನ್ ನಮೋಸ್ತು ಸಿದ್ಧಭಕ್ತಿ ಕಾರಣಂ ಕರೋಮಿ ಸ್ವಾಹಾ ಎಂದು ಮೂರಾವರ್ತಿ ಹೇಳಬೇಕು. ಸಿದ್ಧಭಕ್ತಿಯಾದನಂತರ ಅವರು ಕೈಯನ್ನು ಮುಂದೆ ಮಾಡುವರು. ಆಗ ಗಾಬರಿಗೊಳ್ಳದೆ ಆಯಾ ಋತುಮಾನಕ್ಕೆ ಅನುಗುಣವೂ ಅವರ ಪ್ರಕೃತಿಗೆ ವಿರೋಧವಲ್ಲದವೂ ಆದ ಆಹಾರಗಳನ್ನು ನಾವು ಜಾಗ್ರತೆಯಿಂದ ಕೊಡಬೇಕು. ನಿರಂತರಾಯವಾಗಿ ಆಹಾರವಾದ ಬಳಿಕ ಅವರ ಹಸ್ತ ಪಾದಾದಿಗಳನ್ನು ತೊಳೆದು ಅವರು ಬಂದನಂತರ ಅವರಿಗೆ ನಮೋಸ್ತು ಮಾಡಬೇಕು ಸಮಯವಿದ್ದರೆ ಪೂಜೆಯನ್ನು ಮಾಡಬೇಕು ಇಲ್ಲದಿದ್ದರೆ ಒಂದು ಅರ್ಘ್ಯವನ್ನಾದರೂ ಕೊಡಬೇಕು ಅವರ ಕಮಂಡಲಕ್ಕೆ ಚೆನ್ನಾಗಿ ಕಾಯಿಸಿದ ನೀರನ್ನು ತುಂಬಬೇಕು. ಮುನಿ ಆದಿಗಳಿಗೆ ಅಗತ್ಯವಿರುವ ಪಿಂಛಿ; ಕಮಂಡಲು ಶಾಸ್ತ್ರಪುಸ್ತಕಗಳನ್ನು ಬಹಳ ಭಕ್ತಿಯಿಂದ ಕೊಡಬೇಕು. ಈ ಪ್ರಕಾರವಾಗಿ ಪೂರ್ವೋಕ್ತವಾದ ಒಂಭತ್ತು ವಿಧದ ಭಕ್ತಿ ವಿಶೇಷಗಳಿಂದ

ಆಹಾರದಾನವನ್ನು ಮಾಡುವುದಕ್ಕೆ ವಿಧಿವಿಶೇಷವೆಂದು ಹೆಸರು, ಇದಕ್ಕೇನೆ ಯೇ ಶ್ರಾವಕರ ಒಂಬತ್ತು ಪುಣ್ಯವೆಂದು ಹೇಳುತ್ತಾರೆ.

**ಗೃಹಕರ್ಮಣಾಪಿ ನಿಚಿತಂ ಕರ್ಮ ವಿಮಾರ್ಷ್ಟಿ ಖಲುಗೃಹವಿಮು ಕ್ತಾನಾಂ ॥ ಅತಿಥೀನಾಂ ಪ್ರತಿಪೂಜಾ ರುಧಿರಮಲಂ ಧಾವತೇ ವಾರಿ**

**ಅನ್ವಯಾರ್ಥಃ**—'ಯಥಾ'—ಹೇಗೆ ವಾರಿ—ನೀರು ಅಲಂ—ಸಂಪೂರ್ಣವಾಗಿ ರುಧಿರಂ—ರಕ್ತವನ್ನು ಧಾವತೇ—ಪ್ರಕ್ಷಾಲಿಸುತ್ತದೋ 'ತಥಾ'—ಹಾಗೆ ಗೃಹವಿಮುಕ್ತಾನಾಂ—ಮನೆಯಿಲ್ಲದಿರುವ ಅತಿಥೀನಾಂ—ಅಭ್ಯಾಗತರಿಗೆ ಪ್ರತಿಪೂಜಾಪಿ—ಆಹಾರದಾನಾದಿ ಸತ್ಕಾರವು ಕೂಡ ಖಲು—ನಿಶ್ಚಯವಾಗಿ ಗೃಹಕರ್ಮಣಾ—ಗೃಹಕಾರ್ಯದಿಂದ ನಿಚಿತಂ—ಸಂಚಿತ ವಾದ ಕರ್ಮ—ಪಾಪವನ್ನು ವಿಮಾರ್ಷ್ಟಿ—ನಾಶಮಾಡುತ್ತದೆ.

**ತಾತ್ಪರ್ಯಃ**—ಗೃಹಸ್ಥನಿಗೆ ಯಾವಾಗಲೂ ಕೃಷ್ಯಾದ್ಯಾರಂಭಗಳಿಂದ ಪಾಪಾಸ್ರವವಾಗುತ್ತಿರುತ್ತವೆ. ಅಂತಹ ಪಾಪಗಳು ರಕ್ತಧಾರೆಯನ್ನು ಜಲವು ಹೋಗಲಾಡಿಸುವಂತೆ ಮನೆ ಮೊದಲಾದ ಪರಿಗ್ರಹಗಳಿಲ್ಲದಿರುದ ಅಭ್ಯಾಗತರಾದ ಮುನಿಗಳಿಗೆ ಆಹಾರದಾನವನ್ನು ಮಾಡುವುದರಿಂದ ನಾಶವಾಗುತ್ತವೆಂದು ಭಾವವು.

**ಉಚ್ಚೈರ್ಗೋತ್ರಂ ಪ್ರಣತೇರ್ಭೋಗೋದಾನಾದುಪಾಸನಾತ್ಪೂಜಾ ॥ ಭಕ್ತೇ: ಸುಂದರರೂಪಂ ಸ್ತವನಾತ್ಕೀರ್ತಿಸ್ತಪೋನಿಧಿಷು ॥**

**ಅನ್ವಯಾರ್ಥಃ**—ತಪೋನಿಧಿಷು—ತಪೋನಿಧಿಗಳಲ್ಲಿ ಪ್ರಣತೇಃ—ನಮಸ್ಕಾರವನ್ನು ಮಾಡುವುದರಿಂದ ಉಚ್ಚೈರ್ಗೋತ್ರಂ – ಉಚ್ಚಕುಲವು ದಾನಾತ್—ದಾನದಿಂದ ಭೋಗಃ—ಭೋಗವು ಉಪಾಸನಾತ್—ಶುಶ್ರೂಷೆಯಿಂದ ಪೂಜಾ—ಸತ್ಕಾರವು ಭಕ್ತೇ:—ಭಕ್ತಿಯಿಂದ ಸುಂದರರೂಪಂ—ಸುಂದರವಾದ ರೂಪವು, ಸ್ತವನಾತ್–ಸ್ತುತಿಸುವುದರಿಂದ ಕೀರ್ತಿ—ಯಶಸ್ಸು 'ಭವತಿ'—ಉಂಟಾಗುತ್ತದೆ.

**ತಾತ್ಪರ್ಯ:**—ನಿರ್ಗ್ರಂಥರೂ ತಪೋನಿಧಿಗಳೂ ಆದ ಮುನಿಗಳನ್ನು ನಮಸ್ಕರಿಸುವುದರಿಂದ ಉತ್ತಮ ಕುಲವೂ ಅವರಿಗೆ ಆಹಾರದಾನವನ್ನು ಮಾಡುವುದರಿಂದ ಉತ್ತಮವಾದ ಭೋಗಸಂಪತ್ತೂ ಅವರ ಸೇವೆ ಶುಶ್ರೂ

ಷಾದಿಗಳನ್ನು ಮಾಡುವುದರಿಂದ ಆದರ ಸತ್ಕಾರವೂ, ಅವರ ಭಕ್ತಿಯನ್ನು ಮಾಡುವುದರಿಂದ ಸುಂದರವಾದ ರೂಪವೂ, ಅವರ ಸ್ತೋತ್ರವನ್ನು ಮಾಡುವುದರಿಂದ ಕೀರ್ತಿಯೂ ನಮಗೆ ಉಂಟಾಗುವುದೆಂದು ಭಾವವು.

**ಕ್ಷಿತಿಗತಮಿವ ವಟಬೀಜಂ ಪಾತ್ರಗತಂ ದಾನಮಲ್ಪಮಪಿ ಕಾಲೇ ||**
**ಫಲತಿ ಚ್ಛಾಯಾವಿಭವಂ ಬಹುಫಲಮಿಷ್ಟಂ ಶರೀರಭೃತಾಂ—||**

**ಅನ್ವಯಾರ್ಥಃ**— ಶರೀರಭೃತಾಂ—ಪ್ರಾಣಿಗಳಿಗೆ ಪಾತ್ರಗತಂ ಸತ್ಪಾತ್ರಕ್ಕೆ ಕೊಟ್ಟ ದಾನಂ—ದಾನವು ಅಲ್ಪಮಪಿ—ಸ್ವಲ್ಪವಾದಾಗ್ಯೂ ಕಾಲೇ—ಯೋಗ್ಯಕಾಲದಲ್ಲಿ ಕ್ಷಿತಿಗತಂ—ಭೂಗತವಾದ ವಟಬೀಜಂ-ಆಲದ ಬೀಜವು, ಛಾಯಾವಿಭವಮಿವ—ನೆರಳೆಂಬ ಸಂಪತ್ತನ್ನು ಕೊಡುವಂತೆ ಇಷ್ಟಂ—ಅಭೀಷ್ಟವಾದ ಬಹುಫಲಂ-ಅಧಿಕಫಲವನ್ನು ಫಲತಿ-ಕೊಡುತ್ತದೆ.

**ತಾತ್ಪರ್ಯ**ಃ—ಬೀಜಗಳಲ್ಲಿ ಆಲದ ಬೀಜವು ಬಹು ಸಣ್ಣದು. ಆದರೂ ಅದರಿಂದ ಬಹಳ ವಿಸ್ತಾರವೂ ಹೆಚ್ಚು ನೆರಳನ್ನುಂಟು ಮಾಡುವುದೂ ಆದ ಮರವಾಗಿ ಹೆಚ್ಚು ಫಲಕಾರಿಯಾಗಿರುವಂತೆ, ನಾವು ಮುನಿ ಆರ್ಜಿಕೆ ಮೊದಲಾದ ಸತ್ಪಾತ್ರಕ್ಕೆ ಮಾಡಿದ ದಾನವು ಬಹುಸ್ವಲ್ಪವಾದರೂ ಯೋಗ್ಯವಾದ ಕಾಲದಲ್ಲಿ ನಮಗಭೀಷ್ಟವಾದ ಸ್ವರ್ಗಮೋಕ್ಷಾದಿ ಸಂಪತ್ತುಗಳನ್ನುಂಟು ಮಾಟುತ್ತದೆಂದು ಭಾವವು.

÷ ಮುನಿಗಳಿಗೆ ಉತ್ತಮಪಾತ್ರವೆಂದೂ, ಶ್ರಾವಕರು ಮತ್ತು ಆರ್ಜಿಕೆಯರಿಗೆ ಮಧ್ಯಮಪಾತ್ರವೆಂದೂ, ಅವಿರತಸಮ್ಯಗ್ದೃಷ್ಟಿಗಳಿಗೆ ಜಘನ್ಯ ಪಾತ್ರವೆಂದೂ, ಸಮ್ಯಕ್ತ್ವವಿಲ್ಲದೆ ವ್ರತಾಚರಣೆಯನ್ನು ಮಾಡುವವರಿಗೆ ಕುಪಾತ್ರವೆಂದೂ, ಸಮ್ಯಕ್ತ್ವವೂ ವ್ರತವೂ ಇಲ್ಲದವರಿಗೆ ಅಪಾತ್ರವೆಂದೂ ಹೆಸರು. ಉತ್ತಮ ಪಾತ್ರಗಳಿಗೆ ದಾನ ಮಾಡುವುದರಿಂದ ಉತ್ತಮ ಭೋಗ ಭೂಮಿಯಲ್ಲಿಯೂ ಮಧ್ಯಮಪಾತ್ರಕ್ಕೆ ದಾನ ಮಾಡಿದವರು ಮಧ್ಯಮ

---

÷ ಉತ್ಕೃಷ್ಟಪಾತ್ರಮನಗಾರಮಣುವ್ರತಾಢ್ಯಂ | ಮಧ್ಯಂ ವ್ರತೇನ ರಹಿತಂ ಸುದೃಶಂ ಜಘನ್ಯಂ || ನಿರ್ದರ್ಶಿನಂ ವ್ರತನಿಕಾಯಯುತಂ ಕುಪಾತ್ರಂ | ಯುಗ್ಮೋಜ್ಝಿತಂ ನರಕಪಾತ್ರಮಿದಂ ಹಿ ವಿದ್ಧಿ ||

ಭೋಗಭೂಮಿಯಲ್ಲಿಯೂ, ಜಘನ್ಯಪಾತ್ರಕ್ಕೆ ದಾನಮಾಡಿದವರು ಜಘನ್ಯ ಭೋಗಭೂಮಿಯಲ್ಲಿಯೂ, ಕುಪಾತ್ರದಾನದಿಂದ ಕುಭೋಗಭೂಮಿಯಲ್ಲಿಯೂ ಹುಟ್ಟುತ್ತಾರೆ. ಅಪಾತ್ರದಾನವು ನಿಷ್ಫಲವೆಂದು ಭಾವವು. ಅಸಿಮಸಿ ಕೃಷಿ ಮೊದಲಾದ ಷಟ್ಕರ್ಮಗಳಿಲ್ಲದೆ ಕಲ್ಪವೃಕ್ಷಗಳಿಂದುಂಟಾದ ಉತ್ತಮ ಸುಖವನ್ನು ಅನುಭವಿಸಿಕೊಂಡಿರುವ ಸ್ಥಾನಕ್ಕೆ ಭೋಗಭೂಮಿಯೆಂದು ಹೆಸರು. ಉತ್ತಮಭೋಗಭೂಮಿಜರಿಗೆ ಮೂರು ಪಲ್ಯಪ್ರಮಾಣ ಆಯುಸ್ಯವೂ ಮೂರು ಕ್ರೋಶ ಪ್ರಮಾಣವುಳ್ಳುದೂ ಸುಂದರವೂ ಸಮಚತುರಸ್ರಸಂಸ್ಥಾನವುಳ್ಳುದೂ ಆದ ಶರೀರವೂ, ದಶವಿಧವಾದ ಕಲ್ಪವೃಕ್ಷಸುಖವೂ ಇರುತ್ತದೆ. ಅಲ್ಲಿಯ ಸ್ತ್ರೀ ಪುರುಷರು ಯುಗಲಗಳಾಗಿ ಜನಿಸಿದೊಡನೆಯೇ ಅವರ ಮಾತಾಪಿತೃಗಳು ಮರಣವನ್ನೈದುವರು. ಅನಂತರ ಈ ಜನಿಸಿದ ಹೆಣ್ಣು ಗಂಡು ಶಿಶುಗಳೇ ೪೯ ದಿವಸಗಳೊಳಗೆ ಯೌವ್ವನಸ್ಥರಾಗಿ ಪತಿಪತ್ನಿಯರಾಗುವರು. ಅಲ್ಲಿ ಕಲ್ಪವೃಕ್ಷಗಳ ಪ್ರಭಾವದಿಂದ ದಿವಾರಾತ್ರಿಗಳೆಂಬ ಭೇದಗಳಿಲ್ಲದೆ ಸದಾ ಪ್ರಕಾಶವೂ ರೋಗಶೋಕಾದಿಗಳಿಂದ ರಹಿತವೂ ಕೆಸರು—ಕಲ್ಲು ಮೊದಲಾದ ಅಪವಿತ್ರವಾದ ವಸ್ತುಗಳಿಲ್ಲದೆ ರತ್ನ—ಸ್ಫಟಿಕ ಮೊದಲಾದ ಪಾಷಾಣಗಳಿಂದ ನಿರ್ಮಿತವಾದ ಭೂಮಿಯುಳ್ಳುದಾಗಿರುತ್ತದೆ. [೧] ತೂರ್ಯಾಂಗ, [೨] ಪಾತ್ರಾಂಗ, [೩] ಭೂಷಣಾಂಗ, [೪] ಪಾನಾಂಗ, [೫] ಭೋಜನಾಂಗ, [೬] ಪುಷ್ಪಾಂಗ, [೭] ಜ್ಯೋತಿರಂಗ, [೮] ಗೃಹಾಂಗ, [೯] ವಸ್ತ್ರಾಂಗ, [೧೦] ದೀಪಾಂಗಗಳೆಂಬ ದಶವಿಧದ ಕಲ್ಪವೃಕ್ಷಗಳಿರುತ್ತವೆ. ವೀಣೆ ಕೊಳಲು ಮೃದಂಗ ಮೊದಲಾದ ಸಂಗೀತ ವಾದ್ಯಗಳನ್ನು ಕೊಡುವ ಕಲ್ಪವೃಕ್ಷಕ್ಕೆ 'ತೂರ್ಯಾಂಗ'ವೆಂದೂ ರತ್ನ ಮತ್ತು ಸುವರ್ಣ ನಿರ್ಮಿತವೂ ಅನೇಕ ವಿಧವೂ ಆದ ಪಾತ್ರಗಳನ್ನು ಕೊಡುವ ಕಲ್ಪವೃಕ್ಷಕ್ಕೆ 'ಪಾತ್ರಾಂಗ' ವೆಂದೂ, ಅನೇಕ ವಿಧವಾದ ಆಭರಣಗಳನ್ನು ಕೊಡುವ ಕಲ್ಪವೃಕ್ಷಕ್ಕೆ 'ಭೂಷಣಾಂಗ'ವೆಂದೂ ಶೀತಲವೂ ಮಿಷ್ಟವೂ ಸುಗಂಧವೂ ಆದ ಪಾನದ್ರವ್ಯವನ್ನು ಕೊಡುವ ಕಲ್ಪವೃಕ್ಷಕ್ಕೆ 'ಪಾನಾಂಗ' ವೆಂದೂ, ಉತ್ತಮವಾದ ಆಹಾರವನ್ನು ಕೊಡುವ ಕಲ್ಪವೃಕ್ಷಕ್ಕೆ 'ಭೋಜನಾಂಗ'ವೆಂದೂ, ನಾನಾವಿಧದ ಸುಗಂಧವಾದ ಪುಷ್ಪಮಾಲೆಯನ್ನು

ಕೊಡುವ ಕಲ್ಪವೃಕ್ಷಕ್ಕೆ 'ಪುಷ್ಪಾಂಗ' ವೆಂದೂ ಉತ್ತಮವಾದ ಪ್ರಕಾಶವನ್ನುಂಟುಮಾಡುವ ವೃಕ್ಷಕ್ಕೆ 'ಜ್ಯೋತಿರಂಗ'ವೆಂದೂ, ಉತ್ತಮವಾದ ಉಪ್ಪರಿಗೆ ಮನೆಗಳನ್ನು ಕೊಡುವ ವೃಕ್ಷಕ್ಕೆ 'ಗೃಹಾಂಗ'ವೆಂದೂ, ನಾನಾ ವಿಧವಾದ ವಸ್ತ್ರ--ಹಾಸಿಗೆ ಮೊದಲಾದುವುಗಳನ್ನು ಕೊಡುವ ವೃಕ್ಷಕ್ಕೆ 'ವಸ್ತ್ರಾಂಗ'ವೆಂದೂ, ಅಂಧಕಾರವಿಲ್ಲವಾದರೂ ನಾನಾವಿಧವಾದ ದೀಪಮಾಲಿಕೆಯನ್ನುಂಟುಮಾಡುವ ವೃಕ್ಷಕ್ಕೆ 'ದೀಪಾಂಗ'ವೆಂದೂ ಹೆಸರು. ಭೋಗಭೂಮಿಯಲ್ಲಿರುವ ಸ್ತ್ರೀಪುರುಷರಿಗೆ ಮರಣಕಾಲದಲ್ಲಿ ಕ್ರಮವಾಗಿ ಆಕಳಿಕೆಯೂ ಸೀನೂ ಉಂಟಾಗಿ ಮರಣವನ್ನೈದುವರು. ಕೂಡಲೇ ಅವರ ದೇಹವು ಶರತ್ಕಾಲದ ಮೇಘಪಟಲದಂತೆ ವಿಲಯವಾಗುವುದು. ಆಗ ಸಮ್ಯಗ್ದೃಷ್ಟಿಗಳು ಸೌಧರ್ಮಾದಿ—ಸ್ವರ್ಗಗಳಲ್ಲುದ್ಭವಿಸುವರು. ಮಿಥ್ಯಾದೃಷ್ಟಿಗಳು ಭವನವಾಸಿ ಮೊದಲಾದ ದೇವತೆಗಳಾಗಿ ಜನಿಸುವರು. ಆದುದರಿಂದ ಈ ರೀತಿಯಾಗಿ ಸತ್ಪಾತ್ರಕ್ಕೆ ಆಹಾರ ಮೊದಲಾದ ದಾನಗಳನ್ನು ಮಾಡುವುದರಿಂದ ಉತ್ತಮವಾದ ಸುಖಗಳಿಗೆ ಭಾಜನರಾಗುತ್ತಾರೆಂದು ಮುಖ್ಯಾಭಿಪ್ರಾಯವು.

## ದಾನದ ಭೇದಗಳು.

**ಆಹಾರೌಷಧಯೋರಪ್ಯುಪಕರಣಾವಾಸಯೋಶ್ಚ ದಾನೇನ ||**
**ವೈಯ್ಯಾವೃತ್ಯಂ ಬ್ರುವತೇ ಚತುರಾ ತತ್ವೇನ ಚತುರಸ್ರಾಃ ||೧೧೭||**

**ಅನ್ವಯಾರ್ಥಃ**— ಚತುರಸ್ರಾಃ—ಚತುಜ್ಞಾ೯ನಧಾರಿಗಳಾದ ಗಣಧರರು, ಆಹಾರೌಷಧಯೋಃ—ಆಹಾರ ಮತ್ತು ಔಷಧಿಗಳನ್ನು ಅಪಿ ಮತ್ತು ಉಪಕರಣಾವಾಸಯೋಶ್ಚ- ಶಾಸ್ತ್ರಾದ್ಯುಪಕರಣ ಮತ್ತು ಸ್ಥಾನ ಇವುಗಳ ಕೂಡ ದಾನೇನ—ಕೊಡುವದರಿಂದ ಚತುರಾತತ್ವೇನ—ನಾಲ್ಕು ವಿಧವಾದ ವೈಯ್ಯಾವೃತ್ಯಂ—ವೈಯಾವೃತ್ಯವೆಂದು ಬ್ರುವತೇ—ಹೇಳುತ್ತಾರೆ.

**ತಾತ್ಪರ್ಯ**:—ಮತಿಶ್ರುತಾವಧಿಮನಃಪರ್ಯಯಗಳೆಂಬ ನಾಲ್ಕು ವಿಧವಾದ ಜ್ಞಾನಗಳುಳ್ಳವರಾದುದರಿಂದ ಗಣಧರರಿಗೆ 'ಚತುರಸ್ರ' ರೆಂದು ಹೆಸರು. ಅಂತಹ ಗಣಧರರು ಮುನಿಗಳಿಗೆ ಆಹಾರದಾನ, ಔಷಧದಾನ, ಉಪಕರಣ [ಪುಸ್ತಕ, ಪಿಂಛಿ, ಕಮಂಡಲು] ದಾನ, ಆವಾಸ [ಅಭಯ

ದಾನ ಇವುಗಳನ್ನು ಕೊಡುವುದಕ್ಕೆ ಚತುರ್ವಿಧವಾದ ವೈಯ್ಯಾವೃತ್ಯವೆಂದು ಹೇಳುತ್ತಾರೆ.

## ಚತುರ್ವಿಧ ದಾನದಲ್ಲಿ ಪ್ರಸಿದ್ಧರಾದವರು.

**ಶ್ರೀಷೇಣವೃಷಭಸೇನೇ ಕೌಂಡೇಶಃ ಶೂಕರಶ್ಚ ದೃಷ್ಟಾಂತಾಃ ||**
**ವೈಯ್ಯಾವೃತ್ಯಸ್ಯೈತೇ ಚತುರ್ವಿಕಲ್ಪಸ್ಯ ಮಂತವ್ಯಾಃ ||೧೧೮||**

**ಅನ್ವಯಾರ್ಥಃ**—ಶ್ರೀಷೇಣವೃಷಭಸೇನೇ—ಶ್ರೀಷೇಣರಾಜನು ಮತ್ತು ವೃಷಭಸೇನೆಯೆಂಬ ಶ್ರೇಷ್ಠಿಪುತ್ರಿಯು ಕೌಂಡೇಶಃ—ಕೌಂಡೇಶನೆಂಬ ಗೊಲ್ಲನು ಚ—ಮತ್ತೆ ಶೂಕರ:—ಹಂದಿಯು ಏತೇ—ಇವರು ಚತುರ್ವಿಕಲ್ಪಸ್ಯ, ನಾಲ್ಕು ವಿಧವಾದ ವೈಯ್ಯಾವೃತ್ಯಸ್ಯ—ದಾನಕ್ಕೆ ದೃಷ್ಟಾಂತಾ:—ಪ್ರಸಿದ್ಧರಾದವರೆಂದು ಮಂತವ್ಯಾಃ—ತಿಳಿಯತಕ್ಕದ್ದು.

**ತಾತ್ಪರ್ಯ:**— ಆಹಾರದಾನದಲ್ಲಿ ಶ್ರೀಷೇಣಮಹಾರಾಜನೂ, ಔಷಧದಾನದಲ್ಲಿ ವೃಷಭಸೇನೆಯೆಂಬ ಶ್ರೇಷ್ಠಿಪುತ್ರಿಯೂ. ಶಾಸ್ತ್ರದಾನದಲ್ಲಿ ಕೌಂಡೇಶನೆಂಬ ಗೊಲ್ಲನೂ, ಅಭಯದಾನದಲ್ಲಿ ಹಂದಿಯೂ ಪ್ರಸಿದ್ಧರಾಗಿರುತ್ತಾರೆ ಇವರ ಪುರಾಣಪ್ರಸಿದ್ಧವಾದ ಚರಿತ್ರೆಯು ವಕ್ಷ್ಯಮಾಣ ಪ್ರಕಾರವಾಗಿದೆ.

## ಶ್ರೀಷೇಣರಾಜನ ಕಥೆ.

ಮಲಯದೇಶದ ರತ್ನಸಂಚಯವೆಂಬ ಪುರದಲ್ಲಿ ಶ್ರೀಷೇಣಮಹಾರಾಜನು ರಾಜ್ಯವನ್ನಾಳುತ್ತಿರಲು ಅವನಿಗೆ ಸಿಂಹನಂದಿತೆ ಮತ್ತು ಅನಿಂದಿತೆಯರೆಂಬೀರ್ವರು ಪತ್ನಿಯರಿದ್ದರು. ಇವರೀರ್ವರ ಗರ್ಭದಲ್ಲಿ ಕ್ರಮದಿಂದ ಇಂದ್ರ ಮತ್ತು ಉಪೇಂದ್ರರೆಂಬ ಪುತ್ರರು ಜನಿಸಿದರು. ಅದೇ ಪುರದಲ್ಲಿ ಸಾತ್ಯಕಿಯೆಂಬೋರ್ವ ಬ್ರಾಹ್ಮಣನಿದ್ದನು. ಆತನಿಗೆ ಜಂಬೂಮತಿಯೆಂಬ ಪತ್ನಿಯಿದ್ದು ಸತ್ಯಭಾಮೆಯೆಂಬ ಪುತ್ರಿಯಿದ್ದಳು. ಅವಳು ಬಹು ಸುಖವಂತಳೂ ಗುಣವತಿಯೂ ಆಗಿದ್ದಳು. ಪಾಟಲೀಪುತ್ರವೆಂಬ ಮತ್ತೊಂದು ನಗರದಲ್ಲಿ ರುದ್ರಭಟ್ಟನೆಂಬ ಬ್ರಾಹ್ಮಣನು ವಿದ್ಯಾರ್ಥಿಗಳಿಗೆ ವೇದಾಧ್ಯಯನವನ್ನು ಮಾಡಿಸುತ್ತಾ ಅದರಿಂದ ತನ್ನ ಉಪಜೀವಿಕೆಯನ್ನು ಮಾಡಿಕೊಳ್ಳುತ್ತಿದ್ದನು. ಅವನ ದಾಸೀಪುತ್ರನಾದ ಕಪಿಲನೆಂಬ ಬಾಲಕನು ಯಾವಾಗಲೂ

ರುದ್ರಭಟ್ಟನು ತನ್ನ ವಿದ್ಯಾರ್ಥಿಗಳಿಗೆ ವೇದಾಧ್ಯಯನವನ್ನು ಮಾಡಿಸು ವಾಗ ತಾನು ಕೂಡಾ ಕೇಳುತ್ತಾ ತೀಕ್ಷ್ಣಬುದ್ಧಿಯುವನಾದ್ದರಿಂದ ಕೆಲವು ದಿನಗಳಲ್ಲಿ ಸರ್ವವೇದವನ್ನೂ ಕಂಠಪಾಠ ಮಾಡಿಕೊಂಡನು. ಶೂದ್ರನು ವೇದಪಠನಮಾಡುವುದನ್ನು ನೋಡಿ ರುದ್ರಭಟ್ಟನು ಬಹಳ ಸಂತಪ್ತನಾಗಿ ಕಪಿಲನನ್ನು ಮನೆಯಿಂದ ಹೊರಡಿಸಿದನು. ಕಪಿಲನು ಇದರಿಂದ ಕಳವಳ ಗೊಳ್ಳದೆ, ಮನಸ್ಸಿನಲ್ಲಿ “ ಈಗ ಆಚಾರ್ಯರು ನನ್ನನ್ನು ಮನೆ ಯಿಂದ ಹೊರಡಿಸಿದರೂ ಚಿಂತೆಯಿಲ್ಲ. ಈಗ ನನಗೆ ವೇದಾಭ್ಯಾಸವು ಚನ್ನಾಗಿ ಆಗಿದೆ. ಇದರಿಂದ ಎಲ್ಲಿಯಾದರೂ ನನ್ನ ಜೀವನವನ್ನು ಮಾಡು ವೆನು. ಆದರೆ, ನಾನು ಜಾತಿಯಲ್ಲಿ ಹೀನನಾಗಿರುವುದರಿಂದ ನನ್ನನ್ನು ಯಾರೂ ವಿಚಾರಿಸಲಾರರು. ಆದ್ದರಿಂದ ನಾನು ನನ್ನ ವೇಷಪರಿವರ್ತನೆ ಯನ್ನು ಮಾಡಿ ಬ್ರಾಹ್ಮಣವೇಷವನ್ನು ಧರಿಸಬೇಕೆ”ಂದು ಯೋಚಿಸಿ ಯಜ್ಞೋಪವೀತ, ಧೌತವಸ್ತ್ರ ಮೊದಲಾದುವುಗಳನ್ನು ಧರಿಸಿಕೊಂಡು ರತ್ನಸಂಚಯಪುರದ ಕಡೆಗೆ ಹೋದನು. ಅಲ್ಲಿ ಹೋಗಿ ತನ್ನ ಚಾತುರ್ಯ ದಿಂದ ಎಲ್ಲಾ ನಗರವಾಸಿಗಳನ್ನು ಸ್ವಾಧೀನಪಡಿಸಿಕೊಂಡನು. ಪ್ರತಿದಿನವೂ ಅವನ ಸಮೀಪಕ್ಕೆ ತುಂಬಾ ಜನಸಮೂಹವು ಬರುತ್ತಿತ್ತು. ಅದರಿಂದ ಅವನಿಗೆ ಬಹಳ ದ್ರವ್ಯಸಂಪಾದನೆಯಾದ್ದರಿಂದ ಉತ್ತಮರೀತಿಯಿಂದ ತನ್ನ ಜೀವನನಿರ್ವಾಹವನ್ನು ಮಾಡುತ್ತಿದ್ದನು. ಇ ವಾರ್ತೆಯು ಕರ್ಣೋಪಕರ್ಣ ಯಾಗಿ ಸಾತ್ಯಕಿಯೆಂಬ ಬ್ರಾಹ್ಮಣನಿಗೂ ತಿಳಿದು, ಆಗ ತನ್ನ ಮನ ಸ್ಸಿನಲ್ಲಿ—“ ಇವನು ಅತಿ ಸುಂದರನಾಗಿದ್ದು ಬಹಳ ವಿದ್ವಾಂಸನಾಗಿದ್ದಾನೆ. ಆದ್ದರಿಂದ-ತನ್ನ ಮಗಳನ್ನು ಇವನಿಗೆ ಕೊಟ್ಟು ಲಗ್ನ ಮಾಡುವುದು ಪ್ರಶ ಸ್ತವೆಂದು ಭಾವಿಸಿ, ಅವನೊಂದು ದಿನ ಆ ಕಪಿಲನನ್ನು ತನ್ನ ಮನೆಗೆ ಬರಮಾಡಿ, ಅವನ ವಿದ್ವತ್ತೆಯನ್ನು ಪರೀಕ್ಷಿಸಿ ತನ್ನ ಮಗಳಾದ ಸತ್ಯಭಾ ಮೆಯನ್ನು ಅವನಿಗೆ ಕೊಟ್ಟು ಮದುವೆ ಮಾಡಿದನು. ಹೀಗಿರಲೊಂದು ದಿನ ಈ ನೂತನದಂಪತಿಗಳು ಏಕಾಂತದಲ್ಲಿ ರತಿಸುಖವನ್ನನುಭವಿಸುತ್ತಿರಲು ಸತ್ಯಭಾಮೆಯು ಈತನ ಅಯೋಗ್ಯವಾದ ಕಾಮುಚೇಷ್ಟೆಯನ್ನು ನೋಡಿ ಶಂಕಿತಳಾಗಿ ಇವನು ಹೀನಜಾತಿಯವನೋ ಎಂಬ ವಿಚಾರದಿಂದ “ಇವನು

ಏನಾದರೂ ಕಪಟತನದಿಂದ ಬ್ರಾಹ್ಮಣವೇಷವನ್ನು ಧರಿಸಿ ನನ್ನೊಡನೆ ಲಗ್ನವನ್ನು ಮಾಡಿಕೊಂಡಿರಬಹುದು. ಇವನ ವರ್ತನೆಯಿಂದ ಉಚ್ಚಕುಲೀನನಂತೆ ತೋರುವುದಿಲ್ಲ. ಇಂತಹ ಹೀನಜಾತಿಯವನೊಡನೆ ನನ್ನ ಸಂಯೋಗವಾಯಿತು. ಆದ ಕಾರಣ ಇಂತಹ ದುಃಖಕರವಾದ ನನ್ನ ಜನ್ಮಕ್ಕೆ ಧಿಕ್ಕಾರವಿರಲಿ'' ಎಂದು ತನ್ನನ್ನು ನಿಂದಿಸಿಕೊಳ್ಳುತ್ತಾ ಉದಾಸೀನಳಾಗಿದ್ದಳು. ಹೀಗಿರಲು ರುದ್ರಭಟ್ಟನು ತೀರ್ಥಯಾತ್ರೆಯನ್ನು ಮಾಡುತ್ತಾ ರತ್ನಸಂಚಯಪುರಕ್ಕೆ ಬಂದನು. ಈ ವೃತ್ತಾಂತವು ಕಪಿಲನಿಗೆ ತಿಳಿಯುತ್ತಲೇ ನನ್ನ ಕಾಪಟ್ಯವು ಯಾರಿಗೂ ಗೊತ್ತಾಗಬಾರದೆಂಬ ಭಾವನೆಯಿಂದ ರುದ್ರಭಟ್ಟನಿಗೆ ಹೆಚ್ಚಾದ ಆದರಸತ್ಕಾರ ಮಿಷ್ಟಾನ್ನಭೋಜನಾದಿಗಳನ್ನು ಆತನಿಗೂ ಊರಿನ ಕೆಲವು ಸಭಿಕರಿಗೂ ಮಾಡಿಸಿದನು. ಪರಂತು ರುದ್ರಭಟ್ಟನಿಗೆ ಇದರ ತಥ್ಯಾಂಶವು ತಿಳಿದಿದ್ದರೂ ಯಾರೊಡನೆಯೂ ವ್ಯಕ್ತಪಡಿಸಲಿಲ್ಲ. ಎಲ್ಲರಿಗೂ ಭೋಜನವಾದ ಮೇಲೇ ಕಪಿಲನು ರುದ್ರಭಟ್ಟನ ಪರಿಚಯವನ್ನು ಮಾಡಿಕೊಡುವುದಕ್ಕೋಸ್ಕರ ಪುರಜನರನ್ನು ಕುರಿತು "ಇವರು ನನ್ನ ಪೂಜ್ಯ ಪಿತಾಜಿಯವರು" ಎಂದು ಹೇಳಿದನು. ಆದರೂ, ಈ ಮಾತಿನಿಂದ ಸತ್ಯಭಾಮೆಗೆ ಏನೂ ಸಮಾಧಾನವಾಗದೆ ಬಹಳ ಚಿಂತಾಕ್ರಾಂತಳಾಗಿದ್ದಳು. ಹೀಗಿರಲೊಂದು ದಿನ ಸತ್ಯಭಾಮೆಯು ಇದರ ನಿಜಾಂಶವನ್ನು ತಿಳಿಯಬೇಕೆಂದು ಯೋಚಿಸಿ, ರುದ್ರಭಟ್ಟಬ್ರಾಹ್ಮಣನಿಗೆ ತಾನೇ ಮಿಷ್ಟಾನ್ನಭೋಜನವನ್ನು ಮಾಡಿಸಿ, ಬಹಳ ಸುವರ್ಣಾದಿದಾನದಿಂದ ಆತನನ್ನು ತೃಪ್ತಿಪಡಿಸಿ, ಏಕಾಂತದಲ್ಲಿ "ಇದರ ನಿಜವಾದ ಸಂಗತಿಯೇನು? ಈತನು ಯಾವ ಜಾತಿಯವನು? ಇವನ ಜಾತಿವಿಷಯದಲ್ಲಿ ಎನಗೆ ಸಂದೇಹವಿದೆ ತಾವು ಯಥಾರ್ಥವಾದ ವಿಷಯವನ್ನು ತಿಳಿಸಬೇಕೆ''ಂದು ಪ್ರಾರ್ಥಿಸಿಕೊಂಡಳು. ಇದನ್ನು ಕೇಳಿ ರುದ್ರಭಟ್ಟನು ಉಪಾಯಾಂತರವಿಲ್ಲದೆ, "ಈ ಕಪಿಲನು ತನ್ನ ಪುತ್ರನಲ್ಲ. ನನ್ನ ದಾಸೀ ಪುತ್ರನು'' ಎಂದು ಹೇಳಿಬಿಟ್ಟನು. ಇದನ್ನು ಕೇಳುತ್ತಲೇ ಸತ್ಯಭಾಮೆಯು ಬಹಳ ವ್ಯಸನಾಕ್ರಾಂತಳಾಗಿ ತನ್ನ ಜನ್ಮವನ್ನು ನಿಂದಿಸಿಕೊಳ್ಳುತ್ತಾ, ನಾನು ಈ ರೀತಿಯಾದ ದುರವಸ್ಥೆಯಲ್ಲಿರುವುದಕ್ಕಿಂತ ಸಾಯುವುದು ಲೇಸೆಂದು ಯೋಚಿಸಿ, ಸತ್ಯಭಾಮೆಯು ಕಪಿ

ಲನ ವಿಷಯದಲ್ಲಿ ವಿರಕ್ತಳಾಗಿ "ನಾನು ಅವನ ಸಂಸರ್ಗದಿಂದ ಭ್ರಷ್ಟ ನಾದೆನಾದರೂ ಇನ್ನು ಮುಂದೆ ಇವನ ಸಂಬಂಧದಲ್ಲಿರುವುದು ಒಳ್ಳೆದಲ್ಲ ವೆಂ"ದು ಯೋಚಿಸಿ ಒಂದು ದಿವಸ ಮನೆಯನ್ನು ಬಿಟ್ಟು ಶ್ರೀಷೇಣರಾಜನ ಪತ್ನಿಯಾದ ಸಿಂಹನಂದಿತೆಯ ಸಮೀಪಕ್ಕೆ ಹೋಗಿ, ಅವಳ ಆಶ್ರಯ ದಲ್ಲಿರುತ್ತಿದ್ದಳು.

ಹೀಗಿರಲೊಂದು ದಿನ ಅಲ್ಲಿ ಅರ್ಕಕೀರ್ತಿ ಮತ್ತು ಅಮಿತಗತಿಗಳೆಂಬ ಚಾರಣಮುನಿಗಳೀರ್ವರು ಆಹಾರನಿಮಿತ್ತವಾಗಿ ಬಂದರು. ಶ್ರೀಷೇಣರಾಜನು ವಿಧಿಪೂರ್ವಕವಾಗಿ ನವಧಾಭಕ್ತಿಯಿಂದ ಆಹಾರದಾನವನ್ನು ಮಾಡಿದರು. ಆಗ ಅವನ ರಾಣಿಯೂ ಸತ್ಯಭಾಮೆಯೂ ಅದಕ್ಕೆ ಬಹು ಭಕ್ತಿಯಿಂದ ಅನುಮ ತಿಯನ್ನಿತ್ತ ಕಾರಣ ಈ ನಾಲ್ವರೂ ಈ ಆಹಾರದಾನದ ಪುಣ್ಯಪ್ರಭಾವ ದಿಂದ ಉತ್ತಮ ಭೋಗಭೂಮಿಯಲ್ಲಿ ಹೋಗಿ ಜನಿಸಿದರು. ಈ ಆಹಾರ ದಾನದ ಫಲದಿಂದ ಮುಂದೆ ಶ್ರೀಷೇಣರಾಜನ ಜೀವನು ಕ್ರಮದಿಂದ ತೀ-ರ್ಥಂಕರಪ್ರಕೃತಿಯ ಪುಣ್ಯಬಂಧದಿಂದ ಶ್ರೀಶಾಂತಿನಾಥರೆಂಬ ಹದಿನಾರ ನೆಯ ತೀರ್ಥಂಕರನಾದನು.

## ವೃಷಭಸೇನೇಯೆಂಬ ಶ್ರೇಷ್ಠಿಪುತ್ರಿಯ ಕಥೆ.

ಜನಪದವೆಂಬ ದೇಶದ ಕಾವೇರಿಯೆಂಬ ನಗರದಲ್ಲಿ ಉಗ್ರಸೇನನೆಂ ಬೊಬ್ಬ ರಾಜನಿದ್ದನು. ಅದೇ ನಗರದಲ್ಲಿ ಧನಪತಿಯೆಂಬ ಶ್ರೇಷ್ಠಿಯೂ ಅವ ನಿಗೆ ಧನಶ್ರೀಯೆಂಬ ಪತ್ನಿಯೂ ಇದ್ದರು, ಅವರಿಗೆ ವೃಷಭಸೇನೆಯೆಂಬ ಓರ್ವ ಪುತ್ರಿಯು ಮಾತ್ರ ಇದ್ದಳು. ಈ ವೃಷಭಸೇನೆಯ ಸಮೀಪದಲ್ಲಿ ಬಹಳ ಚತುರಳಾದ ರೂಪವತಿಯೆಂಬ ದಾಸಿಯೋರ್ವಳಿದ್ದಳು.

ಒಂದು ದಿನ ಆ ರೂಪವತಿಯು ವೃಷಭಸೇನೆಯ ಸ್ನಾನಾಗಾರದ ಸಮೀಪದಲ್ಲಿರುವ ಸ್ನಾನಜಲದಿಂದ ಭರಿತವಾದ ಕುಂಡದಲ್ಲಿ ಅತಿಭಯಂ ಕರವಾದ ರೋಗದಿಂದ ಪೀಡಿತವಾದ ಒಂದು ನಾಯಿಯು ಯಥೇಚ್ಛವಾಗಿ ಹೊರಳಾಡಿ ಏಳುತ್ತಿರಲು, ಅದು ರೋಗರಹಿತವಾದುದನ್ನಾಗಿ ತಿಳಿದು, ಬಹು ಆಶ್ಚರ್ಯಗೊಂಡವಳಾಗಿ, "ಈ ನಾಯಿಯು ಆ ಜಲಕುಂಡದಲ್ಲಿ ಹೊರಳಾಡುವುದಕ್ಕೆ ಮೊದಲು ರೋಗಯುಕ್ತವಾಗಿಯೂ ಅನಂತರ ರೋಗ

ಮುಕ್ತವಾಗಿಯೂ ಆಗಲು ಕಾರಣವೇನಿರಬಹುದು ? ಈ ಚಮತ್ಕಾರವನ್ನು ನಾನು ಕಣ್ಣಾರೆ ಕಂಡೆನು. ಇದಕ್ಕೆ ವೃಷಭಸೇನೆಯ ಸ್ನಾನಜಲವೇ ಕಾರಣವಾಗಿರಬಹುದು " ಎಂದಾಲೋಚಿಸಿ, ಇದನ್ನು ಪರೀಕ್ಷಿಸಿ ನೋಡಬೇಕೆಂದು ಹನ್ನೆರಡು ವರ್ಷಗಳಿಂದ ಮಹಾವ್ಯಾಧಿಯಿಂದ ಪೀಡಿತವಾಗಿರುವ ತನ್ನ ತಾಯಿಯ ನೇತ್ರಗಳನ್ನು ಆ ಸ್ನಾನಜಲದಿಂದ ಪ್ರಕ್ಷಾಲಿಸಿದಳು ತಕ್ಷಣವೇ ಆಕೆಯ ನೇತ್ರರೋಗವು ನಿವಾರಣೆಯಾಗಿ ಮೊದಲಿನಂತೆ ಎಲ್ಲಾ ವಸ್ತುಗಳೂ ಅವಳಿಗೆ ಚೆನ್ನಾಗಿ ಕಾಣುವಂತಾಯಿತು. ಈ ಅಶ್ರುತಪೂರ್ವವಾದ ವಾರ್ತೆಯು ನಗರವಾಸಿಗಳಿಗೆಲ್ಲಾ ತಿಳಿದು ಈ ಚಮತ್ಕಾರವನ್ನು ನೋಡುವುದಕ್ಕೋಸ್ಕರ ಬಹಳ ಜನಸಮೂಹವು ಬರಹತ್ತಿತು. ಈ ಸ್ನಾನಜಲದಿಂದ ಅನೇಕರೋಗಿಗಳು ರೋಗಮುಕ್ತರಾದರು. ಅನಂತರ ಈ ರೂಪವತಿಯು ರೋಗನಿವಾರಣೆಯಲ್ಲಿ ಬಹುಪ್ರಸಿದ್ಧಿಯನ್ನು ಪಡೆದಳು.

ಮೇಘಪಿಂಗಲನೆಂಬೊಬ್ಬ ರಾಜನು ಈ ಉಗ್ರಸೇನ ಮಹಾರಾಜನ ನಗರದಲ್ಲಿ ಬಹಳ ದಿನಗಳಿಂದ ಉಪದ್ರವವನ್ನುಂಟು ಮಾಡುತ್ತಿದ್ದನು. ಆದ್ದರಿಂದ ಉಗ್ರಸೇನನು ಬಹಳ ಪೀಡಿತನಾಗಿ ಅದನ್ನು ನಿವಾರಿಸುವುದಕ್ಕೋಸ್ಕರ ರಣಪಿಂಗಲನೆಂಬ ಮಂತ್ರಿಯೊಡನೆ ಹೆಚ್ಚಾದ ಸೈನ್ಯಗಳನ್ನು ಕೊಟ್ಟು ಕಳುಹಿಸಿದನು. ಪರಂತು ಅಲ್ಲಿ ಹೋದೊಡನೆ ಅಲ್ಲೊಂದು ವಿಧವಾದ ವಿಷಜಲಪಾನದಿಂದ ಆ ಮಂತ್ರಿಯ ಸರ್ವಾಂಗಗಳಲ್ಲಿ ವಿಷವು ವ್ಯಾಪಿಸಿ, ಜ್ವರವು ಉತ್ಪನ್ನವಾಗಿ ಅಲ್ಲಿರಲು ಅಸಾಧ್ಯವಾಗಿ ಹಿಂತಿರುಗಿ ತನ್ನ ಊರಿಗೆ ಬಂದನು. ಇಲ್ಲಿಗೆ ಬರುತ್ತಲೇ ನಾಗರಿಕರಿಂದ ರೂಪವತಿಯ ವಾರ್ತೆಯನ್ನು ತಿಳಿದು ಆಕೆಯಿಂದ ಔಷಧಿಯನ್ನು ಸೇವಿಸಿ ಆರೋಗ್ಯವಂತನಾದನು. ತನ್ನ ಮಂತ್ರಿಯು ವಿಷಮಜ್ವರದಿಂದ ಪೀಡಿತನಾಗಿ ಹಿಂತಿರುಗಿ ಬಂದ ವಾರ್ತೆಯನ್ನು ಉಗ್ರಸೇನ ರಾಜನು ಕೇಳಿ, ಆಗ ರಾಜನು ಸ್ವತಃ ತಾನೇ ಯುದ್ಧಕ್ಕೆ ಹೊರಟು ಹೋದನು. ಪರಂತು ಅವನಿಗೆ ಸಹ ವಿಷಪ್ರಯೋಗವನ್ನು ಮಾಡಿದನು. ಆಗ ಅವನು ಕೂಡ ಜ್ವರದಿಂದ ಪೀಡಿತನಾಗಿ ತನ್ನ ರಾಜಧಾನಿಗೆ ಹಿಂತಿರುಗಿ ಬಂದನು. ಆಗ ರಾಜನು ಮಂತ್ರಿಯಿಂದ ರೂಪವತಿಯ ಸಮಾಚಾರವನ್ನು ಕೇಳಿ, ಆಕೆಯನ್ನು ಕರತರು

ವಂತೆ ಮಂತ್ರಿಗೆ ಆಜ್ಞಾಪಿಸಿದನು. ಮಂತ್ರಿಯೂ ಕೂಡ ರಾಜಾಜ್ಞೆಯಂತೆ ರೂಪವತಿಗೆ ಇದನ್ನು ತಿಳಿಸಿ ವೃಷಭಸೇನೆಯ ಸ್ನಾನಜಲವನ್ನು ಕೊಡು ವಂತೆ ಕೇಳಿದನು. ಆದರೆ, ಮಾಡುವುದೇನು? ಸಾಮಾನ್ಯವಾದ ಓರ್ವ ಸ್ತ್ರೀಯ ಸ್ನಾನಜಲವನ್ನು ರಾಜನ ಮಸ್ತಕದ ಮೇಲೆ ಸೇಚಿಸುವುದೆಂದರೆ ಬಹಳ ನಿಂದನೀಯವಾದ ವಿಷಯವಾಗಿದೆ. ಅದಲ್ಲದೆ ನನ್ನ ಮೇಲೆ ಕೋಪಿಸಲೂ ಬಹುದು. ಯದ್ಯಪಿ ಸ್ನಾನಜಲವನ್ನು ಕೊಂಡು ಹೋಗ ದಿದ್ದರೆ ರಾಜನು ಪ್ರಾಣಮುಕ್ತನಾಗುವನು. ಇಂತೆಂದು ರೂಪವತಿಯು ಯೋಚಿಸಿ, ಕೊನೆಗೆ ಧನಪತಿಶ್ರೇಷ್ಠಿಯ ಅನುಮತಿಯಿಂದ ವೃಷಭಸೇ ನೆಯ ಸ್ನಾನಜಲವನ್ನು ಅರಮನೆಗೆ ತೆಗೆದುಕೊಂಡು ಹೋಗಿ ರಾಜನ ಮಸ್ತಕದ ಮೇಲೆ ಸೇಚಿಸಿದಳು. ತಕ್ಷಣವೇ ರಾಜನು ಆರೋಗ್ಯವನ್ನು ಹೊಂದಿದನು. ಇದನ್ನು ನೋಡಿ ರಾಜನು ವಿಸ್ಮಿತಚಿತ್ತನಾಗಿ, ಇದರ ಎಲ್ಲಾ ಸಮಾಚಾರವನ್ನು ರೂಪವತಿಯಿಂದ ತಿಳಿದು ಬಹಳ ಆನಂದಿತ ನಾಗಿ, ಆ ವೃಷಭಸೇನೆಯನ್ನು ತಾನು ಮದುವೆಯಾಗಬೇಕೆಂಬ ಇಚ್ಛೆ ಯಿಂದ ಧನಪತಿಶ್ರೇಷ್ಠಿಯನ್ನು ಅರಮನೆಗೆ ಬರಮಾಡಿದನು. ಇದನ್ನು ಕೇಳಿ ಶ್ರೇಷ್ಠಿಯೂ ಭಯಭೀತನಾಗಿ ರಾಜಸಭೆಗೆ ಹೋಗಿ ಅತಿನಮ್ರತೆಯಿಂದ ರಾಜನಿಗೆ ನಮಸ್ಕಾರವನ್ನು ಮಾಡಿ ಒಂದೆಡೆ ನಿಂತುಕೊಂಡನು. ಆಗ ರಾಜನು ಶ್ರೇಷ್ಠಿಯನ್ನು ಯೋಗ್ಯವಾದ ಸನ್ಮಾನ ಪೂರ್ವಕವಾಗಿ ಸತ್ಕರಿಸಿ, ವಿಲಕ್ಷಣವೂ ಗುಣಕಾರಿಯೂ ಆದ ಸ್ನಾನಜಲವನ್ನು ವೃಷಭಸೇನೆಯ ಪುಣ್ಯಪ್ರಭಾವವನ್ನೂ ಬಹಳವಾಗಿ ಪ್ರಶಂಸಿಸಿ, "ಶ್ರೇಷ್ಠಿವರ್ಯರೇ ! ನಿಮ್ಮ ಇಂತಹ ಪುಣ್ಯವತಿಯಾದ ಪುತ್ರಿಯನ್ನು ಪಾಣಿಗ್ರಹಣಮಾಡಿಕೊಂಡು ಆಕೆಯನ್ನು ಪಟ್ಟರಾಣಿಯನ್ನಾಗಿ ಮಾಡಬೇಕೆಂದು ಏನ್ನ ಲವಲವಿಕೆಯಿದೆ. ಆದಕಾರಣ ಈ ವಿಷಯದಲ್ಲಿ ನೀವು ಸಂಪೂರ್ಣ ಅನುಮತಿಯನ್ನೀಯ ಬೇಕು" ಇಂತೆಂದನು. ಈ ಮಾತನ್ನು ಕೇಳಿ ಧನಪತಿಯು "ಮಹಾಸ್ವಾಮಿ! ನನ್ನಂಥಹ ಅಲ್ಪಮನುಷ್ಯನ ಕನ್ನಿಕೆಯನ್ನು ಪಾಣಿಗ್ರಹಣ ಮಾಡಿಕೊಳ್ಳು ವುದಕ್ಕೆ ತಮಗೆ ಇಚ್ಛೆಯುಂಟಾದುದು ನನ್ನ ಸುದೈವವೆಂದು ತಿಳಿಯು

ತ್ತೇನೆ ಮತ್ತು ತಮ್ಮ ಅಪೇಕ್ಷೆಯನ್ನು ನಾನು ಸಂತೋಷದಿಂದ ಮಾನ್ಯ ಮಾಡುವೆನು. ಪರಂತು ನನ್ನ ಅಭಿಲಾಷೆಯನ್ನು ತಾವು ಪೂರ್ತಿಮಾಡು ವಿರೆಂದು ನನಗೆ ತುಂಬಾ ಭರವಸೆಯಿದೆ. ಅದೇನಂದರೆ, ನಂದೀಶ್ವರ ಪರ್ವ ದಲ್ಲಿ ಜಿನಪೂಜೆಯನ್ನು ಮಾಡಬೇಕೆಂದೂ, ಪಂಜರದಲ್ಲಿರುವ ಎಲ್ಲಾ ಪಕ್ಷಿ ಗಳನ್ನೂ, ಕಾರಾಗೃಹದಲ್ಲಿರುವ ಕೈದಿಗಳನ್ನೆಲ್ಲಾ ಬಿಡಬೇಕೆಂದೂ ಎನ್ನ ಬಯಕೆಯಾಗಿದೆ. ಇದನ್ನು ತಾವು ಪೂರ್ತಿಗೊಳಿಸಿದರೆ ನನ್ನ ಪುತ್ರಿಯನ್ನು ತಮಗೆ ಕೊಟ್ಟು ಲಗ್ನಮಾಡುವರೇ ತಯಾರಾಗಿರವೇನು'' ಇಂತೆಂದನು. ರಾಜನು ಆ ಶ್ರೇಷ್ಠಿಯ ಅಪೇಕ್ಷೆಯನ್ನು ಪೂರ್ತಿಮಾಡುವೆನೆಂದು ಒಪ್ಪಿ ಕೊಂಡು, ಎಲ್ಲಾ ವ್ಯವಸ್ಥೆಯನ್ನು ಮಾಡಿದನು. ಆ ಮೇಲೆ ಶ್ರೇಷ್ಠಿಯು ಸಂತುಷ್ಟನಾಗಿ ರಾಜನಿಗೆ ತನ್ನ ಪುತ್ರಿಯನ್ನು ಕೊಟ್ಟು ಬಹಳ ಸಂಭ್ರಮ ದಿಂದ ವಿವಾಹವಾದನಂತರ ರಾಜನು ಅವಳನ್ನು ಪಟ್ಟರಾಣಿಯನ್ನಾಗಿ ಮಾಡಿ ಆಕೆಯಲ್ಲಿ ಪ್ರೇಮಾಸಕ್ತನಾಗಿ ತನ್ನ ರಾಜ್ಯಕಾರಭಾರವನ್ನೆಲ್ಲಾ ಮಂತ್ರಿಯ ವಶಕ್ಕೊಪ್ಪಿಸಿ ತಾನು ರಾತ್ರಿಹಗಲು ಅಂತಃಪುರದಲ್ಲಿ ವೃಷಭ ಸೇನೆಯೊಡನೆ ಸುಖವನ್ನನುಭವಿಸುತ್ತಿದ್ದನು.

ರಾಜನು ವೃಷಭಸೇನೆಯ ಮದುವೆಯ ಸಮಯದಲ್ಲಿ ಮಾಡಿದ ಪ್ರತಿಜ್ಞೆಯಲ್ಲಿ ಎಲ್ಲಾ ಕಾರಾಗ್ರಹವಾಸಿಗಳನ್ನು ಬಿಡುತ್ತೇನೆಂಬ ನಿಯ ಮವು ಒಂದಾಗಿತ್ತು. ಅದರಂತೆ ಎಲ್ಲಾ ಬಂದಿವಾನರನ್ನು ಮುಕ್ತರನ್ನಾಗಿ ಮಾಡಿದ್ದರೂ, ವಾರಾಣಸೀ ನಗರದ ರಾಜನಾದ ಪೃಥ್ವೀಚಂದ್ರನು ಅತಿ ಬಲಿಷ್ಠನಾದುದರಿಂದ ಅವನನ್ನು ಮಾತ್ರ ವೃಷಭಸೇನೆಯ ವಿವಾಹ ಸಮ ಯದಲ್ಲಿ ಬಿಟ್ಟಿರಲಿಲ್ಲ. ಈ ವಿಷಯವು. ಧನಪತಿ ಶ್ರೇಷ್ಠಿಗೆ ಸಹ ಗೊತ್ತಿರ ಲಿಲ್ಲ. ಪೃಥ್ವೀಚಂದ್ರನಿಗೆ ನಾರಾಯಣದತ್ತೆಯೆಂಬ ಅತಿ ಚತುರೆಯಾದ ಪತ್ನಿಯಿದ್ದಳು. ಈ ಸಮಾಚಾರವು ಆಕೆಗೆ ತಿಳಿದು ತನ್ನ ಪತಿಯನ್ನು ಹೇಗಾದರೂ ಕಾರಾಗೃಹದಿಂದ ಬಿಡಿಸಬೇಕೆಂದು ಪ್ರಯತ್ನಿಸಿ, ತನ್ನ ಮಂತ್ರಿಗಳೊಡನೆ ಆಲೋಚಿಸಿ, "ವಾರಾಣಸಿಯಲ್ಲಿ ವೃಷಭಸೇನೆಯ ಹೆಸ ರಿನಿಂದ ಅಲ್ಲಲ್ಲಿ ಅನ್ನಛತ್ರವನ್ನು'' ಸ್ಥಾಪಿಸಬೇಕು. ಆಗ ನಮ್ಮ ಇಷ್ಟ ಸಿದ್ಧಿ

ಯಾಗುವುದು" ಎಂದು ಸರ್ವರೂ ಒಡಂಬಟ್ಟು ನಾರಾಯಣದತ್ತೆಯು ಅತಿ ಬೇಗನೆ ತನ್ನ ನಗರದಲ್ಲಿ ಅಲ್ಲಲ್ಲಿ ವೃಷಭಸೇನೆಯ ಹೆಸರಿನಿಂದ ಧರ್ಮಛತ್ರವನ್ನು ಸ್ಥಾಪಿಸಿದಳು. ಈ ವಾರ್ತೆಯು ಎಲ್ಲಾ ಕಡೆಗೆ ಪಸರಿಸಿ, ಪ್ರತಿನಿತ್ಯವೂ ಸಾವಿರಾರು ಮಂದಿ ಅನಾಥರು. ಭೋಜನಕ್ಕೋಸ್ಕರ ಬರುತ್ತಿದ್ದು, ಈ ವೃಷಭಸೇನೆಯ ದಾತೃತ್ವವನ್ನು ಎಲ್ಲರೂ ಬಹಳವಾಗಿ ಪ್ರಶಂಸಿಸುತ್ತಿದ್ದರು. ಈ ಸಮಾಚಾರವನ್ನು ಕಾವೇರಿ ನಗರದ ದ್ವಿಜರಿಂದ ರೂಪವತಿಯು ಕೇಳಿ, ಕ್ರೋಧದಿಂದ "ನನ್ನನ್ನು ವಿಚಾರಿಸದೆ ವಾರಾಣಸಿಯಲ್ಲಿ ಅನ್ನಛತ್ರವನ್ನು ಹೇಗೆ ಸ್ಥಾಪಿಸಿದ್ದಿಯೇ ? " ಇಂತೆಂದಳು. ಆಗ ವೃಷಭಸೇನೆಯು "ನಾನು ಅನ್ನಛತ್ರವನ್ನು ಸ್ಥಾಪಿಸಿದುದೂ ಇಲ್ಲ ಈ ವಿಚಾರವು ಎನಗೆ ಗೊತ್ತೂ ಇಲ್ಲ. ಈ ಸಮಾಚಾರವನ್ನು ಕೇಳಿ ನಮಗೆ ಸಹ ಆಶ್ಚರ್ಯವೆನಿಸುತ್ತದೆ. ನನ್ನ ಒಪ್ಪಿಗೆ ವಿನಹ ನನ್ನ ಹೆಸರಿನಲ್ಲಿ ಯಾರು ಸ್ಥಾಪಿರಬಹುದು ? ಅದನ್ನು ತಿಳಿಯಬೇಕೆ"ಂದು ಹೇಳಿದಳು. ಆಗ ರೂಪವತಿಯು ಕೂಡಲೇ ಗುಪ್ತಚರರನ್ನು ಕಳುಹಿಸಿ ಇದರ ನಿಜಾಂಶವನ್ನು ತಿಳಿದು ರಾಣಿಯೊಡನೆ ನಿವೇದಿಸಿದಳು. ಆಗ ಸಮಾಚಾರವು ರಾಜನಿಗೆ ಸಹ ಗೊತ್ತಾಗಿ ಅತಿಸಂತೋಷದಿಂದ ಪೃಥ್ವೀಚಂದ್ರ ರಾಜನನ್ನು ಬಂಧನದಿಂದ ಮುಕ್ತನನ್ನಾಗಿ ಮಾಡಿದನು. ಆಗ ಪೃಥ್ವೀ ಚಂದ್ರನು. ಸಂತೋಷದಿಂದ ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸುವುದಕ್ಕಾಗಿ ಒಂದು ಚಿತ್ರಪಟವನ್ನು ತಯಾರಿಸಿದ್ದನು. ಅದರಲ್ಲಿ ಉಗ್ರಸೇನ ರಾಜನೂ ವೃಷಭಸೇನೆಯೂ ಒಂದು ಮಂಚದಲ್ಲಿ ಕೂತಿರುವಂತೆಯೂ ಅದರ ಕೆಳಗಡೆ ಪೃಥ್ವೀಚಂದ್ರನು ಕೂತುಕೊಂಡು ನಮಸ್ಕರಿಸುವಂತೆಯೂ ಉಲ್ಲಿಖಿತವಾಗಿತ್ತು. ಆ ಮೇಲೆ ಒಂದು ದಿವಸ ರಾಜನೂ ಮತ್ತು ರಾಣಿಯು ಒಂದೆಡೆ ಕೂತಿರುವಾಗ ಈ ಚಿತ್ರಪಟವನ್ನು ಅವರಿಗೆ ಸಮರ್ಪಿಸಿ, ರಾಣಿಯನ್ನು ಕುರಿತು, ಮಹಾರಾಣಿಯವರೇ ! ತಾವು ನನ್ನ ತಾಯಿಗೆ ಸಮಾನರು. ತಮ್ಮಾನುಗ್ರಹದಿಂದ ಇಂದಿಗೆ ನನ್ನ ಜನ್ಮವು ಸಫಲವಾಯಿತು ಇಂದು ಸುದಿನವು." ಎಂದು ಈ ಪ್ರಕಾರವಾಗಿ ಆಕೆಯನ್ನು ಪ್ರಶಂಸಿಸಿ, ಉಗ್ರಸೇನರಾಜನೊಡನೆ. ನನಗೇನಾದರೂ ಆಜ್ಞೆಯಾಗಬೇಕೆಂದನು. ಆಗ

ರಾಜನಿಗೆ ಆತನ ಕೃತಿಯನ್ನೂ ನಮ್ರತೆಯನ್ನೂ ನೋಡಿ ಬಹಳ ಪ್ರೀತಿಯಿಂದ ಅವನನ್ನು ಸತ್ಕರಿಸಿ ಮೇಘಪಿಂಗಲರಾಜನೊಡನೆ ಯುದ್ಧನಿಮಿತ್ತವಾಗಿ ಕಳುಹಿಸಿಕೊಟ್ಟನು. ಈ ಸಮಾಚಾರವು ಮೇಘಪಿಂಗಲನಿಗೆ ತಿಳಿದು, "ಪೃಥ್ವೀಚಂದ್ರನು ಬಹುಶೂರನು ನನ್ನ ಮಾರ್ಮಿಕವಿಚಾರವೆಲ್ಲ ಅವನಿಗೆ ಗೊತ್ತಿದೆ. ನಾನು ಅವನನ್ನು ಜಯಿಸಲಾರೆನು. ಆದುದರಿಂದ ಮೊದಲೇ ಅವನಿಗೆ ಶರಣಾಗತನಾಗುವುದು ಬಲುಲೇಸು" ಎಂದಾಲೋಚಿಸಿ, ತನ್ನ ಅರಮನೆಯ ಹೆಬ್ಬಾಗಿಲಲ್ಲಿ ಶರಣಾಗಮನಸೂಚಕವಾದ ಧ್ವಜವನ್ನೇರಿಸಿ, ಪೃಥ್ವಿಚಂದ್ರನನ್ನು ಎದುರುಗೊಂಡು ಬಹುಸಂಭ್ರಮದಿಂದ ಅರಮನೆಗೆ ಕರಕೊಂಡು ಹೋಗಿ ಆದರಸತ್ಕಾರವನ್ನು ಮಾಡಿದನು. ಅನಂತರ ಕೆಲವು ದಿನಗಳ ವರೆಗೆ ಪೃಥ್ವಿಚಂದ್ರನು ಅವನ ಆತಿಥ್ಯದಲ್ಲಿದ್ದು ಅವನನ್ನು ಸಂಗಡ ಕರಕೊಂಡು ಉಗ್ರಸೇನರಾಜನ ಸಮೀಪಕ್ಕೆ ಬಂದು ನಮಸ್ಕರಿಸಿ, ಮೇಘಪಿಂಗಲನು ಶರಣಾಗತನಾದ ವಿಷಯವನ್ನು ತಿಳಿಸಿದನು. ಅವನು ಸಹ ರಾಜನಿಗೆ ಬಹುಭಕ್ತಿಯಿಂದ ನಮಸ್ಕರಿಸಿ, "ನಾನು ತಮ್ಮ ಶರಣಾಗತನಾಗಿರುವೆನು. ಈ ಸೇವಕನನ್ನು ರಕ್ಷಿಸಬೇಕೆ"ಂದನು. ಇದನ್ನು ನೋಡಿ ಉಗ್ರಸೇನರಾಜನಿಗೆ ಅತ್ಯಾನಂದವಾಗಿ ಮೇಘಪಿಂಗಲನನ್ನು ತನ್ನ ಮಾಂಡಲಿಕ ರಾಜನನ್ನಾಗಿ ಮಾಡಿ, ತನಗೆ ಬಂದ ಅಮೂಲ್ಯವಾದ ವಸ್ತುಗಳಲ್ಲಿ ಅರ್ಧಾಂಶವನ್ನು ಮೇಘಪಿಂಗಲನಿಗೂ ಉಳಿದ ಅರ್ಧಾಂಶವನ್ನು ವೃಷಭಸೇನೆಗೂ ಕೊಡುವಂತೆ ಆಜ್ಞಾಪಿಸಿದನು. ಒಂದು ದಿನ ರಾಜನಿಗೆ ಕೈಕಾಣಿಕೆಯಾಗಿ ಎರಡು ಜರಿಯ ಶ್ಯಾಲುಗಳು ಬಂದಿದ್ದವು. ಅವೆರಡೂ ಒಂದೇ ಸಮಾನವಾದ್ದವು. ಅವನ್ನೂ ಕೂಡ ಒಂದನ್ನು ಮೇಘಪಿಂಗಲನಿಗೂ ಮತ್ತೊಂದನ್ನು ವೃಷಭಸೇನೆಗೂ ಅದರಲ್ಲಿ ಅದರವರ ಹೆಸರನ್ನು ಬರೆಯಿಸಿ ಅವರಿಗೆ ಕೊಟ್ಟನು. ಅನಂತರೊಂದು ದಿನ ಮೇಘಪಿಂಗಲನ ಪತ್ನಿಯು ಅವನ ಶ್ಯಾಲನ್ನು ಹೊದ್ದುಕೊಂಡು ಕಾರ್ಯಾಂತರದಿಂದ ರೂಪವತೀ ದಾಸಿಯಿದ್ದಲ್ಲಿಗೆ ಹೋದಳು. ಅಲ್ಲಿ ದೈವವಶಾತ್ ಶ್ಯಾಲುಗಳ ಬದಲಾವಣೆಯಾಗಿ ವೃಷಭಸೇನೆಯ ಶ್ಯಾಲನ್ನು ತಾನು ಹೊದ್ದುಕೊಂಡು ತನ್ನ ಶಾಲನ್ನು ಅಲ್ಲಿಯೇ ಬಿಟ್ಟು

ತನ್ನ ಮನೆಗೆ ಹೊರಟು ಹೋದಳು. ಈ ವಿಷಯವು ಮೇಘಪಿಗಂಲನಿಗೆ ತಿಳಿಯದಿದ್ದಕಾರಣ ಒಂದು ದಿವಸ ರಾಜಸಭೆಗೆ ಹೋಗುವಾಗ ವೃಷಭ ಸೇನೆಯು ಶಾಲನ್ನು ತಾನು ಹೊದ್ದುಕೊಂಡು ಹೋದನು. ಆಗ ರಾಜನು ಕೆಲವು ಸಮಯದನಂತರ ಆ ಶಾಲಿನಲ್ಲಿರುವ ವೃಷಭಸೇನೆಯ ಹೆಸರನ್ನು ನೋಡಿ ಬಹಳ ಕ್ರೋಧಾವಿಷ್ಟನಾಗಿ ಕ್ರೂರದೃಷ್ಟಿಯಿಂದ ಮೇಘಪಿಂಗಲ ನನ್ನೇ ನೋಡುತ್ತಿದ್ದನು. ಆಗ ಅವನು ಭಯಭೀತನಾಗಿ ರಾಜಸಭೆಯಿಂದ ಓಡಿಹೋದನು. ಇದನ್ನು ನೋಡಿ ರಾಜನು ಮತ್ತಷ್ಟು ಕೋಪಾಧಿಕ್ಯ ದಿಂದ ಏನೊಂದೂ ವಿಚಾರಿಸದೆ, ವೃಷಭಸೇನೆಯನ್ನು ಕಟ್ಟಿ ಕೂಡಲೇ ಸಮುದ್ರದಲ್ಲಿ ಹಾಕುವಂತೆ ಚಾಕರರಿಗೆ ಆಜ್ಞಾಪಿಸಿದನು. ಈ ವಿಷಯ ವನ್ನು ಕೇಳಿ ರಾಣಿಯು ಅತಿಖಿನ್ನಳಾಗಿ, ದು:ಖಾತಿಶಯದಿಂದ ಅವಳ ಹೃದಯವು ಶತಶ: ವಿದೀರ್ಣವಾಯಿತು. ಪರಂತು, ತನ್ನ ನಿಷ್ಕಪಟತನ ವನ್ನು ಸೂಚಿಸಿ, ರಾಜನೊಡನೆ ಪ್ರಾರ್ಥಿಸಿಕೊಂಡರೂ ಏನೂ ಫಲಕಾರಿ ಯಾಗದೆ ಅವಳನ್ನು ಹೊರಡಿಸಿದನು. ಆಗ ಆಕೆಯೂ ನಿರ್ಭಯಳಾಗಿ "ಈಗ ನನಗೆ ಪ್ರಾಪ್ತವಾದ ಉಪಸರ್ಗವು ನಿಷ್ಕಲಂಕ ರೀತಿಯಿಂದ ನಿವಾ ರಣೆಯಾದರೆ ನಾನು ಅರ್ಜಿಕಾ ದೀಕ್ಷೆಯನ್ನು ಗ್ರಹಣೆ ಮಾಡಿ ತಪಶ್ಚರ್ಯ ದಿಂದಿರುವೆನು" ಎಂದು ಪ್ರತಿಜ್ಞೆ ಮಾಡಿ ಕಿಂಕರರೊಡನೆ ಸಮುದ್ರದ ಸಮೀಪಕ್ಕೆ ಹೋಗಿ, ಅವರು ರಾಜಾಜ್ಞೆಯಂತೆ ವೃಷಭಸೇನೆಯನ್ನು ಸಮುದ್ರಕ್ಕೆ ಹಾಕಲು ಅವಳ ಶೀಲ ಪ್ರಭಾವದಿಂದ ಜಲದೇವತೆಗಳು ಪ್ರತ್ಯಕ್ಷವಾಗಿ ಬಂದು ಅವಳನ್ನೆತ್ತಿ ಒಂದು ಸಿಂಹಾಸನದಲ್ಲಿ ವಿರಾಜಮಾನ ಮಾಡಿ, ಅವಳ ಉಭಯ ಪಾರ್ಶ್ವದಲ್ಲಿ ದೇವತೆಗಳು ಚಾಮರವನ್ನು ಬೀಸ ಲಾರಂಭಿಸಿದರು. ಆಗ ಆಕೆಯ ಶೀಲ ಮಹಿಮೆಯನ್ನು ನೋಡಿ ಎಲ್ಲಾ ಜನರು ಅವಳನ್ನು ಸ್ತುತಿಸಿದರು. ಆಗ ಈ ವಾರ್ತೆಯು ರಾಜನಿಗೆ ಸಹ ತಿಳಿದು ಇದನ್ನು ನೋಡುವುದಕ್ಕೋಸ್ಕರ ಅನೇಕ ಪ್ರಜೆಗಳೊಡನೆ ಅಲ್ಲಿಗೆ ಬಂದು, ತನ್ನ ವಿಚಾರಶೂನ್ಯತೆಯನ್ನು ಧಿಃಕ್ಕರಿಸಿ, ಪಶ್ಚಾತ್ತಾಪಪಟ್ಟು ವೃಷಭಸೇನೆಯನ್ನು ಹಿಂತಿರುಗಿ ಅರಮನೆಗೆ ಬರುವಂತೆ ಪ್ರಾರ್ಥಿಸಿದನು. ಆಗ ಆಕೆಯನ್ನು ಅತಿವೈಭವದಿಂದ ಕರಕೊಂಡು ಬರುವಾಗ ಅರಣ್ಯದಲ್ಲಿ

ಗುಣಧರರೆಂಬ ಅವಧಿಜ್ಞಾನಸಂಪನ್ನರಾದ ಮುನಿಗಳ ದರ್ಶನವಾಗಿ ಅವರ ವಂದನೆಗೋಸ್ಕರ ಎಲ್ಲರೂ ಅವರಿದ್ದಲ್ಲಿಗೆ ಹೋಗಿ ರಾಜನು ಮೊದಲಾಗಿ ಎಲ್ಲರೂ ಅವರನ್ನ ಭಕ್ತಿಪುರಸ್ಸರವಾಗಿ ನಮಸ್ಕರಿಸಿ, ವೃಷಭಸೇನೆಗೆ ತನ್ನ ಪೂರ್ವಜನ್ಮದ ವೃತ್ತಾಂತವನ್ನು ಕೇಳಬೇಕೆಂಬ ಇಚ್ಛೆಯುಂಟಾಗಿ ಮುನಿಗಳೊಡನೆ ತನ್ನ ಭವಾಂತರವನ್ನು ನಿರೂಪಿಸಬೇಕೆಂದು ಅರಿಕೆಮಾಡಿಕೊಂಡಳು. ಆಗ ಮುನಿಗಳು "ನೀನು ಪೂರ್ವಭವದಲ್ಲಿ ಇದೇ ನಗರದಲ್ಲಿ ನಾಗಶ್ರೀಯೆಂಬ ಬ್ರಾಹ್ಮಣಕನ್ನಿಕೆಯಾಗಿದ್ದು ಅರಮನೆಯ ದೇವಾಲಯದಲ್ಲಿ ಕಸಗೂಡಿಸುವ ಕೆಲಸವನ್ನು ಮಾಡಿಕೊಂಡಿದ್ದಿ, ಒಂದು ದಿನ ಸಾಯಂಕಾಲದಲ್ಲಿ ಆ ಜಿನಾಲಯದ ಪ್ರಾಕಾರದೊಳಗಿನ ಏಕಾಂತಸ್ಥಳದಲ್ಲಿ ಓರ್ವ ಮುನಿದತ್ತರೆಂಬ ಮುನಿಗಳು ಧ್ಯಾನವನ್ನು ಮಾಡುತ್ತಿದ್ದರು. ನೀನವರನ್ನು ನೋಡಿ, "ಮುನಿಗಳೇ! ನೀವು ಇಲ್ಲಿಂದ ಬೇರೆಕಡೆಗೆ ಹೋಗಿರಿ. ಈಗ ರಾಜನು ಬರುತ್ತಾನೆ. ನನಗೆ ಕಸಗೂಡಿಸಬೇಕು." ಇಂತೆಂದು ಹೇಳಿದಿ. ಪರಂತು ಮುನಿಗಳು ಧ್ಯಾನಾಸಕ್ತರಾಗಿದ್ದುದರಿಂದ ಅವರೇನೂ ಉತ್ತರವನ್ನೀಯಲಿಲ್ಲ. ಇದನ್ನು ನೋಡಿ ನೀನು ಬಹಳ ಆಕ್ರೋಶದಿಂದ ಕಸವನ್ನು ಗುಡಿಸಿ ಆ ಮುನಿಗಳ ಮೇಲೆ ಹಾಕಿ ಅವರಿಗೆ ಭಯಂಕರವಾದ ಉಪಸರ್ಗವನ್ನುಂಟುಮಾಡಿದಿ. ಆದರೂ ಅವರು ತನ್ನ ಧ್ಯಾನದಿಂದ ಸ್ವಲ್ಪವೂ ಚಲಾಯಮಾನರಾಗಲಿಲ್ಲ. ಮರುದಿವಸ ರಾಜನು ದೇವಾಲಯಕ್ಕೆ ಬಂದಾಗ ಈ ಕಸದ ರಾಶಿಯಿಂದ ಮುಳುಗಿರುವ ಮುನಿಗಳನ್ನು ಕಂಡು ಅವರಿಗುಂಟಾದ ಉಪಸರ್ಗವನ್ನು ನಿವಾರಿಸಿದನು. ಆನಂತರ ರಾಜನು ಹೀಗಾಗಲು ಕಾರಣವೇನೆಂದು ವಿಚಾರಿಸಲು, ನಿನ್ನಿಂದಾದುದೆಂದು ತಿಳಿದು ನಿನ್ನನ್ನು ಆ ಕೆಲಸದಿಂದ ನಿವೃತ್ತಿಪಡಿಸಿದನು. ಆಗ ನಿನಗೆ ಬಹಳ ಪಶ್ಚಾತ್ತಾಪವುಂಟಾಗಿ ಆ ಮುನಿಗಳ ದುಃಖವನ್ನು ನಿವಾರಿಸಿ, ಸೇವೆಶುಶ್ರೂಷಾದಿಗಳನ್ನು ಮಾಡುತ್ತಾ ಅವರಿಗೆ ಔಷಧಿದಾನವನ್ನು ಮಾಡಿದೆ. ಆ ದಾನದ ಮಹಿಮೆಯಿಂದ ನೀನು ಮರಣವನ್ನು ಹೊಂದಿ ಇದೇ ನಗರದಲ್ಲಿ ಧನಪತಿ ಶ್ರೇಷ್ಠಿಯ ಪುತ್ರಿಯಾಗಿ ಜನಿಸಿದೆ. ನಿನಗೆ ಈಗ ಸರ್ವೌಷಧಿ ಫಲವು ಪ್ರಾಪ್ತವಾಗಿದೆ, ನೀನು ಪೂರ್ವಜನ್ಮದಲ್ಲಿ ಕಸವನ್ನು ಗುಡಿಸಿ ಮುನಿಗಳ

ಮೇಲೆ ರಾಶಿ ಮಾಡಿದರಿಂದ, ಈ ಜನ್ಮದಲ್ಲಿ ನೀನು ಶುದ್ಧಾಚರಣೆಯವಳಾದರೂ ನಿನಗೆ ಕಲಂಕವುಂಟಾಯಿತು" ಇಂತೆಂದರು. ಈ ಪ್ರಕಾರವಾದ ತನ್ನ ಪೂರ್ವಜನ್ಮದ ಚರಿತ್ರೆಯನ್ನು ಕೇಳುತ್ತಲೇ ಮೊದಲೇ ಸಂಸಾರದಿಂದ ವಿರಕ್ತಳಾದ ವೃಷಭಸೇನೆಯು ಮತ್ತಷ್ಟು ವೈರಾಗ್ಯಸಂಪನ್ನಳಾಗಿ ಸರ್ವ ಸಂಗವನ್ನು ಪರಿತ್ಯಜಿಸಿ, ಆ ಮುನಿಗಳ ಸಮೀಪದಲ್ಲಿ ಅರ್ಜಿಕಾದೀಕ್ಷೆಯನ್ನು ಸ್ವೀಕರಿಸಿ ಘೋರವಾದ ತಪಸ್ಸನ್ನು ಮಾಡಿ ಸಮಾಧಿಮರಣವನ್ನು ಹೊಂದಿ ಆಕೆಯು ಸ್ವರ್ಗದಲ್ಲಿ ಮಹರ್ಧಿಕದೇವನಾಗಿ ಜನಿಸಿದಳು.

ಈ ಕಥೆಯ ಸಾರಾಂಶವೇನಂದರೆ, ವೃಷಭಸೇನೆಯು ಪೂರ್ವಜನ್ಮದಲ್ಲಿ ಮಾಡಿದ ಔಷಧದಾನದ ಫಲದಿಂದ ಈ ಜನ್ಮದಲ್ಲಿ ಸರ್ವರೋಗವನ್ನು ನಿವಾರಿಸಲು ಸಮರ್ಥವಾದ ಸರ್ವೌಷಧಿಫಲವು ಆಕೆಗೆ ಪ್ರಾಪ್ತವಾಯಿತು. ಆದುದರಿಂದ ಸರ್ವರೂ ಔಷಧದಾನವನ್ನು ಮಾಡಬೇಕೆಂದೂ ಉಗ್ರಸೇನ ರಾಜನಂತೆ ಸಾರಾಸಾರವನ್ನು ವಿಚಾರ ಮಾಡದೆ ಸಹಸಾ ಯಾವ ಕಾರ್ಯವನ್ನೂ ಮಾಡಬಾರದೆಂದೂ ಶೀಲಪ್ರಭಾವದಿಂದ ದೇವತೆಗಳೂ ಸಹಾಯರಾಗುತ್ತಾರೆಂಬೀ ವಿಷಯವನ್ನೂ ಜ್ಞಾಪಕದಲ್ಲಿಡಬೇಕಾಗಿದೆ.

## ಕೌಂಡೇಶಮುನಿಯ ಕಥೆ.

ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಪೂರ್ವದಲ್ಲಿ ಕುರುಮರಿಯೆಂಬ ಗ್ರಾಮವಿತ್ತು. ಅಲ್ಲಿ ಗೋವಿಂದನೆಂಬೊಬ್ಬ ಗೊಲ್ಲನು ಇರುತ್ತಿದ್ದನು. ಅವನೊಂದು ದಿನ ಅರಣ್ಯದಲ್ಲಿ ಸಂಚರಿಸುತ್ತಿರುವಾಗ ಒಂದು ಮರದ ಪೊಟ್ರೆಯಲ್ಲಿ ಅವನಿಗೆ ಒಂದು ಉತ್ತಮವಾದ ವಾಲೆಗ್ರಂಥವು ಸಿಕ್ಕಿತು. ಅವನು ಅದನ್ನು ಪ್ರತಿನಿತ್ಯವೂ ಬಹುಭಕ್ತಿಯಿಂದ ಪೂಜಿಸುತ್ತಿದ್ದು, ಅದನ್ನು ಬಹಳ ವಿಶ್ವಾಸದಿಂದ ಪದ್ಮನಂದಿಗಳೆಂಬ ಮುನಿಗಳಿಗೆ ಶಾಸ್ತ್ರದಾನವಾಗಿ ಅರ್ಪಿಸಿದನು. ಆಗ ಅಲ್ಲಿರುವ ಮುನಿಗಳೆಲ್ಲಾ ಅದನ್ನು ಭಕ್ತಿಯಿಂದ ಪೂಜಿಸಿ ಪ್ರತಿನಿತ್ಯವೂ ಸ್ವಾಧ್ಯಾಯವನ್ನು ಮಾಡುತ್ತಿದ್ದರು. ಈ ರೀತಿಯಾಗಿ ಕೆಲವು ಕಾಲ ಕಳೆಯುತ್ತಿರಲು ಆ ಮುನಿಗಳು ಆ ಗ್ರಂಥವನ್ನು ಅಲ್ಲಿರುವ ಅದೇ ಮರದ ಪೊಟ್ರೆಯಲ್ಲಿರಿಸಿ ದೇಶಾಂತರಕ್ಕೆ ಹೊರಟು ಹೋದರು. ಆಗ ಗೋವಿಂದನು ಈ ಎಲ್ಲಾ ಕೃತ್ಯಗಳನ್ನು ನೋಡಿ ತಾನೂ

ಅವರಂತೆ ವರ್ತಿಸಬೇಕೆಂಬ ಇಚ್ಛೆ ಇದ್ದಿತ್ತಾದರೂ ಅವನು ಅಶಿಕ್ಷಿತನಾದ ಕಾರಣ ಅದರ ಸ್ವಾಧ್ಯಾಯವನ್ನು ಮಾಡಲಾರದೆ ಪ್ರತಿನಿತ್ಯವೂ ಆ ಗ್ರಂಥ ವಿರುವ ಮರವನ್ನೆ ಭಕ್ತಿಯಿಂದ ಪೂಜಿಸುತ್ತಿದ್ದನು. ಮುಂದೆ ಕೆಲವು ದಿವಸದನಂತರ ಅದೇ ನಿಧಾನದಿಂದ ಮರಣವನ್ನು ಹೊಂದಿ ಅಲ್ಲಿಯೇ ಗ್ರಾಮಾಧಿಪತಿಯ ಕೌಂಡೇಶನೆಂಬ ಪುತ್ರನಾಗಿ ಜನಿಸಿ, ಪೂರ್ವದಲ್ಲಿ ತಾನು ಶಾಸ್ತ್ರದಾನವನ್ನು ಮಾಡಿರುವ ಪದ್ಮನಂದಿ ಮುನಿಗಳ ದರ್ಶನ ಲಾಭದಿಂದ ಜಾತಿಸ್ಮರಣೆಯುಂಟಾಗಿ ಸಂಸಾರದಿಂದ ವಿರಕ್ತನಾಗಿ ಮುನಿ ದೀಕ್ಷೆಯನ್ನು ಸ್ವೀಕರಿಸಿ, ಉತ್ತಮವಾದ ತಪಸ್ಸನ್ನು ಮಾಡಿ ಶಾಸ್ತ್ರದಾನದ ಫಲದಿಂದ ಸರ್ವಶಾಸ್ತ್ರಸಂಪನ್ನನಾಗಿ ಕ್ರಮೇಣ ಕೇವಲಜ್ಞಾನಭಾಗಿಯಾದನು.

## ಅಭಯದಾನದಲ್ಲಿ ಪ್ರಸಿದ್ಧವಾದ ಶೂಕರನ ಕಥೆ.

ಪೂರ್ವದಲ್ಲಿ ಈ ಜಂಬೂದ್ವೀಪದ ಭರತಕ್ಷೇತ್ರದೊಳಗಿನ ಮಾಲವ ದೇಶದಲ್ಲಿ ಘಟವೆಂಬ ಗ್ರಾಮವಿತ್ತು. ಅಲ್ಲಿ ದೇವಿಲನೆಂಬೊಬ್ಬ ಕುಂಬಾರನೂ ಧಮ್ಮಿಲ್ಲನೆಂಬೊಬ್ಬ ಕ್ಷೌರಿಕನೂ ಇರುತ್ತಿದ್ದರು ಅವರೀರ್ವರೂ ಸೇರಿ ಪ್ರಯಾಣಸ್ಥರ ನಿವಾಸಕ್ಕೋಸ್ಕರ ಒಂದು ದೇವಾಲಯವನ್ನು ನಿರ್ಮಿಸಿದರು. ಹೀಗಿರಲು ಒಮ್ಮೆ ದೇವಿಲನು ಔರ್ವ ಮುನಿಗಳಿಗೆ ಅಲ್ಲಿರಲು ಸ್ಥಾನವನ್ನು ಕೊಟ್ಟನು. ಅನಂತರ ಧಮ್ಮಿಲ್ಲನು ಓರ್ವ ಮಿಥ್ಯಾದೃಷ್ಟಿ ಸನ್ಯಾಸಿಯನ್ನು ಅಲ್ಲಿಗೆ ಕರತಂದನು. ಆಗ ಅವರೀರ್ವರೂ ಅಲ್ಲಿರುವ ಮುನಿಗಳನ್ನು ಹೊರಡಿಸಿದರು. ಆಗ ಆ ಮುನಿಗಳು ಅಲ್ಲಿಂದ ಹೊರಟು ಹೋಗಿ ಒಂದು ಮರದ ಕೆಳಗೆ ಸೊಳ್ಳೆ ನೊಣ ಶೀತ ಮೊದಲಾದ ಬಾಧೆಗಳನ್ನು ಸಹನೆಮಾಡುತ್ತಾ ಶಾಂತರೀತಿಯಿಂದ ರಾತ್ರಿಯನ್ನೆಲ್ಲಾ ಅಲ್ಲಿ ಕಳೆದರು. ಪ್ರಾತಃಕಾಲ ಈ ವಿಷಯವು ದೇವಿಲನಿಗೆ ತಿಳಿದು ಧಮ್ಮಿಲ್ಲನ ಮೇಲೆ ಅತಿಶಯ ಕೋಪಗೊಂಡು ಪರಸ್ಪರವಾಗಿ ಈರ್ವರಿಗೂ ಕಲಹವಾಗಿ ಮರ್ಮಸ್ಥಾನಾಘಾತದಿಂದ ಸತ್ತು ವಿಂಧ್ಯಪರ್ವತದಲ್ಲಿ ಕಾಡುಹಂದಿಯಾಗಿಯೂ ಹುಲಿಯಾಗಿಯೂ ಹುಟ್ಟಿದರು. ಕರ್ಮಧರ್ಮಗಳ ಸಂಯೋಗದಿಂದ ಯಾವ ಗುಹೆಯಲ್ಲಿ ಆ ಕಾಡಹಂದಿಯು ವಾಸಿಸಿಕೊಂಡಿತ್ತೋ ಅದೇ

ಗುಹೆಗೆ ಒಂದಾನೊಂದು ಸಮಯದಲ್ಲಿ ಸಮಾಧಿಗುಪ್ತಿ ಮತ್ತು ತ್ರಿಗುಪ್ತಿಗಳೆಂಬ ಮುನಿಗಳೀರ್ವರೂ ವಿಹಾರ ಮಾಡುತ್ತಾ ಅಲ್ಲಿಗೆ ಬಂದಿಳಿದರು. ಆಗ ಈ ಕಾಡುಹಂದಿಗೆ ಅವರನ್ನು ನೋಡಿ ಜಾತಿಸ್ಮರಣೆಯುಂಟಾಗಿ ಹೆಚ್ಚಾದ ಭಕ್ತಿಯಿಂದ ಮುನಿಗಳಿಗೆ ನಮಸ್ಕಾರವನ್ನು ಮಾಡಿ ಅವರಿಂದ ಧರ್ಮೋಪದೇಶವನ್ನು ಕೇಳುತ್ತಿತ್ತು. ಮುನಿಗಳೂ ಪ್ರೇಮದಿಂದ ಅದಕ್ಕೆ ಶ್ರಾವಕಧರ್ಮವನ್ನುಪದೇಶಿಸಿದರು. ಅದನ್ನು ಕೇಳಿ ಅದು ಶುದ್ಧ ಪರಿಣಾಮದಿಂದ ಸರ್ವಪಾಪಕೃತ್ಯಗಳನ್ನು ಬಿಟ್ಟು ಶ್ರಾವಕ ವ್ರತವನ್ನು ಪಾಲಿಸುತ್ತಾ ಮುನಿಗಳ ಸಮೀಪದಲ್ಲಿಯೇ ಇರುತ್ತಿತ್ತು.

ಹೀಗಿರಲೊಂದು ದಿನ ಮನುಷ್ಯರ ವಾಸನೆಯು ಬಂದ ಕಾರಣ ಮುನಿಗಳನ್ನು ಭಕ್ಷಿಸಬೇಕೆಂಬ ಇಚ್ಛೆಯಿಂದ ಆ ದುರ್ಬುದ್ಧಿಯಾದ ವ್ಯಾಘ್ರವು ಅಲ್ಲಿಗೆ ಬಂತು. ಅದು ಗುಹೆಯ ಸಮೀಪಕ್ಕೆ ಬರುವುದನ್ನು ಹಂದಿಯು ನೋಡಿ ಮುನಿಗಳನ್ನು ಈ ಸಂಕಟದಿಂದ ರಕ್ಷಿಸಬೇಕೆಂದು ಗುಹೆಯ ದ್ವಾರದಲ್ಲಿ ಬಂದು ನಿಂತುಕೊಂಡಿತು. ಹಂದಿಯು ಗುಹೆಯ ಒಳಗೆ ಪ್ರವೇಶಿಸದಂತೆ ಮಾರ್ಗವನ್ನು ತಡೆದದೆಂದು ಹುಲಿಯು ಕೋಪಗೊಂಡು, ಹಂದಿಯ ಮೇಲೆ ಬಿದ್ದು ಕಾದಾಡಿತು. ಆಗ ಹಂದಿಯೂ ಭಯಪಡದೆ ಆ ಭಯಂಕರವಾದ ಹುಲಿಯೊಡನೆ ಬಹುಸಮಯದ ವರೆಗೆ ಕಾದಾಡಿ, ಎರಡಕ್ಕೂ ಬಹಳ ಗಾಯಗಳಾಗಿ ವೇದನೆಯಿಂದ ಮರಣ ಹೊಂದಿದವು. ಮರಣಸಮಯದಲ್ಲಿ ಮುನಿಗಳ ರಕ್ಷಣೆಯನ್ನು ಮಾಡಬೇಕೆಂಬ ಶುಭಭಾವನೆಯು ಹಂದಿಗಿದ್ದಕಾರಣ ಸೂಕರಪರ್ಯಾಯವನ್ನು ಹೊಂದಿದೆ. ದೇವಿಲನ ಜೀವನು ಸೌಧರ್ಮಸ್ವರ್ಗದಲ್ಲಿ ಮಹರ್ದ್ಧಿಕ ದೇವನಾಗಿ ಜನಿಸಿದನು. ವ್ಯಾಘ್ರಪರ್ಯಾಯವನ್ನು ಹೊಂದಿದ ಧಮ್ಮಿಲ್ಲನ ಜೀವನು ಅಂತ್ಯಸಮಯದಲ್ಲಿ ಮುನಿಭಕ್ಷಣೆಯನ್ನು ಮಾಡಬೇಕೆಂಬ ಕಾರಣದಿಂದ ತೀವ್ರದುಃಖವನ್ನು ಭೋಗಿಸುವುದಕ್ಕೋಸ್ಕರ ನರಕವನ್ನು ಹೊಂದಿದನು.

ಈ ಕಥೆಯ ಸಾರವೇನಂದರೆ ಶೂಕರಪರ್ಯಾಯವನ್ನು ಹೊಂದಿದ ದೇವಿಲನು ಮುನಿಗಳಿಗೆ ವಸತಿಕಾದಾನವನ್ನು ಮಾಡಿದ ಪುಣ್ಯಪ್ರಭಾವದಿಂದ ಮುಂದೆಯೂ ಶೂಕರಭವದಲ್ಲಿ ಮುನಿಗಳ ದರ್ಶನವಾಗಿ ಅವರಿಂದ ಧರ್ಮೋಪದೇಶವನ್ನು ಕೇಳಿ ಅಲ್ಲಿಯೂ ಮುನಿಗಳಿಗುಂಟಾದ ಭಯಂಕರವಾದ ಸಂಕಟವನ್ನು ಹೋಗಲಾಡಿಸಿದ ಕಾರಣ ಇದಕ್ಕೆ ಅಭಯದಾನದ ಫಲದಿಂದ ಉತ್ತಮಗತಿಯು ಪ್ರಾಪ್ತವಾಯಿತೆಂದು ಭಾವವು.

## ದೇವಪೂಜಾಫಲ ವರ್ಣನೆ.

ದೇವಾಧಿದೇವಚರಣೇ ಪರಿಚರಣಂ ಸರ್ವದುಃಖನಿರ್ಹರಣಂ ||
ಕಾಮದುಹಿ ಕಾಮದುಹಿನಿ ಪರಿಚಿನುಯಾದಾದೃತೋ ನಿತ್ಯಂ ||

**ಅನ್ವಯಾರ್ಥಃ**—ಕಾಮದುಹಿ— ಅಭೀಷ್ಟಫಲವನ್ನು ಕೊಡುವುದು **ಕಾಮದಾಹಿನಿ**—ಕಾಮವಿಕಾರವನ್ನು ನಾಶಮಾಡುವುದೂ, ಆದ ದೇವಾಧಿದೇವಚರಣೇ— ಅರ್ಹತ್ಪರಮೇಶ್ವರನ ಪಾದಗಳನ್ನು ಪರಿಚರಣಂ—ಪೂಜಿಸುವಿಕೆಯು ಸರ್ವದುಃಖನಿರ್ಹರಣಂ—ಸಮಸ್ತದುಃಖಗಳನ್ನು ನಾಶಮಾಡತಕ್ಕುದು 'ಅತಏವ'—ಆದಕಾರಣ ಆದೃತಃ—ಪ್ರೀತಿಪೂರ್ವಕವಾಗಿ ನಿತ್ಯಂ—ಯಾವಾಗಲೂ ಪರಿಚಿನುಯಾತ್—ಪೂಜಿಸಬೇಕು.

**ತಾತ್ಪರ್ಯಃ**—ಗೃಹಸ್ಥನ ಷಟ್ಕರ್ಮಗಳಲ್ಲಿ ದೇವಪೂಜೆಯು ಮೊದಲನೆಯದಾಗಿದೆ. ದೇವಾದಿಗಳಿಂದ ವಂದ್ಯನೂ ನಿರ್ದೋಷಿಯೂ ಸರ್ವಜ್ಞನೂ ಆದ ಪರಿಶುದ್ಧಪರಮಾತ್ಮನನ್ನು ಭಕ್ತಿಯಿಂದ ಉತ್ತಮವಾದ ಜಲ ಗಂಧಾಕ್ಷತೆ ಮೊದಲಾದ ಅಷ್ಟವಿಧದ್ರವ್ಯಗಳಿಂದ ಪೂಜಿಸುವುದಕ್ಕೆ ದೇವಪೂಜೆಯೆಂದು ಹೆಸರು. ಇದರಿಂದ ಸಮಸ್ತವಾದ ಸಂಸಾರ ದುಃಖಗಳ ನಾಶವೂ ಇಷ್ಟಸಿದ್ಧಿಯೂ ಕಾಮಕ್ರೋಧಮದಮಾತ್ಸರ್ಯಾದಿಗಳ ಆಭಾವವೂ ಉಂಟಾಗುವುವು, ಆದಕಾರಣ ಶ್ರಾವಕನು. ಪ್ರತಿನಿತ್ಯವೂ ಖ್ಯಾತಿಲಾಭಾದ್ಯಪೇಕ್ಷೆಗಳಿಲ್ಲದೆ ಭಕ್ತಿಯಿಂದ ದೇವಪೂಜೆಯನ್ನು ಮಾಡಬೇಕೆಂದಭಿಪ್ರಾಯವು,

## ಪೂಜಾತಿಶಯಫಲಭೋಕ್ತೃ ವರ್ಣನೆ.

**ಅರ್ಹಚ್ಚರಣಸಪರ್ಯಾಮಹಾನುಭಾವಂ ಮಹಾತ್ಮನಾಮವದತ್**
**ಭೇಕಃ ಪ್ರಮೋದಮತ್ತಃ ಕುಸುಮೇನೈಕೇನ ರಾಜಗೃಹೇ ||೧೨೦||**

**ಅನ್ವಯಾರ್ಥಃ**- ಅರ್ಹಚ್ಚರಣಸಪರ್ಯಾಮಹಾನುಭಾವಂ—ಭಗವಂತನ ಪಾದಪೂಜಾತಿಶಯವನ್ನು ರಾಜಗೃಹೇ—ರಾಜಗೃಹನಗರದಲ್ಲಿ ಏಕೇನ—ಒಂದಾದ ಕುಸುಮೇನ—ಪುಷ್ಪದಿಂದ ಪ್ರಮೋದಮತ್ತ:-ಸಂತೋಷದಿಂದ ಮದಿಸಿದ ಭೇಕಃ— ಕಪ್ಪೆಯು ಮಹಾತ್ಮನಾಂ—ಮಹಾಪುರುಷರಿಗೆ ಅವದತ್—ಹೇಳಿತು.

**ತಾತ್ಪರ್ಯಃ**—ರಾಜಗೃಹನಗರದಲ್ಲಿ ಒಂದು ಕಪ್ಪೆಯು ಭಗವಂತನಿಗೆ ಪುಷ್ಪಾರ್ಚನೆಯನ್ನು ಮಾಡಬೇಕೆಂಬ ಅಭಿಲಾಷೆಯಿಂದ ಪೂಜಾತಿಶಯವನ್ನು ಪ್ರಕಟಿಸಿತು.

## ಪೂಜಾಫಲಾತಿಶಯವನ್ನು ಹೊಂದಿದ ಮಂಡೂಕನ ಕಥೆ.

ಈ ಜಂಬೂದ್ವೀಪದ ಮಗಧದೇಶದಲ್ಲಿರುವ ರಾಜಗೃಹನಗರದಲ್ಲಿ ಕ್ಷಾಯಿಕಸಮ್ಯಗ್ದೃಷ್ಟಿಯಾದ ಶ್ರೇಣಿಕಮಹಾರಾಜನು ರಾಜ್ಯವನ್ನಾಳುತ್ತಿದ್ದನು. ಅದೇ ನಗರದಲ್ಲಿ ನಾಗದತ್ತನೆಂಬೊಬ್ಬ ಶ್ರೇಷ್ಠಿಯೂ ಆತನಿಗೆ ಅತಿಚಲ್ವೆಯಾದ ಭವದತ್ತೆಯೆಂಬ ಭಾರ್ಯೆಯೂ ಇರುತ್ತಿದ್ದರು. ಆ ಶ್ರೇಷ್ಠಿಯೂ ಅತ್ಯಂತ ಕಪಟಾಚರಣೆಯಾಗಿದ್ದ ಕಾರಣ ಕೊನೆಗೆ ಆವನು ಆರ್ತಧ್ಯಾನದಿಂದ ಮರಣವನ್ನು ಹೊಂದಿ, ಅಲ್ಲಿಯೇ ತನ್ನ ಗೃಹಾಂಗಣದ ಕೂಪದಲ್ಲಿ ಮಂಡೂಕ [ಕಪ್ಪೆ] ನಾಗಿ ಜನ್ಮಿಸಿದನು. ಆ ಮಂಡೂಕವು ಪ್ರತಿನಿತ್ಯವೂ ಅಲ್ಲಿಗೆ ನೀರು ತುಂಬಿಸುವರೇ ಬರುತ್ತಿರುವ ಭವದತ್ತೆಯನ್ನು ನೋಡಿ ಅದಕ್ಕೆ ಜಾತಿಸ್ಮರಣೆಯುಂಟಾಗಿ ಅವಳ ಸಮೀಪಕ್ಕೆ ಬಂದು ಪೂರ್ವದ ಮೋಹದಿಂದ ಅವಳ ಶರೀರದ ಮೇಲೆ ಹಾರಿಬರುತ್ತಿತ್ತು. ಅವಳು ಅದನ್ನು ದೂರಮಾಡಿದರೂ ಮತ್ತಷ್ಟು ಶಬ್ದ ಮಾಡುತ್ತಾ ಸಮೀಪಕ್ಕೆ ಬರುತ್ತಿತ್ತು. ಭವದತ್ತೆಯು ಈ ಕ್ರಮವನ್ನು ಬಹಳ ಹೊತ್ತಿನವರೆಗೆ ನೋಡುತ್ತಾ, "ಈ ಮಂಡೂಕಕ್ಕೆ ಎನ್ನಲ್ಲಿ ಇಷ್ಟೇಕೆ ಮೋಹ? ಇದು ಪೂರ್ವಜನ್ಮದಲ್ಲಿ ತನ್ನ ಆಪ್ತಮಿತ್ರನಾಗಿದ್ದಿರಬಹುದು" ಎಂದು ಆಲೋಚಿಸಿ, ಅವಧಿಜ್ಞಾನಿಗಳಾದ ಸುವ್ರತಮುನಿಗಳ ಸಮೀಪಕ್ಕೆ ಹೋಗಿ ಈ ವಿಷಯವನ್ನು ಕೇಳಲು, "ಈ ಕಪ್ಪೆಯು ನಿನ್ನ ಪೂರ್ವಜನ್ಮದ ಪತಿಯು" ಇಂತೆಂದರು. ಆಗ ಆಕೆಯು ಇದನ್ನು ಕೇಳಿ ಅದಕ್ಕೆ ಬಹಳ ಗೌರವದಿಂದ ಸತ್ಕಾರ ಮಾಡಿ ಮನೆಗೆ ತಂದು ಪ್ರೀತಿಯಿಂದ ಸಾಕುತ್ತಿದ್ದಳು.

ಹೀಗಿರಲೊಂದು ದಿನ ವಿಪುಲಾಚಲಪರ್ವತಕ್ಕೆ ಶ್ರೀವರ್ಧಮಾನಸ್ವಾಮಿಯ ಸಮವಸರಣದ ಆಗಮನವಾಗಿದೆಯೆಂಬ ವಾರ್ತೆಯನ್ನು ಕೇಳಿ ಶ್ರೇಣಿಕಮಹಾರಾಜನು ತನ್ನ ಪುರಪರಿವಾರಜನಗಳೊಡನೆ ಕೂಡಿದವನಾಗಿ ಸ್ವಾಮಿಯ ದರ್ಶನಾರ್ಥವಾಗಿ ಹೊರಟನು.

ಇತ್ತ ಈ ವಾರ್ತೆಯನ್ನು ಕೇಳಿ ಶ್ರೇಷ್ಠಿನಿಯಾದ ಭವದತ್ತೆಯೂ ಭಗವಂತನ ದರ್ಶನನಿಮಿತ್ತವಾಗಿ ಹೊರಡಲುದ್ಯುಕ್ತಳಾದಳು. ಇದನ್ನು ನೋಡಿ ಕಪ್ಪೆಯೂ ಕೂಡ ಸಂತೋಷದಿಂದ ತಾನೂ ಸ್ವಾಮಿಯ ದರ್ಶನಮಾಡಬೇಕೆಂಬ ಇಚ್ಛೆಯಿಂದ ಪೂಜಾನಿಮಿತ್ತವಾಗಿ ಬಾವಿಯಿಂದ ಒಂದು ಕಮಲ

ವನ್ನು ಕಿತ್ತು ಬಾಯಿಯಲ್ಲಿ ಕಚ್ಚಿಕೊಂಡು ಜನಸಮೂಹವೆಲ್ಲಾ ಹೋಗುವ ಕಡೆಗೆ ತಾನೂ ಹೊರಟುಹೋಯಿತು. ಹೀಗೆ ಹೋಗುತ್ತಿರುವಾಗ ಆ ಭಗವಂತನ ಪೂಜೆಯನ್ನು ಮಾಡಬೇಕೆಂಬ ಲವಲವಿಕೆಯು ಅದಕ್ಕೆ ಅತ್ಯಧಿಕವಾಗಿದ್ದುದರಿಂದ ಬೇಗಬೇಗನೆ ಹಾರುತ್ತಾ ಹೋಗುತ್ತಿರುವಾಗ ದುರ್ದೈವದಿಂದ ದಾರಿಯಲ್ಲಿ ಜೋರಾಗಿ ಬರುತ್ತಿರುವ ಶ್ರೇಣಿಕಮಹಾರಾಜನ ಆ-ನೆಯ ಕಾಲಿನ ಬುಡಕ್ಕೆ ಸಿಕ್ಕಿಬಿದ್ದು ಮರಣವನ್ನು ಹೊಂದಿತು. ಅಂತ್ಯಸಮಯದಲ್ಲಿ ಜಿನಪೂಜೆಯ ಬಯಕೆಯಿಂದುಂಟಾದ ಪುಣ್ಯದ ಪ್ರಭಾವದಿಂದ ಆ ಮಂಡೂಕನ ಜೀವನು ಸೌಧರ್ಮಸ್ವರ್ಗದಲ್ಲಿ ಮಹರ್ದ್ಧಿಕಸಂಪನ್ನನೂ ಅಂತರ್ಮುಹೂರ್ತದೊಳಗೆ ಯೌವನಸ್ಥನೂ ಸರ್ವಾಭರಣಭೂಷಿತನೂ ದಿವ್ಯದೇಹಧಾರಿಯೂ ಆದ ದೇವನಾಗಿ ಜನಿಸಿದನು. ಕೂಡಲೇ ಅವಧಿಜ್ಞಾನದಿಂದ ತನ್ನ ಪೂರ್ವಭವದ ವೃತ್ತಾಂತವನ್ನು ತಿಳಿದು ಇಂತಹ ಉತ್ತಮ ಪರ್ಯಾಯವನ್ನು ಹೊಂದುವರೇ ಭೇಕಪರ್ಯಾಯವೇ ಕಾರಣವಾದುದರಿಂದ ಅದರ ಉಪಕಾರಸ್ಮರಣೆಗೋಸ್ಕರ ಆ ದೇವನು ತನ್ನ ಕಿರೀಟದಲ್ಲಿ ಕಪ್ಪೆಯ ಚಿಹ್ನೆಯನ್ನು ಧರಿಸಿಕೊಂಡು ಶ್ರೀವರ್ಧಮಾನ ಸ್ವಾಮಿಯ ಸಮವಸರಣಸಭೆಗೆ ಬಂದನು.

ಇತ್ತ ಶ್ರೇಣಿಕಮಹಾರಾಜನು ಸಮವಸರಣಕ್ಕೆ ಬಂದು ತ್ರಿಪ್ರದಕ್ಷಿಣೆಗೊಂಡು, ಬಹುಭಕ್ತಿಯಿಂದ ನಮಸ್ಕಾರವನ್ನೂ ಅಷ್ಟವಿಧಾರ್ಚನಾ ಪೂಜೆಯನ್ನೂ, ಸ್ತೋತ್ರವನ್ನೂ ಮಾಡಿ, ತಾನು ಮನುಷ್ಯಕೋಷ್ಠದಲ್ಲಿ ಕುಳಿತುಕೊಂಡು ಭಗವಂತನ ದಿವ್ಯಧ್ವನಿಯ ಮೂಲಕವಾಗಿ ಧರ್ಮಶ್ರವಣವನ್ನು ಮಾಡುತ್ತಿದ್ದನು.

ಹೀಗಿರಲು ಶ್ರೇಣಿಕರಾಜನು ಭೇಕಚಿಹ್ನಾಂಕಿತವಾದ ಮುಕುಟವನ್ನು ಧರಿಸಿರುವ ದೇವನನ್ನು ನೋಡಿ, ಗೌತಮಗಣಧರರನ್ನು ಕುರಿತು, ಸ್ವಾಮಿನ್! ಈ ದೇವನು ಯಾವ ಪುಣ್ಯಪ್ರಭಾವದಿಂದ ಮಹರ್ದ್ಧಿಕನಾಗಿರುವನು? ಇವನ ಮುಕುಟದಲ್ಲಿ ಭೇಕಚಿಹ್ನಾಂಕಿತವಾಗಿರಲು ಕಾರಣ ವೇನು? ತಾವ ದನ್ನು ನಿರೂಪಿಸಬೇಕೆ''ಂದು ಪ್ರಾರ್ಥಿಸಿಕೊಂಡನು. ಆಗ ಗಣಧರರು ಈ ವೃತ್ತಾಂತವನ್ನೆಲ್ಲಾ ಅವನಿಗೆ ತಿಳಿಸಿ, ''ಇದೆಲ್ಲವೂ ಪೂಜಾತಿಶಯದ ಫಲವೆ''ಂದರು. ಇದನ್ನು ಕೇಳಿ ಶ್ರೇಣಿಕನೂ ಅಲ್ಲಿರುವ ಭವ್ಯರೆಲ್ಲರೂ ಅತ್ಯಂತ ಪೂಜಾನುರಾಗಿಗಳಾದರು.

ಈ ಕಥೆಯಿಂದ ಗ್ರಾಹ್ಯವಾದ ವಿಷಯವೇನಂದರೆ, ತಿರ್ಯಂಚ ಪ್ರಾಣಿಯಾದ ಕಪ್ಪೆಯೂ ಕೂಡ ಭಗವಂತನ ಪೂಜಾಭಿಲಾಷೆಯಿಂದ ಇಂತಹ ಉತ್ತಮವಾದ ಸೌಭಾಗ್ಯವನ್ನು ಹೊಂದುವಾಗ, ಯಾವಾಗಲೂ ಜಿನಪೂಜೆಯನ್ನು ಮಾಡುವವರಿಗೆ ಎಂತಹ ಉತ್ತಮಸ್ಥಾನವು ದೊರೆಯಲಾರದು? ಸಾಕ್ಷಾತ್ ಮೋಕ್ಷವೇ ಪ್ರಾಪ್ತಿಯಾಗುವುದೆಂದು ಭಾವವು. ಆದಕಾರಣ ಎಲ್ಲರೂ ಜಿನ ಪೂಜಾನುರಾಗಿಗಳಾಗಬೇಕೆಂದು ಮುಖ್ಯಾಭಿಪ್ರಾಯವು.

**ವೈಯಾವೃತ್ಯಶಿಕ್ಷಾವ್ರತಾತಿಚಾರ ವರ್ಣನೆ.**

**ಹರಿತಪಿಧಾನನಿಧಾನೇ ಹ್ಯನಾದರಾಸ್ಮರಣಮತ್ಸರತ್ವಾನಿ ||**
**ವೈಯ್ಯಾವೃತ್ಯಸ್ಯೈತೇ ವ್ಯತಿಕ್ರಮಾಃ ಪಂಚ ಕಥ್ಯಂತೇ ||೧೨೧||**

**ಅನ್ವಯಾರ್ಥಃ**—ಹರಿತಪಿಧಾನನಿಧಾನೇ—ಹರಿತಪಿಧಾನ—ದಾನ ಕೊಡುವ ವಸ್ತುಗಳನ್ನು ಹಸರು ಎಲೆಯಿಂದ ಮುಚ್ಚುವಿಕೆಯು, ಹರಿತನಿಧಾನ -- ಹಸಿಯೆಲೆಯಲ್ಲಿರಿಸುವಿಕೆಯು ಅನಾದರಾಸ್ಮರಣಮತ್ಸರತ್ವಾನಿ—ಅನಾದರ—ಪ್ರೀತಿಯಿಲ್ಲದಿರುವಿಕೆಯು ಅಸ್ಮರಣ—ಮರೆಯುವಿಕೆಯು, ಮತ್ಸರತ್ವಾನಿ—ಮತ್ಸರಪಡುವಿಕೆಯು, ಇವುಗಳು ಹಿ ನಿಶ್ಚಯವಾಗಿ, ಏತೇ ಪಂಚ-ಇವೈದು, ವೈಯಾವೃತ್ಯಸ್ಯ—ವೈಯಾವೃತ್ಯಶಿಕ್ಷಾವ್ರತದ, ವ್ಯತಿಕ್ರಮಾಃ—ಅತಿಚಾರಗಳೆಂದು ಕಥ್ಯಂತೇ—ಹೇಳಲ್ಪಡುತ್ತವೆ.

**ತಾತ್ಪರ್ಯಃ**—ಎಲ್ಲಾ ವ್ರತಗಳಂತೆ ವೈಯ್ಯಾವೃತ್ಯಶಿಕ್ಷಾವ್ರತಕ್ಕೆ ಸಹ ಐದು ಅತಿಚಾರಗಳಿವೆ. ಆಹಾರದಾನವನ್ನು ಮಾಡುವಾಗ ಹಸಿದಾದ ಎಲೆಯನ್ನು ಆ ಆಹಾರಪದಾರ್ಥಗಳಿಗೆ ಮುಚ್ಚಿಕೊಡುವುದಕ್ಕೆ 'ಹರಿತಪಿಧಾನಾತಿಚಾರ'ವೆಂದೂ, ಆಹಾರ ಮೊದಲಾದ ದಾನಗಳಲ್ಲಿ ಪ್ರೀತಿಯಿಲ್ಲದಿರುವುದಕ್ಕೆ 'ಅನಾದರಾತಿಚಾರ"ವೆಂದೂ, ದಾನದ ವಿಧಿಯನ್ನು ಮರೆತುಬಿಡುವುದಕ್ಕೆ 'ಅಸ್ಮರಣಾತಿಚಾರ'ವೆಂದೂ, ಅನ್ಯದಾತೃವಿನಲ್ಲಿ ಅಸೂಯೆಯಿಂದ ದಾನ ಮಾಡುವುದಕ್ಕೆ 'ಮಾತ್ಸರ್ಯಾತಿಚಾರ'ವೆಂದೂ ಹೆಸರು. ಇವೈದನ್ನು ವೈಯಾವೃತ್ಯಶಿಕ್ಷಾವ್ರತಿಯು ಬಿಡಬೇಕೆಂದು ಮುಖ್ಯಾಭಿಪ್ರಾಯವು. ಈ ರೀತಿ ಶಿಕ್ಷಾವ್ರತಾಧಿಕಾರವು ಪರಿಸಮಾಪ್ತಿಯಾದುದು,

**ಇತಿ ಶ್ರೀಸಮಂತಭದ್ರಸ್ವಾಮಿವಿರಚಿತೇ ರತ್ನಕರಂಡಕನಾಮ್ನಿ**
**ಉಪಾಸಕಾಧ್ಯಯನೇ ಶಿಕ್ಷಾವ್ರತವ್ಯಾವರ್ಣನಂ ನಾಮ**
**ಪಂಚಮಃ ಪರಿಚ್ಛೇದಃ**

# ಅಥ ಷಷ್ಠಃ ಪರಿಚ್ಛೇದಃ

## ಸಲ್ಲೇಖನಾ ಲಕ್ಷಣ.

**ಉಪಸರ್ಗೇ ದುರ್ಭಿಕ್ಷೇ ಜರಸಿ ರುಜಾಯಾಂ ಚ ನಿಃಪ್ರತೀಕಾರೇ**
**ಧರ್ಮಾಯ ತನುವಿಮೋಚನಮಾಹುಃ ಸಲ್ಲೇಖನಾಮಾರ್ಯಾಃ ||**

**ಅನ್ವಯಾರ್ಥಃ**— ಆರ್ಯಾ:—ಗಣಧರಾದಿಗಳು ನಿಃಪ್ರತೀಕಾರೇ—ಉಪಾಯವಿಲ್ಲದಿರುವ ಉಪಸರ್ಗೇ—ಉಪದ್ರವದಲ್ಲಿ ದುರ್ಭಿಕ್ಷೇ— ಕ್ಷಾಮ ಕಾಲದಲ್ಲಿ ಜರಸಿ—ಮುಪ್ಪಿನಲ್ಲಿ ಚ—ಮತ್ತು ರುಜಾಯಾಂ—ರೋಗದಲ್ಲಿ ಧರ್ಮಾಯ—ಪುಣ್ಯಪ್ರಾಪ್ತಿಗೋಸ್ಕರ ತನುವಿಮೋಚನಂ—ಶರೀರವನ್ನು ತ್ಯಜಿಸುವಿಕೆಯು, ಸಲ್ಲೇಖನಾವ್ರತವನ್ನಾಗಿ ಆಹುಃ—ಹೇಳುತ್ತಾರೆ.

**ತಾತ್ಪರ್ಯ:**—ನಿವಾರಿಸಲು ಅಸಾಧ್ಯವಾದ ಪೂರ್ವಜನ್ಮದ ವೈರವುಳ್ಳ ದೇವಮನುಷ್ಯತಿರ್ಯಂಚ ಮತ್ತು ಅಚೇತನಗಳಿಂದುಂಟಾದ ಉಪಸರ್ಗದಲ್ಲಿಯೂ ಅನ್ನಪಾನಗಳಿಲ್ಲದೆ ಮರಣೋನ್ಮುಖವಾದ ಕ್ಷಾಮಕಾಲದಲ್ಲಿಯೂ ನೇತ್ರ ಕರ್ಣ ಮೊದಲಾದ ಇಂದ್ರಿಯಗಳ ಶಕ್ತಿಯು ನಷ್ಟವಾಗಿ ದೇಹದಲ್ಲಿ ಅತಿಶಿಥಿಲತೆಯು ಉಂಟಾಗುತ್ತಿರಲೂ ಅಸಾಧ್ಯವಾದ ಅತಿಸಾರ ಕ್ಷಯ ಮೊದಲಾದ ರೋಗೋದ್ಭವಕಾಲದಲ್ಲಿಯೂ ನನಗೆ ಅವಶ್ಯವಾಗಿಯೂ ಮರಣವು ಸಂಭವಿಸುವುದೆಂದು ತಿಳಿದೊಡನೆ ಧರ್ಮರಕ್ಷಣೆಗೋಸ್ಕರ ದೇಹತ್ಯಾಗವನ್ನು ಮಾಡುವುದಕ್ಕೆ ಸಲ್ಲೇಖನಾವ್ರತವೆಂದು ಹೆಸರು. ಇದು ಆತ್ಮಹತ್ತೆಯೆಂದು ಯಾರೂ ಭಾವಿಸಕೂಡದು. ರಾಗದ್ವೇಷಕ್ರೋಧಾದಿಭಾವಗಳಿಂದ ಆತ್ಮನನ್ನು ಘಾತಿಸಿಕೊಳ್ಳುವುದಕ್ಕೆ ಆತ್ಮವಧೆಯೆಂದು ಹೆಸರು. ಈ ಸಲ್ಲೇಖನಾವ್ರತವು ಪ್ರತೀಕಾರವಿಲ್ಲದಿರುವ ಉಪಸರ್ಗಾದಿಗಳುಂಟಾದಾಗ ಧರ್ಮರಕ್ಷಣೆಗೋಸ್ಕರ ಶಾಂತಪರಿಣಾಮದಿಂದ ದೇಹತ್ಯಾಗಪೂರ್ವಕವಾಗಿ ಸಮಾಧಿಮರಣವನ್ನೈದುವುದು. ಆದಕಾರಣ ಆತ್ಮಘಾತವಲ್ಲವೆಂದು ಮುಖ್ಯಾಭಿಪ್ರಾಯವು.

## ಸಮಾಧಿಮರಣದ ಮಹಿಮೆ.

**ಅಂತಃಕ್ರಿಯಾಧಿಕರಣಂ ತಪಃಫಲಂ ಸಕಲದರ್ಶಿನಸ್ತುವತೇ ||**
**ತಸ್ಮಾದ್ಯಾವದ್ವಿಭವಂ ಸಮಾಧಿಮರಣೇ ಪ್ರಯತಿತವ್ಯಂ ||೧೨೩||**

**ಅನ್ವಯಾರ್ಥ:**—ಅಂತಃಕ್ರಿಯಾಧಿಕರಣಂ—ಮರಣಸಮಯದಲ್ಲಿ ಸನ್ಯಾಸವನ್ನು ಧರಿಸುವಿಕೆಯು ತಪಃಫಲಂ—ತಪಸ್ಸಿನ ಫಲವೆಂದು ಸಕಲ ದರ್ಶಿನಃ—ಸಮಸ್ತಮತಾವಲಂಬಿಗಳು ಸ್ತುವತೇ–ಹೇಳುತ್ತಾರೆ. ತಸ್ಮಾತ್–ಆದಕಾರಣ ಯಾವದ್ವಿಭವಂ—ಯಥಾಶಕ್ತಿಯಾಗಿ, ಸಮಾಧಿಮರಣೇ—ಸಲ್ಲೇಖನಾವ್ರತದಲ್ಲಿ ಪ್ರಯತಿತವ್ಯಂ—ಪ್ರಯತ್ನಿಸತಕ್ಕುದು.

**ತಾತ್ಪರ್ಯ:** — ವ್ರತ ಉಪವಾಸ ಮೊದಲಾದ ತಪಸ್ಸಿನ ಫಲದಿಂದ ದೇವೇಂದ್ರ ಧರಣೇಂದ್ರ ಚಕ್ರವರ್ತಿ ಮೊದಲಾದವರ ಸಂಪತ್ತನ್ನು ಹೊಂದುತ್ತಾರೆ. ಪ್ರತಿಯೊಂದು ಮತಲ್ಲಿದಯೂ ಮರಣಾಂತ್ಯ ಸಮಯದಲ್ಲಿ ಸನ್ಯಾಸವನ್ನು ಧರಿಸಬೇಕೆಂದು ಹೇಳುತ್ತಾರೆ. ಅಂತ್ಯಸಮಯದಲ್ಲಿ ಸಕಲ ಸನ್ಯಾಸವನ್ನು ಧಾರಣೆಮಾಡಿ ಸಮಾಧಿಮರಣವನ್ನು ಹೊಂದುವುದೇ ನಾವು ನಮ್ಮ ಜನ್ಮದಲ್ಲಿ ಮಾಡಿದ ತಪಸ್ಸಿನ ಫಲವಾಗಿದೆ. ಯದ್ಯಪಿ, ಬಹುಕಾಲ ತಪಸ್ಸನ್ನು ಮಾಡಿ ಮರಣಾಂತ್ಯದಲ್ಲಿ ಸಮಾಧಿಯನ್ನು ಹೊಂದದಿದ್ದರೆ, ದೇಶಾಂತರಕ್ಕೆ ಹೋಗಿ ಬಹುಧನವನ್ನು ಸಂಪಾದಿಸಿಕೊಂಡು ತನ್ನೂರಿನ ಸಮೀಪಕ್ಕೆ ಬರುವಾಗ ಚೋರರು ಅಪಹರಿಸಿ ದರಿದ್ರನಾಗುವಂತೆ ಅವನು ಮಾಡಿದ ತಪಸ್ಸು ನಿಷ್ಫಲವು. ಆದಕಾರಣ ಪ್ರತಿಯೊಬ್ಬನೂ ಸಲ್ಲೇಖನಾವ್ರತವನ್ನು ಧರಿಸಿ ಯಥಾಶಕ್ತಿಯಾಗಿ ಸಮಾಧಿಮರಣವಾಗುವಂತೆ ಪ್ರಯತ್ನಿಸಬೇಕೆಂದು ಭಾವವು.

## ಸಮಾಧಿಮರಣವಿಧಿ.

**ಸ್ನೇಹಂ ವೈರಂ ಸಂಗಂ ಪರಿಗ್ರಹಂ ಚಾಪಹಾಯ ಶುದ್ಧಮನಾ: ||**
**ಸ್ವಜನಂ ಪರಿಜನಮಪಿ ಚ ಕ್ಷಾಂತ್ವಾ ಕ್ಷಮಯೇತ್ಪ್ರಿಯೈರ್ವಚನೈಃ**

**ಅನ್ವಯಾರ್ಥಃ**—ಸ್ನೇಹಂ—ಪ್ರೀತಿಯನ್ನು ವೈರಂ—ದ್ವೇಷವನ್ನು

ಸಂಗಂ—ಸಂಬಂಧವನ್ನು ಚ—ಮತ್ತೆ ಪರಿಗ್ರಹಂ—ಪರಿಗ್ರಹವನ್ನು ಅಪಹಾಯ— ಬಿಟ್ಟು, ಶುದ್ಧಮನಾಸ್ಸನ್—ಪರಿಶುದ್ಧಚಿತ್ತವುಳ್ಳವನಾಗಿ ಪ್ರಿಯೈಃ ವಚನೈಃ—ಪ್ರಿಯವಚನಗಳಿಂದ ಸ್ವಜನಂ—ತನ್ನ ಕುಟುಂಬದವರನ್ನು ಚ—ಮತ್ತೆ **ಪರಿಜನಮಪಿ**—ಸೇವಕರನ್ನು ಕೂಡ **ಕ್ಷಾಂತ್ವಾ**—ಸಮಾಧಾನಪಡಿಸಿ ಕ್ಷಮಯೇತ್—ತಾನೂ ಕ್ಷಮಿಸಬೇಕು.

**ತಾತ್ಪರ್ಯ:**—ಸಲ್ಲೇಖನಾವ್ರತವನ್ನು ಧರಿಸಿ ಸಮಾಧಿಮರಣವನ್ನು ಹೊಂದತಕ್ಕವನು ಪುತ್ರ ಮಿತ್ರಕಲತ್ರಾದಿಗಳ ಪ್ರೇಮವನ್ನೂ ತನಗೆ ವಿರೋಧಿಗಳಾದ ಶತ್ರುಗಳಲ್ಲಿ ವೈರವನ್ನೂ ಗೃಹಧನಧಾನ್ಯ ಮೊದಲಾದವುಗಳ ಸಂಬಂಧವನ್ನೂ ಸಮಸ್ತವಾದ ಬಾಹ್ಯಾಭ್ಯಂತರ ಪರಿಗ್ರಹಗಳನ್ನೂ ತೊರೆದು ಸಮತಾಭಾವದಿಂದ ಪ್ರಿಯಕರವಾದ ಮಾತುಗಳೆನ್ನಾಡಿ ತನ್ನ ಕುಟುಂಬದವರನ್ನೂ ಕಿಂಕರರು ಮೊದಲಾದ ಇತರರನ್ನೂ ಸಮಾಧಾನಪಡಿಸಿ ಅವರ ಮನೋಗತವಾದ ದ್ವೇಷಭಾವವನ್ನು ಹೋಗಲಾಡಿಸಿ ತಾನೂ ಅವರನ್ನು ಕ್ಷಮಿಸಬೇಕೆಂದಭಿಪ್ರಾಯವು.

**ಆಲೋಚ್ಯ ಸರ್ವಮೇನಃಕೃತಕಾರಿತಮನುಮತಂ ಚ ನಿರ್ವ್ಯಾಜಂ**
**ಆರೋಪಯೇನ್ಮಹಾವ್ರತಮಾಮರಣಸ್ಥಾಯಿ ನಿಃಶೇಷಂ ||೧೨೫||**

**ಅನ್ವಯಾರ್ಥ:**—ನಿರ್ವ್ಯಾಜಂ—ವಂಚನೆಯಿಲ್ಲದೆ ಕೃತಕಾರಿತಂ—ತಾನು ಮಾಡಿದ ಮತ್ತು ಮಾಡಿಸಿದ ಚ—ಮತ್ತೆ ಅನುಮತಂ—ಅನುಮೋದಿಸಿದ, ಸರ್ವಂ ಏನಃ—ಎಲ್ಲಾ ಪಾಪವನ್ನು ಆಲೋಚ್ಯ—ಆಲೋಚಿಸಿ ಆಮರಣಸ್ಥಾಯಿ—ಮರಣಾವಧಿ ಸ್ಥಿರವಾಗಿರುವ ನಿಃಶೇಷಂ—ಸಂಪೂರ್ಣವಾದ ಮಹಾವ್ರತಂ—ಮಹಾವ್ರತವನ್ನು ಆರೋಪಯೇತ್— ಧರಿಸಬೇಕು.

**ತಾತ್ಪರ್ಯ:**—ತಾನು ಪೂರ್ವದಲ್ಲಿ ಮಾಡಿದ ಮಾಡಿಸಿದ ಮತು ಅನುಮೋದಿಸಿದ ಎಲ್ಲಾ ಪಾಪಗಳನ್ನು ವಂಚನೆಯಿಲ್ಲದೆ ಗುರುಗಳೊಡನೆ ನಿವೇದಿಸಿ ಅದಕ್ಕೆ ಯೋಗ್ಯವಾದ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಆ ಮೇಲೆ ಮರಣಾವಧಿ ಸರ್ವಸಂಗಪರಿತ್ಯಾಗರೂಪವಾದ ಮಹಾವ್ರತವನ್ನು ಪಾಲಿಸಬೇಕೆಂದು ಭಾವವು.

**ಶೋಕಂ ಭಯಮವಸಾದಂ ಕ್ಲೇದಂ ಕಾಲುಷ್ಯಮರತಿಮಪಿ ಹಿತ್ವಾ ಸತ್ವೋತ್ಸಾಹಮುದೀರ್ಯ ಚ ಮನ: ಪ್ರಸಾದ್ಯಂ ಶುತೈರಮೃತೈಃ**

**ಅನ್ವಯಾರ್ಥ**ಃ—ಶೋಕಂ—ಇಷ್ಟವಿಯೋಗದು:ಖವನ್ನು ಭಯಂ—ಕ್ಷುಧಾದಿಭಯವನ್ನು ಅವಸಾದಂ—ಪರೀಷಹಜನಖೇದವನ್ನು ಕ್ಲೇದಂ—ಇಷ್ಟವಸ್ತುಗಳ ಪ್ರೇಮವನ್ನು ಕಾಲುಷ್ಯಂ—ಕ್ರೋಧಾದಿಗಳನ್ನು ಅಪಿ—ಮತ್ತೆ ಅರತಿಂ—ಅನುತ್ಸಾಹವನ್ನು ಹಿತ್ವಾ—ಬಿಟ್ಟು ಚ—ಮತ್ತೆ ಸತ್ವೋತ್ಸಾಹಂ—ಶಕ್ತಿ ಉತ್ಸಾಹವನ್ನು ಉದೀರ್ಯ್ಯ—ಪ್ರಕಟಿಸಿ ಅಮೃತೈಃ—ಅಮೃತದಂತಿರುವ ಶ್ರುತೈ:—ಶಾಸ್ತ್ರಗಳಿಂದ ಮನ:—ಮನಸ್ಸನ್ನು ಪ್ರಸಾದ್ಯಂ—ಪ್ರಸನ್ನಪಡಿಸತಕ್ಕುದು.

**ತಾತ್ಪರ್ಯ**ಃ—**ಶೋಕ** ಭಯ ಖೇದ ಪ್ರೇಮ **ಕೋಪ ಸಲ್ಲೇಖನಾ**ವ್ರತದಲ್ಲಿ ಅನುತ್ಸಾಹ ಇವುಗಳನ್ನೆಲ್ಲಾ ತೊರೆದು ತನ್ನ ಶಕ್ತ್ಯುತ್ಸಾಹಗಳನ್ನು ಪ್ರಕಟಪಡಿಸಿ ಸಂಸಾರದು:ಖವೆಂಬ ಸಂತಾಪವನ್ನು ದೂರಮಾಡಲು ಅಮೃತದಂತಿರುವ ಶಾಸ್ತ್ರಶ್ರವಣವನ್ನು ಮಾಡುತ್ತಾ ಮನಸ್ಸಿನ ಪರಿಣಾಮವನ್ನು ಪರಿಶುದ್ಧವನ್ನಾಗಿ ಮಾಡಿಕೊಳ್ಳಭೇಕೆಂದು ಭಾವವು. ಸಲ್ಲೇಖನಾವ್ರತಧಾರಿಗಳಾದ ಸಮಾಧಿಮರಣಸ್ಥರು ಚಿಂತಿಸಬೇಕಾದ ವಿಷಯಗಳ್ಯಾವುವೆಂದರೆಃ—

"ಎಲೈ ಭಗವಂತನೇ! ಮರಣೋನ್ಮುಖನಾದ ನನಗೆ ಪರಮಾತ್ಮಭಾವನೆ ಮತ್ತು ರತ್ನತ್ರಯಭಾವನೆಗಳೆಂಬ ಮೋಕ್ಷಮಾರ್ಗಕ್ಕೆ ಉಪಕಾರವನ್ನು ಮಾಡುವ ಪಾಥೇಯ[ಬುತ್ತಿ]ವನ್ನು ಎನ್ನಲ್ಲಿ ಉಂಟು ಮಾಡು. ಓ ಪರಮಾತ್ಮನೇ! ಅನಿತ್ಯವೂ ಕ್ರಿಮಿಸಮೂಹಗಳಿಂದ ಕೂಡಿದುದೂ ಅಪವಿತ್ರವೂ ಆದ ದೇಹವೆಂಬ ಪಂಜರವು ನಾಶವಾಗುತ್ತಿರಲು ಭಯಪಡಬೇಡ. ನಿನು ಅಖಂಡವೂ ಅವಿನಾಶಿಯೂ ಜ್ಞಾಯಕಸ್ವಭಾವವುಳ್ಳುದೂ ಆದ ಜ್ಞಾನವೆಂಬ ಶರೀರವುಳ್ಳವನಾಗಿರುವಿ. ಅದಲ್ಲದೆ ನಿನಗೆ ಇಂತಹ ಪರಮಾನಂದಕ್ಕೆ ಕಾರಣವಾದ ಮರಣೋತ್ಸವವು ಪ್ರಾಪ್ತವಾಗಿರಲು ಜೀರ್ಣವಾದ ಹಳೆಮನೆಯನ್ನು ಬಿಟ್ಟು ಉತ್ತಮವಾದ ಅರಮನೆ

ಯನ್ನು ಹೊಂದುವವನಿಗೆ ಪರಮಸಂತೋಷವುಂಟಾಗುವಂತೆ ಈ ನಶ್ವರ ವಾದ ದೇಹದಲ್ಲಿ ಮಮತೆಯನ್ನು ಬಿಟ್ಟು ದಿವ್ಯದೇಹಧರನಾಗು. ಅಂತಹ ಉಜ್ವಲವಾದ ದೇಹವು ಯಾರಿಗೆ ತಾನೇ ಸಂತೋಷವನ್ನುಂಟುಮಾಡಲಾ ರದು ? ಆದುದರಿಂದ ಮೃತ್ಯುವಿನಿಂದುಂಟಾದ ಭಯವನ್ನು ಬಿಟ್ಟು ಸಂತೋಷ ದಿಂದ ಸ್ವರ್ಗಲೋಕದ ಸುಖವನ್ನನುಭವಿಸು. ನಮ್ಮ ಕರ್ಮವೆಂಬ ವೈರಿಯು ನಮ್ಮನ್ನು ದೇಹವೆಂಬ ಕಾರಾಗೃಹದಲ್ಲಿರಿಸಿ ಯಾವಾಗಲೂ ಕ್ಷುಧಾದಿಬಾಧೆ ಗಳನ್ನುಂಟು ಮಾಡುವನು. ಅಂತಹ ಕರ್ಮರಾಜನನ್ನು ಗೆಲ್ಲಲು ಯಮರಾ ಜನೇ ಸಮರ್ಥನಲ್ಲದೆ ಇತರರಿಂದ ಅಶಕ್ಯವು. ಆದಕಾರಣ ಆತ್ಮಜ್ಞಾನಿಗಳು ಮೃತ್ಯುರಾಜನ ಅನುಗ್ರಹದಿಂದ ಈ ದೇಹಪಿಂಡವನ್ನು ತ್ಯಜಿಸಿ ದಿವ್ಯವಾದ ಸ್ವರ್ಗಸುಖವನ್ನನುಭವಿಸುವರು. ಯಾವನು ಮರಣವೆಂಬ ಕಲ್ಪವೃಕ್ಷವನ್ನು ಹೊಂದಿಯೂ ತನ್ನ ಅಭೀಷ್ಟಫಲವಾದ ಆತ್ಮಕಲ್ಯಾಣವನ್ನು ಮಾಡಿಕೊಳ್ಳು ವುದಿಲ್ಲವೋ, ಅಂತಹನು ಸೀನು ಪುನರ್ಜನ್ಮರೂಪವಾದ ಪಂಕದಲ್ಲಿ ಮಗ್ನ ನಾಗಿ ಅನೇಕ ದುಃಖಗಳನ್ನು ಅನುಭವಿಸುವಿ. ಎಲೈ ಆತ್ಮನೇ ! ಈ ಮರಣದಿಂದ ನೀನು ಜೀರ್ಣದೇಹವನ್ನು ತೊರೆಯುವುದಕ್ಕೆ ಭಯಪಡುವಿ ಯೆಕೆ? ಸಂತೋಷದಿಂದಿರು. ನೀನು ಇಲ್ಲಿಯ ಸುಖದುಃಖಗಳನ್ನು ಅನುಭವಿಸಿರುವಿ. ಇನ್ನು ಮೇಲೆ ಪರಲೋಕಸುಖಾಸ್ವಾದನೆಯನ್ನಾದರೂ ಮಾಡು. ಸಂಸಾರಾಸಕ್ತರಿಗೆ ಮರಣಭಯವೂ ಉಂಟಾಗುವುದು ಸಂಸಾರ ದಿಂದ ವಿರಕ್ತನಾದ ನೀನೇಕೆ ಭೀತನಾಗಿರುವಿ ? ನಿನಗೆ ನಿನ್ನ ಆಯುಷ್ಯ ಕರ್ಮವು ಪೂರ್ಣವಾಗುತ್ತಿರಲು ಈ ಪೌದ್ಗಲಿಕದೇಹವು ನಿನ್ನನ್ನೆಂದೂ ತಡೆಯಲಾರದು. ಆದುದರಿಂದೇಕೆ ನೀನೇ ಅದರ ಮಮತೆಯನ್ನು ತ್ಯಜಿಸ ಬಾರದು ? ಆತ್ಮಜ್ಞಾನಿಗಳಿಗೆ ಮರಣಕಾಲದಲ್ಲಿ ವ್ಯಾಧಿಯಿಂದುಂಟಾದ ದುಃಖವು ದೇಹಸಂಬಂಧವಾದ ಮೋಹವನ್ನು ಬಿಡಿಸುವುದಕ್ಕೂ ಮೋಕ್ಷ ಸುಖವನ್ನುಂಟು ಮಾಡುವುದಕ್ಕೂ ಆಗಿದೆಯೆಂದು ಭಾವಿಸು. ಯದ್ಯಪಿ, ನಿನಗೆ ಮರಣವೇದನೆಯು ದುಃಖದಾಯಕವಾದರೂ, ಲೋಕದಲ್ಲಿ ಹಸಿ ಮಣ್ಣಿನ ಮಡಕೆಯನ್ನು ಅಗ್ನಿಯಿಂದ ಸಂತಪಿಸಿ ಜಲಧಾರಣಾದಿಗಳಿಗೆ ಯೋಗ್ಯವನ್ನಾಗಿ ಮಾಡುವಂತೆ ನೀನು ಮರಣದುಃಖವನ್ನು ಸಮತಾಭಾವ

ಅಪಿ—ಮತ್ತೆ ಖರಪಾನಹಾಪನಾಂ—ಉಷ್ಣ ಜಲತ್ಯಾಗವನ್ನು ಕೃತ್ವಾ—ಮಾಡಿ ಅಪಿ—ಮತ್ತೆ ಶಕ್ತ್ಯಾ—ಶಕ್ತಿಯಿಂದ ಉಪವಾಸಂ-ಸರ್ವಾಹಾರತ್ಯಾಗವನ್ನು ಕೃತ್ವಾ—ಮಾಡಿ ಸರ್ವಯತ್ನೇನ—ಸಮಸ್ತಪ್ರಯತ್ನದಿಂದ ಪಂಚನಮಸ್ಕಾರಮನಾಃ 'ಸನ್'—ಪಂಚನಮಸ್ಕಾರಮಂತ್ರವನ್ನು ಮನಸ್ಸಿನಲ್ಲಿ ಸ್ಮರಿಸುವವನಾಗಿ ತನುಂ—ಶರೀರವನ್ನು ತ್ಯಜೇತ್—ಬಿಡಬೇಕು.

**ತಾತ್ಪರ್ಯ:**—ಸಮಾಧಿಮರಣೋನ್ಮುಖನಾದ ಶ್ರಾವಕನು ಕ್ರಮದಿಂದ ಆಹಾರಗಳನ್ನು ಬಿಡುತ್ತಾ ಹಾಲು ಮಜ್ಜಿಗೆ ಮೊದಲಾದ ಸ್ನಿಗ್ಧ-ಜಿಡ್ಡುಳ್ಳ ಪಾನದ್ರವ್ಯಗಳನ್ನು ಸೇವಿಸುತ್ತಿರಬೇಕು. ಕ್ರಮದಿಂದ ಅವನ್ನು ಕೂಡ ತ್ಯಜಿಸಿ, ಗಂಜಿ—ಬಿಸಿನೀರು ಮೊದಲಾದ ಉಷ್ಣವಾದ ಪಾನದ್ರವ್ಯಗಳನ್ನು ಉಪಯೋಗಿಸುತ್ತಿರಬೇಕು. ಅವನ್ನು ಕೂಡ ಕ್ರಮಕ್ರಮವಾಗಿ ಬಿಡುತ್ತಾ ಅನ್ನಪಾನಖಾದ್ಯಲೇಹ್ಯರೂಪವಾದ ಸಮಸ್ತಾಹಾರಗಳನ್ನು ಪರಿತ್ಯಜಿಸಿ ಉಪವಾಸವನ್ನು ಮಾಡಬೇಕು. ಆ ವೇಲೆ ಪಂಚನಮಸ್ಕಾರ ಮಂತ್ರಗಳನ್ನು ಮನಸಿನಲ್ಲಿ ಸ್ಮರಿಸುತ್ತಾ ದೇಹತ್ಯಾಗವನ್ನು ಮಾಡಬೇಕೆಂದು ಭಾವವು.

### ಸಲ್ಲೇಖನಾತಿಚಾರ.

**ಜೀವಿತಮರಣಾಶಂಸೇ ಭಯಮಿತ್ರಸ್ಮೃತಿನಿದಾನನಾಮಾನಃ ||**
**ಸಲ್ಲೇಖನಾತಿಚಾರಾ: ಪಂಚ ಜಿನೇಂದ್ರೈಃ ಸಮಾದಿಷ್ಟಾಃ ||೧೨೯||**

**ಅನ್ವಯಾರ್ಥ:**—ಜೀವಿತಮರಣಾಶಂಸೇ—ಬದುಕುವ ಮತ್ತು ಸಾಯಬೇಕೆಂಬ ಇಚ್ಛೆಗಳು ಭಯಮಿತ್ರಸ್ಮೃತಿನಿದಾನನಾಮಾನಃ—ಭಯ ಪಡುವಿಕೆಯು, ಮಿತ್ರರ ಸ್ಮರಣೆಯು, ಮುಂದಿನ ಭೋಗವಾಂಛೆಯು 'ಏತೇ' ಪಂಚ—ಇವೈದು ಸಲ್ಲೇಖನಾತಿಚಾರಾಃ—ಸಮಾಧಿಮರಣಕ್ಕೆ ಅತಿಚಾರಗಳೆಂದು ಜಿನೇಂದ್ರೈಃ—ಭಗವಂತರಿಂದ ಸಮಾದಿಷ್ಟಾಃ-ಹೇಳಲ್ಪಟ್ಟವೆ.

**ತಾತ್ಪರ್ಯ:**—ಸಲ್ಲೇಖನಾವ್ರತಧಾರಿಯಾದವನು ನಾನು ಇನ್ನೆರಡುದಿನ ಬದುಕಬೇಕೆಂಬ ವಾಂಛೆಯನ್ನು ಪಡುವುದಕ್ಕೆ 'ಜೀವಿತಾಶಂಸ' ವೆಂದೂ, ರೋಗಾದಿವೇದನೆಗಳನ್ನು ತಡೆಯಲಾರದೆ ಮರಣಾಭಿಲಾಷೆ

ಯನ್ನು ಪಡುವುದಕ್ಕೆ 'ಮರಣಾಶಂಸ'ವೆಂದೂ, ಈ ಮರಣಾದಿವೇದನೆಗಳನ್ನು ಸಹಿಸುವುದು ಅದು ಹೇಗೆ? ಎಂದು ಭಯಪಡುವುದಕ್ಕೆ 'ಭಯಸ್ಮೃತಿ'ಯೆಂದೂ, ತನ್ನ ಇಷ್ಟಮಿತ್ರರನ್ನು ಸ್ಮರಿಸುವುದಕ್ಕೆ 'ಮಿತ್ರಸ್ಮೃತಿ' ಯೆಂದೂ, ಆಗಾಮಿಭವದ ಭೋಗಾಭಿಲಾಷೆಯನ್ನು ಮಾಡುವುದಕ್ಕೆ 'ನಿದಾನ'ವೆಂದೂ ಹೆಸರು. ಇವೈದು ಸಲ್ಲೇಖನಾವ್ರತದ ಅತಿಚಾರಗಳೆಂದು ಜಿನೇಶ್ವರರು ಪ್ರತಿಪಾದಿಸುತ್ತಾರೆ. ಸಮಾಧಿಮರಣಸ್ಥನಾದ ಶ್ರಾವಕನು ಜೀವಿಸಬೇಕೆಂಬ ಅಥವಾ ಸಾಯಬೇಕೆಂಬ ಇಚ್ಛೆಯನ್ನೂ ಭಯ, ಮಿತ್ರರ ಸ್ಮರಣೆ, ನಿದಾನ ಇವುಗಳನ್ನೂ ತ್ಯಜಿಸಿ ಚತುರಾರಾಧನಾಪೂರ್ವಕವಾಗಿ ದೇಹತ್ಯಾಗವನ್ನು ಮಾಡಿದರೆ, ಅಂತಹನು ಅಭ್ಯುದಯ ನಿಃಶ್ರೇಯಸಸುಖಗಳನ್ನು ಹೊಂದುತ್ತಾನೆಂದು ಭಾವವು.

### ಸಲ್ಲೇಖನಾವ್ರತಧಾರಣಾಫಲ.

**ನಿ:ಶ್ರೇಯಸಮಭ್ಯುದಯಂ ನಿಸ್ತೀರಂ ದುಸ್ತರಂ ಸುಖಾಂಬುನಿಧಿಂ ||**
**ನಿ:ಪಿಬತಿ ಪೀತಧರ್ಮಾ ಸರ್ವೈರ್ದುಃಖೈರನಾಲೀಢಃ ||೧೩೦||**

**ಅನ್ವಯಾರ್ಥ**ಃ—ಪೀತಧರ್ಮಾ—ಪಾನಮಾಡ [ಕೇಳ] ಲ್ಪಟ್ಟ ಶಾಸ್ತ್ರವುಳ್ಳ ಶ್ರಾವಕನು, ಸರ್ವೈ:ದುಃಖೈಃ—ಸಮಸ್ತದುಃಖಗಳಿಂದ ಅನಾಲೀಢಸ್ಸನ್—ರಹಿತನಾಗಿ ನಿಸ್ತೀರಂ—ಅಪಾರವೂ ದುಸ್ತರಂ—ದಾಟಲಸಾಧ್ಯವೂ ಅಭ್ಯುದಯಂ—ಉತ್ತಮ ಸುಖವುಳ್ಳುದೂ, ಆದ ನಿ:ಶ್ರೇಯಸಂ—ಮೋಕ್ಷವೆಂಬ ಸುಖಾಂಬುನಿಧಿಂ—ಸುಖವೆಂಬ ಸಮುದ್ರವನ್ನು ನಿ:ಪಿಬತಿ—ಸಂಪೂರ್ಣವಾಗಿ ಪಾನಮಾಡುತ್ತಾನೆ.

**ತಾತ್ಪರ್ಯ**ಃ—ಸಲ್ಲೇಖನಾವ್ರತಧಾರಿಯು ಮರಣಕಾಲದಲ್ಲಿ ಧರ್ಮಶಾಸ್ತ್ರವನ್ನು ಕೇಳುತ್ತಾ ಸಾಂಸಾರಿಕ ಸಂಬಂಧ ಎಲ್ಲಾವ್ಯಸನಗಳನ್ನು ತ್ಯಜಿಸಿ, ಕೊನೆಯಿಲ್ಲುದುದೂ ದಾಟಲಶಕ್ಯವೂ ಉತ್ತಮ ಸುಖವುಳ್ಳುದೂ ಸಮುದ್ರದಂತೆ ಅಪಾರವಾದ ಸುಖವುಳ್ಳುದೂ ಆದ ಮೊಕ್ಷವನ್ನು ಹೊಂದುತ್ತಾನೆಂದು ಭಾವವು.

### ಮೋಕ್ಷರೂಪ.

**ಜನ್ಮಜರಾಮಯಮರಣೈಃ ಶೋಕೈರ್ದುಃಖೈರ್ಭಯೈಶ್ಚ ಪರಿಮುಕ್ತಂ**
**ನಿರ್ವಾಣಂ ಶುದ್ಧಸುಖಂ ನಿಃಶ್ರೇಯಸಮಿಷ್ಯತೇ ನಿತ್ಯಂ||೧೩೧||**

**ಅನ್ವಯಾರ್ಥ:-** ಜನ್ಮಜರಾಮಯಮರಣೈ:—ಜನನ, ಮುಪ್ಪು, ರೋಗ, ಮರಣ ಇವುಗಳಿಂದ ಶೋಕೈಃ—ವ್ಯಸನಗಳಿಂದ ದು:ಖೈಃ—ದು:ಖಗಳಿಂದ ಚ—ಮತ್ತೆ ಭಯೈ:—ಭಯಗಳಿಂದ ಪರಿಮುಕ್ತಂ—ಬಿಡಲ್ಪಟ್ಟುದೂ ನಿತ್ಯಂ—ಅವಿನಾಶಿಯೂ ತಥಾ—ಹಾಗೆ ನಿ:ಶ್ರೇಯಸಂ—ಕಲ್ಯಾಣಮಯವೂ ಶುದ್ಧಸುಖಂ—ಆತ್ಮೋತ್ಥಸುಖವುಳ್ಳುದೂ, ಆದ ಸ್ಥಾನವು ನಿರ್ವಾಣಂ—ಮೋಕ್ಷವೆಂದು ಇಷ್ಯತೇ—ಹೇಳಲ್ಪಡುತ್ತವೆ.

**ತಾತರ್ಯಃ**— ಹುಟ್ಟುವಿಕೆ, ಮುದಿತನ, ರೋಗ, ಮರಣ, ಶೋಕ, ದುಃಖ, ಭಯ ಇವುಗಳಿಲ್ಲದುದೂ ನಾಶವಿಲ್ಲದುದೂ ಮಂಗಳಕರವೂ ಅತೀಂದ್ರಿಯಸುಖವನ್ನುಳ್ಳುದೂ ಆದ ಉತ್ತಮವಾದ ಸ್ಥಾನಕ್ಕೆ ಮೋಕ್ಷವೆಂದು ಹೆಸರು.

**ವಿದ್ಯಾದರ್ಶನಶಕ್ತಿಸ್ವಾಸ್ಥ್ಯಪ್ರಹ್ಲಾದತೃಪ್ತಿಶುದ್ಧಿಯುಜ: ||**
**ನಿರತಿಶಯಾ ನಿರವಧಯೋ ನಿಃಶ್ರೇಯಸಮಾವಸಂತಿ ಸುಖಂ ||**

**ಅನ್ವಯಾರ್ಥಃ**—ನಿರತಿಶಯಾ:—ಜ್ಞಾನಾದಿಗುಣಗಳ ಹೀನಾಧಿಕವಿಲ್ಲದಿರುವುವೂ ನಿರವಧಯ:—ಅಂತ್ಯವಿಲ್ಲದುವೂ ಆದ ವಿದ್ಯಾದರ್ಶನಶಕ್ತಿಸ್ವಾತ್ಥ್ಯಪ್ರಹ್ಲಾದತೃಪ್ತಿಶುದ್ಧಿಯುಜ:—ಅನಂತಜ್ಞಾನ, ದರ್ಶನ, ವೀರ್ಯ, ಪರಮೌದಾಸೀನ್ಯ, ಅನಂತಸುಖ, ತೃಪ್ತಿ, ಮಲರಾಹಿತ್ಯ, ಇವುಗಳಿಂದ ಕೂಡಿದವರಾಗಿ, ನಿಃಶ್ರೇಯಸಂಸುಖಂ—ಮೋಕ್ಷಸುಖದಲ್ಲಿ ಅವಸಂತಿ—ಬಹುಕಾಲದ ವರೆಗೆ ವಾಸಿಸಿಕೊಂಡಿರುತ್ತಾರೆ.

**ತಾತ್ಪರ್ಯಃ**—ಮುಕ್ತಿಯನ್ನು ಹೊಂದಿದ ಸಿದ್ಧಪರಮೇಷ್ಠಿಗಳ ಜ್ಞಾನಾದಿಗುಣಗಳು ಎಂದೂ ಹೀನಾಧಿಕ್ಯವನ್ನೂ ನಾಶವನ್ನೂ ಹೊಂದುವುದಿಲ್ಲವು. ಅಂತಹ ಅನಂತಜ್ಞಾನವೂ, ಅನಂತದರ್ಶನವೂ, ಅನಂತವೀರ್ಯವೂ, ಪರಮೌದಾಸೀನ್ಯವೂ, ಅನಂತಸುಖವೂ, ತೃಪ್ತಿಯೂ, ದ್ರವ್ಯಭಾವಕರ್ಮಗಳಿಲ್ಲದುದೂ ಆದ ಮೋಕ್ಷಸುಖವನ್ನು ಹೊಂದುತ್ತಾರೆಂದು ಭಾವವು.

**ಕಾಲೇ ಕಲ್ಪಶತೇಽಪಿ ಚ ಗತೇ ಶಿವಾನಾಂ ನ ವಿಕ್ರಿಯಾ ಲಕ್ಷ್ಯಾ ||**
**ಉತ್ಪಾತೋಽಪಿ ಯದಿ ಸ್ಯಾತ್, ತ್ರಿಲೋಕಸಂಭ್ರಾಂತಿಕರಣಪಟುಃ ||**

ಅನ್ವಯಾರ್ಥಃ—ಚ—ಮತ್ತೆ ಯದಿ—ಒಂದುವೇಳೆ ತ್ರಿಲೋಕ ಸಂಭ್ರಾಂತಿಕರಣಪಟುಃ—ಮೂರುಲೋಕಗಳನ್ನು ಭ್ರಮೆಗೊಳಿಸಲು ಸಮರ್ಥವಾದ ಉತ್ಪಾತೋಽಪಿ—ಉಪಸರ್ಗವು ಕೂಡ ಸ್ಯಾತ್—ಉಂಟಾದರೂ ಕಲ್ಪಶತೇಕಾಲೇ—ನೂರಾರು ಕಲ್ಪಕಾಲವು ಗತೇಽಪಿ—ಕಳೆದು ಹೋದರು ಶಿವಾನಾಂ—ಮೋಕ್ಷವನ್ನು ಹೊಂದಿದ ಆತ್ಮರುಗಳಿಗೆ ವಿಕ್ರಿಯಾ—ವಿಕಾರವು ನ ಲಕ್ಷ್ಯಾ—ಆಗಲಾರದು.

ತಾತ್ಪರ್ಯ:—ಮೂರು ಲೋಕಗಳನ್ನೂ ಭ್ರಮೆಗೊಳಿಸುವ ಉಪಸರ್ಗಾದಿಗಳು ಉಂಟಾದರೂ ಅನಂತಕಾಲ ಕಳೆದು ಹೋದರೂ ಮುಕ್ತಾತ್ಮರಲ್ಲಿಯೂ ಅವರ ಜ್ಞಾನಾದಿಗುಣಗಳಲ್ಲಿಯೂ ಎಂದೂ ವಿಕಾರ ವ್ಯತ್ಯಾಸಗಳು ಉಂಟಾಗಲಾರವು. ಅವರು ಹಿಂತಿರುಗಿ ಪುನಃ ಇಲ್ಲಿಗೆ ಬರುವುದಿಲ್ಲವೆಂದು ಭಾವವು.

**ಸಿದ್ಧಪರಮೇಷ್ಠಿಗಳ ಸ್ವರೂಪ.**

**ನಿಃಶ್ರೇಯಸಮಧಿಪನ್ನಾಸ್ತ್ರೈಲೋಕ್ಯಶಿಖಾಮಣಿಶ್ರಿಯಂ ದಧತೇ**
**ನಿಷ್ಕಿಟ್ಟಕಾಲಿಕಾಚ್ಛವಿಚಾಮೀಕರಭಾಸುರಾತ್ಮಾನಃ ||೧೩೪||**

ಅನ್ವಯಾರ್ಥ:—ನಿಃಶ್ರೇಯಸಂ ಅಧಿಪನ್ನಾಃ—ಮೋಕ್ಷವನ್ನು ಹೊಂದಿದವರು ನಿಷ್ಕಿಟ್ಟಕಾಲಿಕಾಚ್ಛವಿಚಾಮೀಕರಬಾಸುರಾತ್ಮಾನಃ 'ಸಂತಃ'—ಕಿಟ್ಟಕಾಲಿಕೆಗಳಿಂದ ರಹಿತವೂ ಪ್ರಕಾಶವುಳ್ಳುದೂ ಆದ ಸುವರ್ಣದಂತೆ ಪ್ರಭೆಯುಳ್ಳವರಾಗಿ ತ್ರೈಲೋಕ್ಯಶಿಖಾಮಣಿಶ್ರೀಯಂ-ಮೂರು ಲೋಕದಲ್ಲಿ ಶ್ರೇಷ್ಠವಾದ ಕಾಂತಿಯನ್ನು ದಧತೇ—ಧರಿಸುತ್ತಾರೆ.

ತಾತ್ಪರ್ಯಃ—ಮೋಕ್ಷವನ್ನು ಹೊಂದಿದ ಸಿದ್ಧರು ಕಿಟ್ಟ ಮತ್ತು ಕಾಲಿಮುಗಳೆಂಬ ಕಲ್ಮಷಗಳಿಂದ ವಿರಹಿತವಾದ ಕುಂದಣ—ಚಿನ್ನದಂತೆ ದ್ರವ್ಯಕರ್ಮ ಭಾವಕರ್ಮ ನೋಕರ್ಮಗಳೆಂಬ ಕರ್ಮಮಲಗಳಿಂದ ವಿರಹಿತವೂ ಪ್ರಭಾಮಯವೂ ಆದ ಆತ್ಮರಗಳುಳ್ಳವರಾಗಿ ತ್ರಿಲೋಕದಲ್ಲಿ ಅತ್ಯುತ್ತಮವಾದ ಕಾಂತಿಯನ್ನು ಹೊಂದಿದವರಾಗಿರುತ್ತಾರೆಂದಭಿಪ್ರಾಯ.

## ಸಲ್ಲೇಖನಾವ್ರತೋಪಸಂಹಾರ.

**ಪೂಜಾರ್ಥಾಜ್ಞೈಶ್ವರ್ಯೈರ್ಬಲಪರಿಜನಕಾಮಭೋಗಭೂಯಿಷ್ಠೈಃ || ಅತಿಶಯಿತಭುವನಮದ್ಭುತಮಭ್ಯುದಯಂ ಫಲತಿ ಸದ್ಧರ್ಮಃ ||೧೩೫||**

**ಅನ್ವಯಾರ್ಥಃ**—ಸದ್ಧರ್ಮಃ—ಸಲ್ಲೇಖನಾದಿಗಳಿಂದ ಪ್ರಾಪ್ತವೂ ಸಮೀಚೀನವೂ ಆದ ಪುಣ್ಯವು, ಪೂಜಾರ್ಥಾಜ್ಞೈಶ್ವರ್ಯೈಃ—ಸತ್ಕಾರ, ಧನ, ಆಜ್ಞೆ, ಐಶ್ವರ್ಯ, ಇವುಗಳಿಂದಲೂ ಬಲಪರಿಜನಕಾಮಭೋಗ ಭೂಯಿಷ್ಠೈಃ—ಸೈನ್ಯ, ಸೇವಕರು, ಕಾಮಭೋಗ ಇವುಗಳ ಆಧಿಕ್ಯದಿಂದಲೂ ಅತಿಶಯಿತಭುವನಂ—ಲೋಕದಲ್ಲಿ ಶ್ರೇಷ್ಠವೂ ಅದ್ಭುತಂ—ಆಶ್ಚರ್ಯಕರವೂ ಆದ ಅಭ್ಯುದಯಂ—ಸ್ವರ್ಗಾದಿಸುಖವನ್ನು ಫಲತಿ—ಉಂಟುಮಾಡಿಕೊಡುತ್ತದೆ.

**ತಾತ್ಪರ್ಯಃ**—ಯಾವನು ಸಮ್ಯಗ್ದರ್ಶನಾದಿಗಳನ್ನೂ ಸಲ್ಲೇಖನಾವ್ರತವನ್ನೂ ನಿರತಿಚಾರವಾಗಿ ಪಾಲಿಸುತ್ತಾನೋ, ಅಂತಹನು ಸತ್ಕಾರ, ಸಂಪತ್ತಿ, ಆಜ್ಞೆ, ಐಶ್ವರ್ಯ, ಸೈನ್ಯ, ಸೇವಕರು, ಇಷ್ಟವಾದ ಭೋಗಸುಖ ಇವುಗಳಿಂದ ಅತ್ಯಧಿಕವೂ ಲೋಕೋತ್ತರವೂ ವಿಸ್ಮಯಕರವೂ ಆದ ದೇವೇಂದ್ರ ಧರಣೇಂದ್ರ ಅಹಮಿಂದ್ರಾದಿ ಸುಖಸಂಪತ್ತನ್ನು ಹೊಂದುತ್ತಾನೆ. ಅಂದರೆ ಸದ್ಧರ್ಮದಿಂದ ಉತ್ತಮವಾದ ಸ್ವರ್ಗಾದಿಸಂಪತ್ತಿಗಳು ಪ್ರಾಪ್ತವಾಗುತ್ತವೆಂದು ಭಾವವು. ಇಲ್ಲಿಗೆ ಸಲ್ಲೇಖನಾವ್ರತಾಧಿಕಾರವು ಸಮಾಪ್ತವಾದುದು.

**ಇತಿ ಶ್ರೀಸಮಂತಭದ್ರಸ್ವಾಮಿವಿರಚಿತೇ ರತ್ನಕರಂಡಕನಾಮ್ನಿ ಉಪಾಸಕಾಧ್ಯಯನೇ ಸಲ್ಲೇಖನಾವ್ಯಾವರ್ಣನಂ ನಾಮ ಷಷ್ಠಃ ಪರಿಚ್ಛೇದಃ**

—ಉಊ—

# ಅಥ ಸಪ್ತಮಃ ಪರಿಚ್ಛೇದಃ

೦—೦—೦

## ಶ್ರಾವಕರ ಹನ್ನೊಂದು ಭೇದಗಳ ವರ್ಣನೆ.

**ಶ್ರಾವಕಪದಾನಿ ದೇವೈರೇಕಾದಶದೇಶಿತಾನಿ ಯೇಷು ಖಲು ||**
**ಸ್ವಗುಣಾಃ ಪೂರ್ವಗುಣೈಸ್ಸಹ ಸಂತಿಷ್ಠಂತೇ ಕ್ರಮವಿವೃದ್ಧಾಃ ||**

**ಅನ್ವಯಾರ್ಥಃ**—ದೇವೈಃ--ಸರ್ವಜ್ಞರಿಂದ ಶ್ರಾವಕಪದಾನಿ-ಶ್ರಾವಕರ ಸ್ಥಾನಗಳು ಏಕಾದಶ—ಹನ್ನೊಂದೆಂದು ದೇಶಿತಾನಿ—ಉಪದೇಶಿಸಲ್ಪಟ್ಟವೆ. ಯೇಷು—ಯಾವ ಸ್ಥಾನಗಳಲ್ಲಿ ಖಲು—ನಿಶ್ಚಯವಾಗಿ ಸ್ವಗುಣಾಃ—ತಮ್ಮ ಗುಣಗಳು. ಪೂರ್ವಗುಣೈಃ ಸಹ—ಮೊದಲಿನ ನೆಲೆಯ ಗುಣಗಳೊಡನೆ ಕ್ರಮವಿವೃದ್ಧಾಃ 'ಸಂತಃ'—ಕ್ರಮದಿಂದ ವೃದ್ಧಿಹೊಂದಿದುವುಗಳಾಗಿ ಸಂತಿಷ್ಠಂತೇ—ಇರುತ್ತವೆ.

**ತಾತ್ಪರ್ಯ:**— ಶ್ರಾವಕರಲ್ಲಿ—ಹನ್ನೊಂದು ಭೇದಗಳಿವೆ. ಅಂತಹ ಭೇದಗಳಿಗೆ ಶ್ರಾವಕರ ಪ್ರತಿಮೆ, ನೆಲೆ, ಸ್ಥಾನ, ಅಥವಾ ದರ್ಜೆಗಳೆಂದು ಹೆಸರು. [೧] ದರ್ಶನ ಪ್ರತಿಮಾ, [೨] ವ್ರತಪ್ರತಿಮಾ, [೩] ಸಾಮಯಿಕ ಪ್ರತಿಮಾ, [೪] ಪ್ರೋಷಧೋಪವಾಸಪ್ರತಿಮಾ, [೫] ಸಚಿತ್ತತ್ಯಾಗಪ್ರತಿಮಾ, [೬] ರಾತ್ರಿಭೋಜನತ್ಯಾಗಪ್ರತಿಮಾ, [೭] ಬ್ರಹ್ಮಚರ್ಯಪ್ರತಿಮಾ, [೮] ಆರಂಭತ್ಯಾಗಪ್ರತಿಮಾ, [೯] ಪರಿಗ್ರಹತ್ಯಾಗಪ್ರತಿಮಾ, [೧೦] ಅನುಮತಿತ್ಯಾಗಪ್ರತಿಮಾ, [೧೧] ಉದ್ದಿಷ್ಟತ್ಯಾಗಪ್ರತಿಮಾ, ಎಂಬುದಾಗಿ ಶ್ರಾವಕರ ಹನ್ನೊಂದು ನೆಲೆಗಳ ಹೆಸರುಗಳಾಗಿವೆ. ಈ ಹನ್ನೊಂದು ದರ್ಜೆಗಳ ಪಾಠಾಭ್ಯಾಸವನ್ನು ಮಾಡುವ [ಧರಿಸುವ] ವರಿಗೆ ಯಥಾಕ್ರಮವಾಗಿ ○ ದರ್ಶನಿಕ, ವ್ರತಿಕ, ಸಾಮಯಿಕ, ಪ್ರೋಷ-

---

○ ದರ್ಶನಿಕವ್ರತಿಕಾವಪಿ ಸಾಮಯಿಕಪ್ರೋಷಧೋಪವಾಸೀ ಚ || ಸಚ್ಚಿತ್ತರಾತ್ರಿ ಭಕ್ತವ್ರತವಿರತಾ ಬ್ರಹ್ಮಚಾರೀ ಚ ||೧|| ಆರಂಭಾದ್ವಿನಿವೃತ್ತಃ ಪರಿಗ್ರಹಾದನುಮತೇಸ್ತತೋದ್ದಿಷ್ಟಾತ್ || ಇತ್ಯೇಕಾದಶನಿಲಯಾ ಜಿನೋದಿತಾ: ಶ್ರಾವಕಃ ಕ್ರಮಶಃ ||೨||

ಧೋ[illegible] ಸಚಿತ್ತವಿರತ, ರಾತ್ರಿಭೋಜನವಿರತ, ಬ್ರಹ್ಮಚಾರಿ, ಆರಂಭವಿರತ, ಪರಿಗ್ರಹ ವಿರತ, ಅನುಮತಿವಿರತ, ಉದ್ದಿಷ್ಟವಿರತರೆಂಬುದಾಗಿ ಹೆಸರುಗಳಾಗಿವೆ. ಈ ಪ್ರಕಾರವಾದ ಏಕಾದಶಪ್ರತಿಮೆಗಳಲ್ಲಿ ಮೇಲೆಮೇಲಿನ ಪ್ರತಿಮಾಧಾರಿಗಳಲ್ಲಿ ಕೆಳಕೆಳಗಿನ ನೆಲೆಗಳ ಗುಣಗಳು ಇರಬೇಕೆಂದು — ಅಂದರೆ ಅವುಗಳನ್ನು ಪರಿಪಾಲಿಸಬೇಕೆಂದು ಮುಖ್ಯಾಭಿಪ್ರಾಯವು.

### [೧] ದರ್ಶನಿಕನ ಲಕ್ಷಣ.

**ಸಮ್ಯಗ್ದರ್ಶನಶುದ್ಧ:** ಸಂಸಾರಶರೀರಭೋಗನಿರ್ವಿಣ್ಣ: ||
**ಪಂಚಗುರು ಚರಣಶರಣೋ ದರ್ಶನಿಕಸ್ತತ್ವಪಥಗೃಹ್ಯ:** ||೧೩೭||

**ಅನ್ವಯಾರ್ಥ:**—'ಯಃ'-ಯಾವನು ಸಂಸಾರಶರೀರಭೋಗನಿರ್ವಿಣ್ಣಃ—ಸಂಸಾರ, ಶರೀರ, ಮತ್ತು ಭೋಗಗಳಿಂದ ವಿರಕ್ತನೋ ಸಮ್ಯಗ್ದರ್ಶನಶುದ್ಧಃ ಅತಿಚಾರಗಳಿಲ್ಲದೆ ಸಮ್ಯಕ್ತ್ವವನ್ನು ಪಾಲಿಸುವವನೋ ಪಂಚಗುರುಚರಣಶರಣಃ— ಪಂಚಪರಮೇಷ್ಠಿಗಳ ಪಾದಗಳೇ ಶರಣವಾಗುಳ್ಳವನೋ ತತ್ವಪಥಗೃಹ್ಯ:—ಸತ್ಯಾರ್ಥವಾದ ಮಾರ್ಗವನ್ನು ಗ್ರಹಣೇಮಾಡುವವನೋ 'ಸಃ'—ಅಂತಹನು ದರ್ಶನಿಕ:—ದರ್ಶನಿಕಪ್ರತಿಮಾಧಾರಿಯಾಗಿ 'ಭವತಿ'—ಆಗುತ್ತಾನೆ.

**ತಾತ್ಪರ್ಯ:** — ಪೂರ್ವೋಕ್ತವಾದ ಸಮ್ಯಗ್ದರ್ಶನದ ೨೫ ಮಲ—ದೋಷಗಳಿಂದ ರಹಿತವಾದ ಶುದ್ಧಸಮ್ಯಕ್ತ್ವವನ್ನು ಪಾಲಿಸುವವನೂ ಸಂಸಾರ, ಶರೀರ, ಇಂದ್ರಿಯಸುಖ ಮೊದಲಾದ ಭೋಗವಸ್ತುಗಳಲ್ಲಿ ಹೆಚ್ಚು ಅಭಿಲಾಷೆಯಿಲ್ಲದವನೂ ಪಂಚಪರಮೇಷ್ಠಿಗಳಲ್ಲಿ ದೃಢವಾದ ಭಕ್ತಿ—ವಿಶ್ವಾಸಗಳುಳ್ಳವನೂ ಯಾವಾಗಲೂ ಶಾಸ್ತ್ರಶ್ರವಣವನ್ನು ಮಾಡುತ್ತಾ ಸನ್ಮಾರ್ಗದಲ್ಲಿರತಕ್ಕವನೂ ಆದ ಗೃಹಸ್ಥನಿಗೆ 'ದರ್ಶನಿಕ'ನೆಂದು ಹೆಸರು. ಅಂದರೆ ಅತಿಚಾರವಿಲ್ಲದ ಶುದ್ಧ ಸಮ್ಯಕ್ತ್ವಪರಿಪಾಲನೆ, ಸಪ್ತವ್ಯಸನತ್ಯಾಗ, ಅಷ್ಟಮೂಲಗುಣ ಇವುಗಳನ್ನು ಪರಿಪಾಲಿಸಬೇಕೆಂದು ಭಾವವು ÷ದ್ಯೂತಕ್ರೀಡೆ,

---

÷ದ್ಯೂತಂಚ ಮಾಂಸಂಚ ಸುರಾ ಚ ವೇಶ್ಯಾಪಾಪದ್ಧಿಚೌರ್ಯ ಪರದಾರಸೇವಾಃ || ಏತಾನಿ ಸಪ್ತವ್ಯಸನಾನಿ ಲೋಕೇ, ಪಾಪಾಧಿಕೇ ಪುಂಸಿ ಕರಾ: ಭವಂತಿ || ೧ || ಅಶ್ವತ್ಥೋದುಂಬರಪ್ಲಕ್ಷನ್ಯಗ್ರೋಧಾದಿ ಫಲಾನ್ಯಪ || ತ್ಯಜೇನ್ಮಧುವಿಶುದ್ಧ್ಯಾಸೌ ದರ್ಶನಿಕ ಇತಿ ಸ್ಮೃತ: ||೨||

ಮಾಂಸಭಕ್ಷಣೆ, ಮದ್ಯಪಾನ, ವೇಶ್ಯಾಗಮನ, ಶಿಕಾರಿಯಾಡುವಿಕೆ, ಕಳ್ಳತನ, ಪರಸ್ತ್ರೀಸೇವನೆ ಇವುಗಳಿಗೆ ಸಪ್ತವ್ಯಸನಗಳೆಂದು ಹೆಸರು. ಲೋಕದಲ್ಲಿ ಇವುಗಳನ್ನು ಹೆಚ್ಚಾದ ಪಾಪಿಷ್ಠರು ಆಚರಿಸುತ್ತಾರೆಂದು ಭಾವವು. ಅಶ್ವತ್ಥ ಮೊದಲಾದ ಪಂಚಕ್ಷೀರಫಲತ್ಯಾಗವನ್ನೂ ಮಕಾರತ್ರಯಗಳನ್ನೂ ಬಿಡುವುದಕ್ಕೆ 'ಅಷ್ಟಮೂಲಗುಣ'ಗಳೆಂದು ಹೆಸರು. ದರ್ಶನಿಕನೆಂಬ ಒಂದನೆಯ ನೆಲೆಯ ಶ್ರಾವಕನು ಇವುಗಳನ್ನು ಬಿಡಬೇಕೆಂದಭಿಪ್ರಾಯವು.

### [೨] ವ್ರತಿಕಪ್ರತಿಮಾಧಾರಿಯ ಲಕ್ಷಣ.

**ನಿರತಿಕ್ರಮಣಮಣುವ್ರತಪಂಚಕಮಪಿ ಶೀಲಸಪ್ತಕಂ ಚಾಪಿ॥**
**ಧಾರಯತೇ ನಿಃಶಲ್ಯೋ ಯೋಽಸೌ ವ್ರತಿನಾಂ ಮತೋ ವ್ರತಿಕಃ॥**

**ಅನ್ವಯಾರ್ಥಃ**—ಯಃ—ಯಾವನು ನಿಃಶಲ್ಯಃ 'ಸನ್'—ಶಲ್ಯರಹಿತನಾಗಿ ನಿರತಿಕ್ರಮಣಂ—ಅತಿಚಾರವಿಲ್ಲದ ಅಣುವ್ರತಪಂಚಕಂ—ಪಂಚಾಣುವ್ರತಗಳನ್ನು ಅಪಿ—ಮತ್ತೆ ಶೀಲಸಪ್ತಕಂಚಾಪಿ—ಸಪ್ತಶೀಲಗಳನ್ನು ಕೂಡ ಧಾರಯತೇ—ಧರಿಸುತ್ತಾನೋ ಅಸೌ—ಇವನು ವ್ರತಿನಾಂ—ವ್ರತಧಾರಿಗಳಿಗೆ ವ್ರತಿಕಃ—ವ್ರತಿಕನೆಂದು ಮತಃ—ಸಮ್ಮತನು.

**ತಾತ್ಪರ್ಯಃ**—ನಮ್ಮ ದೇಹಗತವಾದ ಮುಳ್ಳು ಮೊದಲಾದುವುಗಳು ತೀಕ್ಷ್ಣವಾದ ವೇದನೆಯನ್ನುಂಟು ಮಾಡುವಂತೆ, ದುಃಖವನ್ನುಂಟು ಮಾಡುವ ಪರಿಣಾಮಗಳಿಗೆ 'ಶಲ್ಯ'ಗಳೆಂದು ಹೆಸರು. ಅವುಗಳಲ್ಲಿ ಮಾಯಾ ಮಿಥ್ಯಾ, ನಿದಾನಗಳೆಂದು ಮೂರುವಿಧ ಪರವಂಚನೆ, ಕಪಟತನ ಮೊದಲಾದ ಪರಿಣಾಮಕ್ಕೆ 'ಮಾಯಾಶಲ್ಯ'ವೆಂದೂ, ಯಥಾರ್ಥವಲ್ಲದ ದೇವಗುರುಶಾಸ್ತ್ರಗಳನ್ನು ನಂಬುವುದಕ್ಕೆ 'ಮಿಥ್ಯಾಶಲ್ಯ'ವೆಂದೂ, ಆಗಾಮಿಭವದ ಭೋಗಾಭಿಲಾಷೆಗೆ 'ನಿದಾನಶಲ್ಯ'ವೆಂದೂ, ಹೆಸರು. ಈ ಪ್ರಕಾರವಾದ ಶಲ್ಯತ್ರಯಗಳಿಲ್ಲದವನಾಗಿ ಪೂರ್ವೋಕ್ತವಾದ ಅತಿಚಾರಗಳಿಲ್ಲದೆ ಪಂಚಾಣುವ್ರತಗಳನ್ನೂ ಶೀಲಸಪ್ತಕ—ಮೂರು ಗುಣವ್ರತ—ನಾಲ್ಕು ಶಿಕ್ಷಾವ್ರತಗಳನ್ನೂ ಪರಿಪಾಲಿಸುವವನಿಗೆ ವ್ರತಿಕನೆಂಬ ಎರಡನೆಯ ನೆಲೆಯ ಶ್ರಾವಕನೆಂದು ಹೆಸರು.

## [೩] ಸಾಮಯಿಕ ಪ್ರತಿಮಾಧಾರಿ.

**ಚತುರಾವರ್ತ್ತತ್ರಿತಯಶ್ಚತು: ಪ್ರಣಾಮ: ಸ್ಥಿತೋ ಯಥಾಜಾತ: ||**
**ಸಾಮಯಿಕೋ ದ್ವಿನಿಷದ್ಯಸ್ತ್ರಿಯೋಗಶುದ್ಧಸ್ತ್ರಿಸಂಧ್ಯಮಭಿವಂದೀ ||**

**ಅನ್ವಯಾರ್ಥ:**— ಚತುರಾವರ್ತತ್ರಿತಯಃ—ನಾಲ್ಕು ದಿಕ್ಕುಗಳಲ್ಲಿಯೂ ಮೂರು ಮೂರು ಆವರ್ತನೆಗಳುಳ್ಳವನೂ ಚತುಃಪ್ರಣಾಮಃ—ನಾಲ್ಕು ಸರ್ತಿ ನಮಸ್ಕರಿಸುವವನೂ ಸ್ಥಿತಃ—ಕಾಯೋತ್ಸರ್ಗದಲ್ಲಿರತಕ್ಕವನೂ ಯಥಾಜಾತಃ—ಬಾಹ್ಯಾಭ್ಯಂತರ ಪರಿಗ್ರಹಗಳಿಲ್ಲದವನೂ ದ್ವಿನಿಷದ್ಯಃ—ಪಲ್ಯಂಕಾಸನ ಮತ್ತು ಪದ್ಮಾಸನಗಳೆಂಬ ದ್ವಿವಿಧವಾದ ಆಸನದಲ್ಲಿ ಕೂತುಕೊಂಡವನೂ ತ್ರಿಯೋಗಶುದ್ಧಃ—ಪರಿಶುದ್ಧವಾದ ಮನವಚನಕಾಯ ವ್ಯಾಪಾರಗಳುಳ್ಳವನೂ ತ್ರಿಸಂಧ್ಯಂ—ತ್ರಿಕಾಲದಲ್ಲಿ ಅಭೀವಂದೀ—ನಮಸ್ಕರಿಸುವವನೂ ಆದ ಶ್ರಾವಕನು. ಸಾಮಯಿಕಃ—ಸಾಮಯಿಕ ಪ್ರತಿಮಾಧಾರಿಯಾಗಿ 'ಭವತಿ'—ಆಗುತ್ತಾನೆ.

**ತಾತ್ಪರ್ಯ:**—ಸಾಮಾಯಿಕವನ್ನು ಮಾಡತಕ್ಕವನು ಪೂರ್ವ ಅಥವಾ ಉತ್ತರಾಭಿಮುಖವಾಗಿ ಪಲ್ಯಂಕಾಸನ ಪದ್ಮಾಸನ ಯಾ ಖಡ್ಗಾಸನ ಮೊದಲಾದ ಆಸನಗಳಲ್ಲಿ ಕೂತುಕೊಂಡು ಅಥವಾ ನಿಂತುಕೊಂಡು ಸಮಸ್ತವಾದ ಬಾಹ್ಯಾಭ್ಯಂತರಪರಿಗ್ರುಹಗಳಿಲ್ಲದವನೂ ತ್ರಿಕರಣಶುದ್ಧನೂ ಆಗಿ ತ್ರಿ-ಸಂಧ್ಯಾಕಾಲದಲ್ಲಿ ಪ್ರತಿಯೊಂದು ದಿಕ್ಕಿನಲ್ಲಿ ಮೂರು ಮೂರು ಸಾರಿ ಕೈಗಳನ್ನು ತಿರಿಗಿಸುತ್ತಾ ಒಮ್ಮೆ ಪ್ರಣಾಮವನ್ನೂ, ಈ ರೀತಿಯಾಗಿ ನಾಲ್ಕು ದಿಕ್ಕುಗಳಲ್ಲಿ ಹನ್ನೆರಡು ಆವರ್ತನೆಯನ್ನು ಮತ್ತು ನಾಲ್ಕಾವರ್ತಿ ನಮಸ್ಕಾರವನ್ನು ಮಾಡಿ ಪಂಚನಮಸ್ಕಾರ ಮಂತ್ರ, ಜಪ, ಆತ್ಮಚಿಂತನೆ, ಧ್ಯಾನ, ಸ್ತೋತ್ರ ಮೊದಲಾದವುಗಳನ್ನು ಮಾಡತಕ್ಕವನಿಗೆ 'ಸಾಮಯಿಕಪ್ರತಿಮಾಧಾರಿ' ಎಂದು ಹೆಸರು.

## [೪] ಪ್ರೋಷಧಪ್ರತಿಮಾಧಾರಿ.

**ಪರ್ವದಿನೇಷು ಚತುರ್ಷ್ವಪಿ ಮಾಸೇ ಮಾಸೇ ಸ್ವಶಕ್ತಿಮನಿಗುಹ್ಯ ||**
**ಪ್ರೋಷಧನಿಯಮವಿಧಾಯಿೂ ಪ್ರಣಧಿಪರಃಪ್ರೋಷಧಾನಶನ:||**

**ಅನ್ವಯಾರ್ಥ:**—'ಯ:'—ಯಾವನು ಮಾಸೇ ಮಾಸೇ—ಪ್ರತಿ ತಿಂಗಳಲ್ಲಿ ಚತುರ್ಷ್ವ—ನಾಲ್ಕು ಪರ್ವದಿನೇಷ್ವಪಿ—ಪರ್ವದಿನಗಳಲ್ಲಿ ಕೂಡ ಸ್ವಶಕ್ತಿಂ—ತನ್ನ ಶಕ್ತಿಯನ್ನು ಅನಿಗುಹ್ಯ—ಅಡಗಿಸದೆ ಪ್ರಣಧಿಪರಃ ಸನ್—ಶುಭಧ್ಯಾನದಲ್ಲಿ ತತ್ಪರನಾಗಿ ಪ್ರೋಷಧನಿಯಮವಿಧಾಯೀ—ಪ್ರೋಷಧೋಪವಾಸವನ್ನು ಮಾಡತಕ್ಕವನು ಪ್ರೋಷಧಾನಶನ:—ಪ್ರೋಷಧೋಪವಾಸ ಪ್ರತಿಮಾಧಾರಿಯಾಗಿ 'ಭವತಿ'—ಆಗುತ್ತಾನೆ.

**ತಾತ್ಪರ್ಯ:**—ಪ್ರತಿಯೊಂದು ಮಾಸದ ಶುಕ್ಲ ಕೃಷ್ಣ ಪಕ್ಷಗಳ ಅಷ್ಟಮಿ ಮತ್ತು ಚತುರ್ದಶಿಗಳಿಗೆ ಪರ್ವತಿಥಿಗಳೆಂದು ಹೆಸರು. ಈ ನಾಲ್ಕು ಪರ್ವ ತಿಥಿಗಳಲ್ಲಿ ತನ್ನ ಶಕ್ತಿಯನ್ನು ಅಡಗಿಸದೆ ದೇವಪೂಜೆ, ಧರ್ಮಶ್ರವಣ ಮೊದಲಾದ ಶುಭಧ್ಯಾನದಲ್ಲಿ ತತ್ಪರನಾಗಿ ಪ್ರೋಷಧ ನಿಯಮಪೂರ್ವಕ ಉಪವಾಸವನ್ನು ಮಾಡತಕ್ಕವನಿಗೆ 'ಪ್ರೋಷಧಪ್ರತಿಮಾಧಾರಿ'ಯೆಂಬ ನಾಲ್ಕನೆಯ ನೆಲೆಯ ಶ್ರಾವಕನೆಂದು ಹೆಸರು.

### [೫] ಸಚಿತ್ತತ್ಯಾಗಪ್ರತಿಮಾಧಾರಿ.

**ಮೂಲಫಲಶಾಕಶಾಖಾಕರೀರಕಂದಪ್ರಸೂನಬೀಜಾನಿ ॥**
**ನಾಮಾನಿ ಯೋತ್ತಿಸೋಽಯಂ ಸಚಿತ್ತವಿರತೋ ದಯಾಮೂರ್ತಿಃ**

**ಅನ್ವಯಾರ್ಥ:**—ಯ:—ಯಾವನು ಆಮಾನಿ—ಹಸಿದಾದ ಮೂಲ. ಫಲಶಾಕಶಾಖಾಕರೀರಕಂದಪ್ರಸೂನಬೀಜಾನಿ—ಮೂಲಂಗಿ, ಫಲ, ಕಾಯಿಪಲ್ಯ, ತರಕಾರಿ, ಬಿದುರಿನ ಚಿಗುರು, ಗಡ್ಡೆ—ಗೆಣಸು, ಪುಷ್ಪ, ಬೀಜ ಇವುಗಳನ್ನು ನ ಅತ್ತಿ—ತಿನ್ನುವುದಿಲ್ಲವೋ ಸ:—ಅವನು ದಯಾಮೂರ್ತಿಃ-ಕರುಣೆಯೇ ಸ್ವರೂಪವಾಗುಳ್ಳ ಅಯಂ—ಇವನು ಸಚಿತ್ತವಿರತಃ—ಸಚಿತ್ತತ್ಯಾಗ ಪ್ರತಿಮಾಧಾರಿಯಾಗಿ 'ಭವತಿ'—ಆಗುತ್ತಾನೆ.

**ತಾತ್ಪರ್ಯ:**—ಚನ್ನಾಗಿ ಪಕ್ವವಾಗದೆಯೂ ಬೇಯಿಸದೆಯೂ ಇರುವುದೂ ಹಸಿದೂ ಆದ ಸೊಪ್ಪು ಕಾಯಿಪಲ್ಯ ಮೊದಲಾದವುಗಳನ್ನೂ ಮೂಲಂಗೀ, ಗಡ್ಡೆ—ಗೆಣಸು, ಬಿದುರಿನ ಚಿಗುರು [ಕಣಿಲೆ], ಪುಷ್ಪ, ಬೀಜ ಮೊದಲಾದವುಗಳನ್ನು ಭಕ್ಷಿಸುವುದಿಲ್ಲವೆಂದು ವ್ರತವುಳ್ಳ ದಯಾಮೂರ್ತಿಗೆ 'ಸಚಿತ್ತವಿರತ'ನೆಂಬ ಐದನೆಯ ನೆಲೆಯ ಶ್ರಾವಕನೆಂದು ಹೆಸರು.

### [೬] ರಾತ್ರಿಭೋಜನತ್ಯಾಗಪ್ರತಿಮಾಧಾರಿ

**ಅನ್ನಂ ಪಾನಂ ಖಾದ್ಯಂ ಲೇಹ್ಯಂ ನಾಶ್ನಾತಿ ಯೋ ವಿಭಾವರ್ಯಾಂ ||**
**ಸ ಚ ರಾತ್ರಿಭುಕ್ತಿವಿರತಃ ಸತ್ವೇಷ್ವನುಕಂಪಮಾನಮನಾಃ ||೧೪೨||**

**ಅನ್ವಯಾರ್ಥಃ**—ಯಃ—ಯಾವನು ಸತ್ವೇಷು—ಪ್ರಾಣಿಗಳಲ್ಲಿ ಅನುಕಂಪಮಾನಮನಾಃ—'ಸನ್' ದಯಾಚಿತ್ತವುಳ್ಳವನಾಗಿ ವಿಭಾವರ್ಯಾಂ—ರಾತ್ರಿಯಲ್ಲಿ ಅನ್ನಂ—ಅನ್ನವನ್ನು ಪಾನಂ—ಪಾನದ್ರವ್ಯವನ್ನು ಖಾದ್ಯಂ—ಮೋದಕಾದಿಗಳನ್ನು ಲೇಹ್ಯಂ—ಲೇಹವನ್ನು ನಾಶ್ನಾತಿ—ತಿನ್ನುವುದಿಲ್ಲವೋ ಸಃ-ಅವನು ರಾತ್ರಿಭುಕ್ತಿವಿರತಃ-ರಾತ್ರಿಭೋಜನವಿರತನೆಂಬ ಆರನೆಯ ನೆಲೆಯ ಶ್ರಾವಕನಾಗಿ 'ಭವತಿ'—ಆಗುತ್ತಾನೆ.

**ತಾತ್ಪರ್ಯ:**—ಎಲ್ಲ ಪ್ರಾಣಿಗಳ ಮೇಲೆ ಕೃಪೆಯಿಟ್ಟು ಜೀವಹಿಂಸೆಯಾಗಬಾರದೆಂದು ಅನ್ನ ಪಾನ ಖಾದ್ಯ ಲೇಹ್ಯಗಳೆಂಬ ಚತುರ್ವಿಧಾಹಾರಗಳನ್ನು ರಾತ್ರಿಯಲ್ಲಿಭಕ್ಷಿಸದಿರುವವನಿಗೆ 'ರಾತ್ರಿಭುಕ್ತಿವಿರತ'ನೆಂಬ ಆರನೆಯ ನೆಲೆಯ ಶ್ರಾವಕನೆಂದು ಹೆಸರು.

### [೭] ಬ್ರಹ್ಮಚರ್ಯಪ್ರತಿಮಾಧಾರಿ.

**ಮಲಬೀಜಂ ಮಲಯೋನಿಂ ಗಲನ್ಮಲಂ ಪೂತಿಗಂಧಿ ಬೀಭತ್ಸಂ ||**
**ಪಶ್ಯನ್ನಂಗಮನಂಗಾದ್ವಿರಮತಿ ಯೋ ಬ್ರಹ್ಮಚಾರೀ ಸಃ ||೧೪೩||**

**ಅನ್ವಯಾರ್ಥಃ**—ಯಃ—ಯಾವನು ಮಲಬೀಜಂ—ಮಲಕ್ಕೆ ಕಾರಣವೂ ಮಲಯೋನಿಂ—ಮಲವನ್ನುಂಟುಮಾಡುವುದೂ ಗಲನ್ಮಲಂ—ಮಲವನ್ನು ಸುರಿಸುತ್ತಿರವುದೂ ಪೂತಿಗಂಧಿ—ದುರ್ಗಂಧಮಯವೂ ಬೀಭತ್ಸಂ-ಹೇಸಿಕೆಕರವೂ ಆದ ಅಂಗಂ—ಶರೀರವನ್ನು ಪಶ್ಯನ್-ನೋಡಿ ಅನಂಗಾತ್-ಕಾಮಸೇವನೆಯಿಂದ ವಿರಮತಿ-ವಿರಕ್ತನಾಗುತ್ತಾನೋ ಸಃ—ಅವನು. ಬ್ರಹ್ಮಚಾರೀ-ಬ್ರಹ್ಮಚಾರಿಯೆಂಬ ಏಳನೆಯ ಪ್ರತಿಮಾಧಾರಿಯು.

**ತಾತ್ಪರ್ಯ:**—ಈ ಶರೀರವು ತಾಯಿತಂದೆಗಳ ರಕ್ತವೀರ್ಯಗಳಿಂದುಂಟಾದ ಕಾರಣ ಮಲಬೀಜವೂ ಮಲಕ್ಕೆ ಉತ್ಪತ್ತಿಸ್ಥಾನವೂ ಯಾವಾಗಲೂ ನವದ್ವಾರಗಳಿಂದ ಮಲಗಳನ್ನೇ ಸುರಿಸುತ್ತಿರವುದೂ ದುರ್ಗಂಧ

ಮಯವೂ ಲಜ್ಜಾಜನಕವೂ ಹೇಸಿಕೆಕರವೂ ಆದುದಾಗಿದೆ. ಅಂತಹ ಅಪವಿತ್ರವಾದ ಸ್ತ್ರೀಯರ ಶರೀರದ ಸಂಸರ್ಗವನ್ನು ಮಾಡದಿರುವವನಿಗೆ ಬ್ರಹ್ಮಚಾರಿಯೆಂದು ಹೆಸರು. ಇವನು ಏಳನೆಯ ನೆಲೆಯ ಶ್ರಾವಕನು. ಈ ಬ್ರಹ್ಮಚಾರಿಯು ತನ್ನ-ಸ್ತ್ರೀಯ ಪತ್ನಿಯ ನಿಕಟದಲ್ಲಿ ಶಯನ ಮತ್ತು ಆಸನಗಳನ್ನೂ ಪೂರ್ವದಲ್ಲಿ ಭೋಗಿಸಲ್ಪಟ್ಟ ವಿಷಯಭೋಗಗಳ ಚಿಂತನೆಯನ್ನೂ ಕಾಮೋದ್ದೀಪನವಾದ ಪೌಷ್ಟಿಕಾಹಾರಗಳನ್ನೂ ರಾಗೋದ್ದೀಪಕವಾದ ಶೃಂಗಾರ ಆಭರಣ ಸಂಗೀತ ನೃತ್ಯವಿಲಾಸ ಮೊದಲಾದುವುಗಳನ್ನೂ ಬಿಡಬೇಕೆಂದಭಿಪ್ರಾಯವು.

[೮] ಆರಂಭತ್ಯಾಗಪ್ರತಿಮಾಧಾರಿ.

**ಸೇವಾಕೃಷಿವಾಣಿಜ್ಯಪ್ರಮುಖಾದಾರಂಭತೋ ವ್ಯುಪಾರಮತಿ ॥**
**ಪ್ರಾಣಾತಿಪಾತಹೇತೋರ್ಯೋಽಸಾವಾರಂಭವಿನಿವೃತ್ತಃ ॥೧೪೪॥**

**ಅನ್ವಯಾರ್ಥಃ**—ಯಃ—ಯಾವನು ಪ್ರಾಣಾತಿಪಾತಹೇತೋಃ—ಜೀವಹಿಂಸೆಗೆ ಕಾರಣವಾದ ಸೇವಾಕೃಷಿವಾಣಿಜ್ಯಪ್ರಮುಖಾತ್-ಸೇವೆ' ಕೃಷಿ, ವ್ಯಾಪಾರ ಮೊದಲಾದ ಆರಂಭತ:—ಕಾರ್ಯಗಳ ಡೆಸೆಯಿಂದ ವ್ಯುಪಾರಮತಿ—ವಿರಕ್ತನಾಗುತ್ತಾನೆಯೋ ಅಸೌ—ಇವನು ಆರಂಭವಿನಿವೃತ್ತಃ ಆರಂಭತ್ಯಾಗಪ್ರತಿಮಾಧಾರಿಯಾಗಿ 'ಭವತಿ'—ಆಗುತ್ತಾನೆ.

**ತಾತ್ಪರ್ಯ:**—ಜೀವಹಿಂಸೆಗೆ ಕಾರಣವಾದ ಪರಸೇವೆ, ಕೃಷಿ, ವ್ಯಾಪಾರ, ಮನೆಕಟ್ಟುವಿಕೆ ಮೊದಲಾದ ಆರಂಭ—ಕಾರ್ಯಗಳನ್ನು ತ್ಯಜಿಸುವವನಿಗೆ ಎಂಟನೆಯ ಆರಂಭತ್ಯಾಗಪ್ರತಿಮಾಧಾರಿಶ್ರಾವಕನೆಂದು ಹೆಸರು. ಇವನು ಸಮಸ್ತ ಹಿಂಸಾಜನಕವಾದ ಕಾರ್ಯಗಳನ್ನು ಬಿಡಬೇಕೆಂದು ಭಾವವು.

[೯] ಪರಿಗ್ರಹತ್ಯಾಗಪ್ರತಿಮಾಧಾರಿ.

**ಬಾಹ್ಯೇಷುದಶಸು ವಸ್ತುಷು ಮಮತ್ವಮುತ್ಸೃಜ್ಯ ನಿರ್ಮಮತ್ವರತಃ**
**ಸ್ವಸ್ಥಃ ಸಂತೋಷಪರ: ಪರಿಚಿತ್ತಪರಿಗ್ರಹಾದ್ವಿರತ: ॥೧೪೫॥**

**ಅನ್ವಯಾರ್ಥಃ**—'ಯ:'—ಯಾವನು ಬಾಹ್ಯೇಷು—ಹೊರಗಿನ ದಶಸು—ಹತ್ತಾದ ವಸ್ತುಷು— ಪರಿಗ್ರಹಗಳಲ್ಲಿ ಮಮತ್ವಂ—ಪ್ರೀತಿಯನ್ನು

ಉತ್ಸೃಜ್ಯ—ಬಿಟ್ಟು ನಿರ್ಮಮತ್ವರತಃ 'ಸನ್'—ಮಮತೆಯಿಲ್ಲದವನಾಗಿ ಸ್ವಸ್ಥಃ—ಸ್ಥಿರಚಿತ್ತನೂ ಸಂತೋಷಪರಃ—ಸಂತೋಷದಿಂದಿರುವವನೂ ಆದ 'ಸಃ'—ಅವನು ಪರಿಚಿತ್ತಪರಿಗ್ರಹಾತ್—ಪರಿಮಿತಪರಿಗ್ರಹಗಳ ದೆಸೆಯಿಂದ ವಿರತಃ—ವಿರಕ್ತನಾಗಿ 'ಭವತಿ'—ಆಗುತ್ತಾನೆ.

**ತಾತ್ಪರ್ಯಃ**—ಪೂರ್ವೋಕ್ತವಾದ ದಶವಿಧ ಬಾಹ್ಯಪರಿಗ್ರಹಗಳಲ್ಲಿ ಮಮತೆಯನ್ನು ತೊರೆದು, ಅವುಗಳನ್ನೆಲ್ಲ ತನ್ನ ಪುತ್ರಾದಿಗಳ ವಶಕ್ಕೆ ಬಿಟ್ಟು ಕೊಟ್ಟು ತಾನು ಏಕಾಂತದಲ್ಲಿ ಸ್ಥಿರಚಿತ್ತನಾಗಿ ಸಂತೋಷದಿಂದ ಧ್ಯಾನಾಧ್ಯಯನಗಳನ್ನು ಮಾಡುತ್ತಿರುವವನಿಗೆ ಪರಿಗ್ರಹತ್ಯಾಗಪ್ರತಿಮಾ ಧಾರಿಯೆಂಬ ಒಂಭತ್ತನೆಯ ನೆಲೆಯ ಶ್ರಾವಕನೆಂದು ಹೆಸರು.

### [೧೦] ಅನುಮತಿತ್ಯಾಗಪ್ರತಿಮಾಧಾರಿ.

**ಅನುಮತಿರಾರಂಭೇ ವಾ ಪರಿಗ್ರಹೇ ವೈಹಿಕೇಷು ಕರ್ಮಸು ವಾ ||**
**ನಾಸ್ತಿ ಖಲು ಯಸ್ಯ ಸಮಧೀರನುಮತಿವಿರತಃ ಸ ಮಂತವ್ಯಃ ||**

**ಅನ್ವಯಾರ್ಥಃ**—ಯಸ್ಯ—ಯಾವನಿಗೆ ಆರಂಭೇ—ಕಾರ್ಯದಲ್ಲಿ ವಾ—ಮತ್ತೆ ಪರಿಗ್ರಹೇ—ಪರಿಗ್ರಹದಲ್ಲಿ ವಾ—ಅಥವಾ ಐಹಿಕೇಷು ಕರ್ಮಸು—ಇಹಲೋಕ ಸಂಬಂಧವಾದ ಕಾರ್ಯಗಳಲ್ಲಿ ಅನುಮತಿ:—ಸಮ್ಮತಿಯು ನಾಸ್ತಿ—ಇಲ್ಲವೋ ಸಮಧೀಃ—ಸಮತಾಬುಬ್ಧಿಯುಳ್ಳ ಸಃ—ಅವನು ಖಲು ನಿಶ್ಚಯವಾಗಿ ಅನುಮತಿವಿರತ:—ಅನುಮತಿವಿರತನೆಂಬ ಹತ್ತನೆಯ ನೆಲೆಯ ಶ್ರಾವಕನೆಂದು ಮಂತವ್ಯ:–ತಿಳಿಯತಕ್ಕದ್ದು.

**ತಾತ್ಪರ್ಯಃ**— ಸಾಂಸಾರಿಕಸಂಬಂಧವಾದ— ಐಹಿಕಕಾರ್ಯಗಳ ಲ್ಲಾಗಲಿ ಪರಿಗ್ರಹಗಳಲ್ಲಾಗಲಿ ಅನುಮತಿಯನ್ನೀಯದೆ ಸಮತಾಭಾವ ದಿಂದಿರುವವನಿಗೆ ಅನುಮತಿವಿರತನೆಂದು ಹೆಸರು. ಇವನು ಹತ್ತನೆಯ ನೆಲೆಯ ಶ್ರಾವಕನು.

### [೧೧] ಉದ್ದಿಷ್ಟತ್ಯಾಗಪ್ರತಿಮಾಧಾರಿ.

**ಗೃಹತೋ ಮುನಿವನಮಿತ್ವಾ ಗುರೂಪಕಂಠೇ ವ್ರತಾನಿ ಪರಿಗೃಹ್ಯ**
**ಭೈಕ್ಷಾಶನಸ್ತಪಸ್ಯನ್ನುತ್ಕೃಷ್ಟಶ್ಚೇಲಖಂಡಧರ: ||೧೪೭||**

**ಅನ್ವಯಾರ್ಥಃ**—'ಯ:'—ಯಾವನು ಗೃಹತಃ—ಮನೆಯಿಂದ ಮುನಿವಂನ—ಮುನಿಗಳಿರುವ ಅರಣ್ಯವನ್ನು ಇತ್ವಾ—ಹೋಗಿ ಗುರೂಪಕಂಠೇ—

ಗುರುಗಳ ಸಮೀಪದಲ್ಲಿ ವ್ರತಾನಿ—ವ್ರತಗಳನ್ನು ಪರಿಗೃಹ್ಯ—ಗ್ರಹಣೆಮಾಡಿ ತಪಸ್ಯನ್—ತಪಸ್ಸನ್ನು ಮಾಡುತ್ತಾ ಭೈಕ್ಷಾಶನಃ—ಭಿಕ್ಷಾವೃತ್ತಿಯಿಂದ ಭೋಜನವನ್ನು ಮಾಡುವವನೋ 'ಸಃ'—ಅವನು ಚೇಲಖಂಡಧರಃ—ವಸ್ತ್ರಖಂಡಧಾರಿಯಾದ ಉತ್ಕೃಷ್ಟಃ—ಉತ್ಕೃಷ್ಟ ಶ್ರಾವಕನಾಗಿ 'ಭವತಿ'—ಆಗುತ್ತಾನೆ.

**ತಾತ್ಪರ್ಯ:**—ತನ್ನನ್ನು ಉದ್ದೇಶಿಸಿ [ ಕುರಿತು ] ಮಾಡಲ್ಪಟ್ಟ ಆಹಾರಾದಿಗಳನ್ನು ಸೇವನೆ ಮಾಡದವನಾದ್ದರಿಂದ ಹನ್ನೊಂದನೆಯ ನೆಲೆಯ ಶ್ರಾವಕನಿಗೆ ಉದ್ದಿಷ್ಟತ್ಯಾಗಿಯೆಂದೂ ಶ್ರಾವಕರಲ್ಲಿ ಉತ್ತಮನಾದ್ದರಿಂದ ಉತ್ಕೃಷ್ಟಶ್ರಾವಕನೆಂದೂ ಹೆಸರು. ಮನೆಯನ್ನು ಬಿಟ್ಟು ಮುನಿಗಳಿರುವ ಸ್ಥಾನಕ್ಕೆ ಹೋಗಿ ವ್ರತಧಾರಣೆಯನ್ನು ಮಾಡಿ ಭಿಕ್ಷಾವೃತ್ತಿಯಿಂದ ಜೀವಿಸುವವನೂ ಖಂಡವಸ್ತ್ರವನ್ನು ಧರಿಸುವವನೂ ತನಗಾಗಿ ಮಾಡಿದ ವಸ್ತುವನ್ನು ತ್ಯಜಿಸುವವನೂ ಆದ ಶ್ರಾವಕನಿಗೆ ಉದ್ದಿಷ್ಟತ್ಯಾಗಪ್ರತಿಮಾಧಾರಿಯೆಂದು ಹೆಸರು. ಈ ೧೧ ನೆಯ ನೆಲೆಯಲ್ಲಿ ಕೌಪೀನಧಾರಿಯಾದವನಿಗೆ ಐಲಕನೆಂದೂ. ಕೌಪೀನ ಮತ್ತುಒಂದು ವಸ್ತ್ರಧಾರಿಯಾದವನಿಗೆ ಕ್ಷುಲ್ಲಕನೆಂದೂ ಹೆಸರು. ಇದರಲ್ಲಿ ಕ್ಷುಲ್ಲಕನು ತನ್ನ ಭಿಕ್ಷಾವೃತ್ತಿಯಿಂದ ತಂದ ಆಹಾರವನ್ನು ಒಂದೆಡೆ ಕೂತು ಭುಂಜಿಸಬಹುದು. ಐಲಕನು ನಿಯಮದಿಂದ ರಾತ್ರಿಯಲ್ಲಿ ಕಾಯೋತ್ಸರ್ಗ ಧ್ಯಾನವನ್ನೂ, ಕೇಶಲೋಚನವನ್ನೂ ಮಾಡಬೇಕು. ಒಂದೆಡೆ ಕೂತು ಪಾಣಿಪಾತ್ರೆ [ಕೈಯೆಂಬ ಪಾತ್ರೆ]ಯಲ್ಲಿ ಭೋಜನವನ್ನೂ ಪಿಂಛಧಾರಣೆಯನ್ನೂ ಮಾಡಬೇಕು. ಈ ನಿಯಮವು ಕ್ಷುಲ್ಲಕನಿಗಿಲ್ಲವು. ಶ್ರಾವಕರ ೧೧ ನೆಲೆಗಳಲ್ಲಿ ಮೊದಲನೆಯ ಆರು ನೆಲೆಯ ಶ್ರಾವಕರಿಗೆ ಜಘನ್ಯಶ್ರಾವಕರೆಂದೂ ಅನಂತರದ ಮೂರು ನೆಲೆಯವರಿಗೆ ಮಧ್ಯಮಶ್ರಾವಕರೆಂದೂ ಇನ್ನುಳಿದ ಎರಡು ನೆಲೆಯವರಿಗೆ ಉತ್ಕೃಷ್ಟ ಶ್ರಾವಕರೆಂದೂ ಹೆಸರು. ಈ ರೀತಿಯಾಗಿ ಮೊದಮೊದಲಿನ ನೆಲೆಗಳ ನಿಯಮಗಳನ್ನು ಮೇಲುಮೇಲಿನ ನೆಲೆಗಳ ಶ್ರಾವಕರು ಆಚರಿಸಲೇಬೇಕೆಂದಭಿಪ್ರಾಯವು. ಈ ಪ್ರಕಾರವಾಗಿ ೧೧ ನೆಲೆಯ ವಿಷಯವು ಪರಿಸಮಾಪ್ತವಾದುದು.

# ಕ್ಷುಲ್ಲಕರು ಪಾಣಿಪಾತ್ರದಿಂದ ಆಹಾರ ಮಾಡಬಹುದೋ ?

ಹನ್ನೊಂದನೆ ಪ್ರತಿಮಾಧಾರಿಗಳಾದ ಕ್ಷುಲ್ಲಕರು ಪಾಣಿಪಾತ್ರ [ಕರಪಾತ್ರ]ದಿಂದ ಆಹಾಕ ಮಾಡಬಹುದೋ? ಕೂಡದೋ ? ಎಂಬ ಚರ್ಚೆಯು ಕೆಲವು ಸಮಯದಲ್ಲಿ ಕೇಳಬರುತ್ತದೆ. ಕೆಲವರು ಅವರು ಪಾಣಿ ಪಾತ್ರದಿಂದ ಆಹಾರ ಮಾಡಬಾರದೆಂದೂ, ಮಾಡಿದರೆ ಮುನಿಗಳಿಗೂ ಅವ ರಿಗೂ ಅಂತರ ಏನೂ ಉಳಿಯದೆಂದೂ ಎಂಬ ತರ್ಕದಿಂದ ವಾದಿಸುತ್ತಾರೆ. ಅವರ ಈ ತರ್ಕಕ್ಕೆ ಆಗಮದ ಆಧಾರವಿಲ್ಲ. ಕೇವಲ ಮನೋಕಲ್ಪಿತ ವಿಚಾರವೇ ಇದಕ್ಕೆ ಆಧಾರ. ಆದರೆ ಶ್ರಾವಕರ ನೆಲೆಗಳಲ್ಲಿಯೂ ಕೆಳಗಿನ ನೆಲೆಯವರು ಮೇಲಿನ ನೆಲೆಯವರ ಅಭ್ಯಾಸವನ್ನು ಮಾಡಿಕೊಂಡಿರಬೇ ಕೆಂದೂ, ಮೊದಲು ಕೆಳಗೆ ಇದ್ದು ಅಭ್ಯಾಸ ಮಾಡಿ ಮೇಲಿನ ನೆಲೆಗಳಲ್ಲಿ ಹೋಗಬೇಕೆಂದೂ ಆಗಮಕಾರರು ಹೇಳುತ್ತಾರೆ. ಹಾಗಾದರೆ ಮುನಿಯಾ ಗುವ ಮೊದಲು ಉತ್ಕೃಷ್ಟ ಶ್ರಾವಕನ ಪದವಿಯಲ್ಲಿಯೇ ಮುನಿಕ್ರಯೆಗಳಲ್ಲಿ ಕೆಲವನ್ನು ಅಭ್ಯಾಸ ಮಾಡಿದರೆ ಹಾನಿ ಏನು ? ಹಾಗಿರವಾಗ ಕ್ಷುಲ್ಲಕ ಐಲಕರು ಅಭ್ಯಾಸದ ರೂಪದಿಂದ ಕರಪಾತ್ರ ಭೋಜನ, ಕೇಶಲುಂಚನ, ಮೊದಲಾದ ಕ್ರಿಯೆಗಳನ್ನು ಮಾಡಿದರೆ ಆಗಮವಿರೋಧವಿಲ್ಲವೆಂದು ನಮ್ಮ ಅಭಿಪ್ರಾಯ, ಇಷ್ಟೇ ಅಲ್ಲ. ಈ ಪ್ರತಿಮೆಗಳಲ್ಲಿ ಕರ್ತವ್ಯದ ರೂಪದಲ್ಲಿಯೂ ಈ ಕ್ರಿಯೆಗಳನ್ನು ಮಾಡಬಹುದು. ಇದಕ್ಕೆ ಆಗಮದ ಆಧಾರವೂ ಇದೆ. ವಸುನಂದಿ ಶ್ರಾವಕಾಚಾರದಲ್ಲಿ ೧೧ ನೆಯ ನೆಲೆಯ ವರ್ಣನೆಯು ಈ ಪ್ರಕಾರ ಬಂದಿದೆ.

**ಏಯಾರಸಮ್ಮಿ ಠಾಣೇ ಉಕ್ಕಿಠ್ಠೋ ಸಾವಹೋಹವೇ ದುವಿಹೋ**
**ವತ್ಥೇಕ್ಕಧರೋ ಫಢಮೋ ಕೋವೀಣಪರಿಗ್ಗಹೋ ಏದಿಓ ||**

ಹನ್ನೊಂದನೆಯ ನೆಲೆಯಲ್ಲಿರುವ ಉತ್ಕೃಷ್ಟ ಶ್ರಾವಕರ ಎರಡು ಭೇದಗಳು. ಖಂಡವಸ್ತ್ರವನ್ನು ಧಾರಣೆ ಮಾಡುವವನು ಕ್ಷುಲ್ಲಕನು, ಪ್ರಥಮ ಭೇದ. ಕೌಪೀನಮಾತ್ರ ಪರಿಗ್ರಹವನ್ನು ಧಾರಣೆ ಮಾಡುವವನು ಎರಡ ನೆಯವನು, ಐಲ್ಲಕ. ಮುಂದೆ ಕ್ಷುಲ್ಲಕನ ವಿಷಯದಲ್ಲಿ ಹೀಗೆ ವರ್ಣಿಸಿದ್ದಾರೆ.

**ಧಮ್ಮಿಲಾಣಂ ಚಯಣಂ ಕರೇಯಿ ಕತ್ತರಿಛುರೇಣ ವಾ ಪಢಮೋ**
**ಠಾಣಾಯಿಸು ಪಡಿಲೇಹಯಿ ಉಪಯರಣೇಣ ಪಯಡಪ್ಪಾ ॥**
**ಭುಂಜೇಯಿ ಪಾಣಿಪತ್ತಮ್ಮಿ ಭಾಯಣೇವಾ ಸಯಿಂ ಸಮುವಇಠ್ಠೋ**
**ಉಪವಾಸಂ ಪುಣ ಣಿಯಮಾ ಚವುಪ್ಪಿಹಂ ಕುಣಯಿ ಪವ್ವೇಸು ॥**

ಮೇಲಿನ ಉತ್ತಮ ಶ್ರಾವಕನು ಅಂದರೆ ಕ್ಷುಲ್ಲಕನು ಧಮ್ಮಿಲ್ಲಗಳ ಚಯನ ಅಂದರೆ ಕ್ಷೌರಕರ್ಮ ಕತ್ತರಿಯಿಂದ ಅಥವಾ ಚೂರಿಯಿಂದ ಮಾಡಬಹುದು. ಹಾಗೆಯೇ ಜಾಗರೂಕನಾಗಿ ಪ್ರಯತ್ನಪೂರ್ವಕ ಪಿಂಛ ಮೊದಲಾದ ಉಪಕರಣಗಳಿಂದ ಸ್ಥಾನ ಮೊದಲಾದವುಗಳ ಶೋಧನೆಯನ್ನು ಮಾಡುತ್ತಾನೆ. ಕರಪಾತ್ರ ಅಥವಾ ಇತರ ಪಾತ್ರಗಳಲ್ಲಿ ಭೋಜನವನ್ನು ಒಂದುಸಾರಿ ಕೂತುಕೊಂಡು ಮಾಡುತ್ತಾನೆ. ಇದೇ ಅಭಿಪ್ರಾಯವನ್ನು ಶ್ರೀ ಗುಣಭದ್ರ ಆಚಾರ್ಯರೂ ತಮ್ಮ ಶ್ರಾವಕಾಚಾರ ಗ್ರಂಥದಲ್ಲಿ ಸಮರ್ಥನೆ ಮಾಡುತ್ತಾರೆ.

**ಉದ್ದಿಷ್ಟವಿರತೋ ದ್ವೇಧಾ ಸ್ಯಾದಾದ್ಯೋ ವಸ್ತ್ರಖಂಡಭಾಕ್ ।**
**ಸಂಮೂರ್ಧಜಾನಾಂ ವಪನಂ ಕರ್ತನಂ ಚೈವ ಕಾರಯೇತ್ ॥**
**ಗಚ್ಛೇನ್ನಾಕಾರಿತೋ ಭೋಕ್ತುಂ ಕುರ್ಯಾದ್ಭಿಕ್ಷಾಂ ಯಥಾಶನಂ।**
**ಪಾಣಿಪಾತ್ರೇನ್ಯಪಾತ್ರೇ ವಾ ಭಜೇದ್ಭುಕ್ತಿಂ ನಿವಿಷ್ಟವಾನ್ ॥**

ಮೇಲೆ ಬರೆದ ವಸುನಂದಿಶ್ರಾವಕಾಚಾರದ ಅಭಿಪ್ರಾಯವೇ ಈ ಶ್ಲೋಕಗಳಲ್ಲಿ ವ್ಯಕ್ತವಾಗಿವೆ ಅಂದರೆ ಹನ್ನೊಂದನೆಯ ನೆಲೆಯಲ್ಲಿರುವ ಉದ್ದಿಷ್ಟ ವಿರತ ಶ್ರಾವಕನ ಎರಡು ಭೇದ. ಮೊದಲನೆಯ ಕ್ಷುಲ್ಲಕನು ಖಂಡ ವಸ್ತ್ರವನ್ನು ಧಾರಣೆ ಮಾಡುತ್ತಾನೆ. ಕೇಶಗಳ ಕರ್ತನೆಯನ್ನು ಮಾಡಿಸಬಹುದು. ಅನಿಮಂತ್ರಿತನಾಗಿ ಭೋಜನಕ್ಕೆ ಗೃಹಸ್ಥರ ಮನೆಗೆ ಹೋಗಿ ಪಾಣಿಪಾತ್ರದಲ್ಲಿ ಅಥವಾ ಅನ್ಯಪಾತ್ರದಲ್ಲಿ ಕೂತುಕೊಂಡು ಊಟ ಮಾಡಬಹುದು. ಪ್ರಾಯಶ್ಚಿತ್ತ ಚೂಲಿಕೆಯಲ್ಲಿ ಕ್ಷುಲ್ಲಕನ ವಿಷಯದಲ್ಲಿ ಹೀಗೆ ಬರೆದಿದ್ದಾರೆ.

**ಕ್ಷೌರಂ ಕುರ್ಯಾಚ್ಚಲೋಚಂ ವಾ ಪಾಣೌ ಭುಂಕ್ತೇಥ ಭಾಜನೇ**
**ಕೌಪೀನಮಾತ್ರತಂತ್ರೋಸೌ ಕ್ಷುಲ್ಲಕಃ ಪರಿಕೀರ್ತಿತಃ ॥**

ಕ್ಷುಲ್ಲಕನು ಕ್ಷೌರವನ್ನು ಮಾಡಿಸಬಹುದು. ಲೋಚನವನ್ನು ಮಾಡಬಹುದು. ಪಾಣಿಪಾತ್ರದಲ್ಲಿ ಅಥವಾ ಇತರ ಪಾತ್ರದಲ್ಲಿ ಭೋಜನ ಮಾಡಬಹುದು. ಕೋಪೀನ ಮಾತ್ರವನ್ನು ಧಾರಣೆ ಮಾಡುವ ಉತ್ತಮ ಶ್ರಾವಕನು ಕ್ಷುಲ್ಲಕನೆಂದು ಹೇಳಲ್ಪಡುತ್ತಾನೆ. ಈ ಪ್ರಕರಣಗಳಿಂದ ವಿಷಯವು ಸ್ಪಷ್ಟವಾಗಿದೆ. ಐಲಕನ ವಿಷಯದಲ್ಲಿ ವಿವಾದವೇ ಇಲ್ಲ. ಸ್ಪಷ್ಟವಾಗಿದೆ.

ಪ್ರಾಯಶ್ಚಿತ್ತ ಚೂಲಿಕೆಯ ಪ್ರಮಾಣದಿಂದ ಕ್ಷುಲ್ಲಕನು ಲೋಚವನ್ನೂ ಮಾಡಬಹುದೆಂಬ ವಿಷಯವು ಸ್ಪಷ್ಟವಾಗಿದೆ. ಆದುದರಿಂದ ಕ್ಷುಲ್ಲಕ ಅವಸ್ಥೆಯಲ್ಲಿ ಕರಪಾತ್ರ ಆಹಾರ ಮತ್ತು ಲೋಚನವನ್ನು ಮಾಡಬಹುದು.]

—ಸಂ.

## ಉತ್ತಮ ಜ್ಞಾನಿಯ ಲಕ್ಷಣ.

**ಪಾಪಮರಾತಿರ್ಧರ್ಮೋ ಬಂಧುರ್ಜೀವಸ್ಯ ಚೇತಿ ನಿಶ್ಚಿನ್ವನ್ ॥**
**ಸಮಯಂ ಯದಿ ಜಾನೀತೇ ಶ್ರೇಯೋ ಜ್ಞಾತಾ ಧ್ರುವಂ ಭವತಿ ॥**

**ಅನ್ವಯಾರ್ಥ:**—ಜೀವಸ್ಯ—ಆತ್ಮನಿಗೆ ಪಾಪಂ-ಕರ್ಮವು ಅರಾತಿಃ-ವೈರಿಯು ಚ—ಮತ್ತೆ ಧರ್ಮಃ—ಪುಣ್ಯವು ಬಂಧುಃ—ಮಿತ್ರನು ಇತಿ—ಈ ಪ್ರಕಾರವಾಗಿ ಧ್ರುವಂ—ನಿತ್ಯವೂ ನಿಶ್ಚಿನ್ವನ್—ವಿಚಾರಿಸುತ್ತಾ ಯದಿ—ಒಂದು ವೇಳೆ, ಸಮಯಂ—ಶಾಸ್ತ್ರವನ್ನು ಜಾನೀತೇ—ತಿಳಿಯುತ್ತಾನೋ 'ಸಃ ಏವ'—ಅವನೇ ಶ್ರೇಯಃ—ಉತ್ತಮನಾದ ಜ್ಞಾತಾ—ಜ್ಞಾನಿಯಾಗಿ 'ಭವತಿ' –ಆಗುತ್ತಾನೆ.

**ತಾತ್ಪರ್ಯ:**—ಹೇಯೋಪಾದೇಯಜ್ಞಾನವುಳ್ಳ ಆತ್ಮಜ್ಞಾನಿಯು ಪಾಪವು ವೈರಿಯೆಂದೂ ಪುಣ್ಯವು ಮಿತ್ರನೆಂದೂ ಯಾವಾಗಲೂ ವಿಚಾರಿಸುತ್ತಿದ್ದರೆ ಆಗ ಪಾಪಪ್ರವೃತ್ತಿಯಲ್ಲಿ ಹೇಯವೂ ಪುಣ್ಯಕಾರ್ಯದಲ್ಲಿ ಉತ್ಸಾಹವೂ ಉಂಟಾಗುತ್ತದೆ ಈ ರೀತಿಯಾಗಿ ಸದಾ ಶಾಸ್ತ್ರಚಿಂತನೆಯನ್ನು ಮಾಡುತ್ತಿರುವವನಿಗೆ ಶ್ರೇಷ್ಠವಾದ ಜ್ಞಾನವುಳ್ಳವನೆಂದು ಹೆಸರು.

## ಉಪಸಂಹಾರ.

**ಯೇನ ಸ್ವಯಂ ವೀತಕಲಂಕವಿದ್ಯಾದೃಷ್ಟಿಕ್ರಿಯಾರತ್ನಕರಂಡಭಾವಂ॥**
**ನೀತಸ್ತಮಾಯಾತಿ ಪತೀಚ್ಛಯೇವ ಸರ್ವಾರ್ಥಸಿದ್ಧಿ ಸ್ತ್ರಿಷು ವಿಷ್ಟಪೇಷು**

**ಅನ್ವಯಾರ್ಥಃ**—ಯೇನ—ಯಾವನಿಂದ ಸ್ವಯಂ—ತನ್ನನ್ನು ವೀತ ಕಲಂಕವಿದ್ಯಾದೃಷ್ಟಿಕ್ರಿಯಾರತ್ನಕರಂಡಭಾವಂ—ನಿರ್ದೋಷವಾದ ಜ್ಞಾನ, ದರ್ಶನ, ಚಾರಿತ್ರಗಳೆಂಬ ರತ್ನಗಳಿಗೆ ಕರಡಿಗೆಯಂತೆ ನೀತ:—ಮಾಡಲ್ಪಟ್ಟಿರುವನೋ ತಂ—ಆವನನ್ನು ತ್ರಿಷು ವಿಷ್ಟಪೇಷು—ಮೂರು ಲೋಕಗಳಲ್ಲಿ ಪತೀಚ್ಛಯಾ ಇವ—ಪತಿಯಾಗಬೇಕೆಂಬ ಇಚ್ಛೆಯಿಂದಲೋ ಎಂಬಂತೆ ಸರ್ವಾರ್ಥಸಿದ್ಧಿ:— ಪುರುಷಾರ್ಥಚತುಷ್ಟಯಪ್ರಾಪ್ತಿಯೆಂಬ ಸ್ತ್ರೀಯು ಆಯಾತಿ- ಹೊಂದುತ್ತಾಳೆ.

**ತಾತ್ಪರ್ಯ:**—ಲೋಕದಲ್ಲಿ ಅನರ್ಘ್ಯವಾದ ರತ್ನಗಳನ್ನು ಉತ್ತಮವಾದ ಪೆಟ್ಟಿಗೆ ಯಾ ಕರಡಿಗೆಯಲ್ಲಿ ಭದ್ರವಾಗಿಡುವಂತೆ ಯಾವನು ಅತಿಚಾರವಿಲ್ಲದೆ ನಿರ್ದೋಷವಾಗಿರುವ ಸಮ್ಯಗ್ದರ್ಶನಜ್ಞಾನಚಾರಿತ್ರಗಳೆಂಬ ರತ್ನತ್ರಯಗಳನ್ನು ತನ್ನ ಹೃದಯಕರಂಡಕದಲ್ಲಿ ಧರಿಸಿಕೊಳ್ಳುವನೋ ಅಂತಹ ಮಹಾಪುರುಷನನ್ನು ವರಿಸಬೇಕೆಂಬ ಅಭಿಲಾಷೆಯಿಂದ ಸರ್ವಾರ್ಥಸಿದ್ಧಿಯೆಂಬ ಸ್ತ್ರೀಯು ಆಗಮಿಸುತ್ತಾಳೆಂದು ಭಾವವು. ಅಂದರೆ ನಿರತಿಚಾರವಾಗಿ ಸಮ್ಯಗ್ದರ್ಶನಜ್ಞಾನಚಾರಿತ್ರಗಳನ್ನು ಪಾಲಿಸುವವನಿಗೆ ಸರ್ವಾರ್ಥಸಿದ್ಧಿಯೆಂಬ ಅಹಮಿಂದ್ರಸ್ಥಾನವೂ ಅಥವಾ ಧರ್ಮಾರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥಚತುಷ್ಟಯಗಳ ಸಿದ್ಧಿಯೂ ಆಗುವುದೆಂದು ಮುಖ್ಯಾಭಿಪ್ರಾಯವು.

## ಅಂತ್ಯಮಂಗಲಂ.

**ಸುಖಯತು ಸುಖಭೂಮಿ: ಕಾಮಿನಂ ಕಾಮಿನೀವ ।**
**ಸುತಮಿವ ಜನನೀ ಮಾಂ ಶುದ್ಧಶೀಲಾ ಭುನಕ್ತು ॥**
**ಕುಲಮಿವ ಗುಣಭೂಷಾ ಕನ್ಯಕಾ ಸಂಪುನೀತಾತ್ ।**
**ಜಿನಪತಿಪದಪದ್ಮಪ್ರೇಕ್ಷಿಣೀ ದೃಷ್ಟಿಲಕ್ಷ್ಮೀಃ ॥೧೫೦॥**

**ಅನ್ವಯಾರ್ಥಃ**—ಜಿನಪತಿಪದಪದ್ಮಪ್ರೇಕ್ಷಿಣೀ—ಜಿನೇಶ್ವರನ ಪಾದ ಕಮಲವನ್ನು ನೋಡುತ್ತಿರುವ ದೃಷ್ಟಿಲಕ್ಷ್ಮೀ:—ಸಮ್ಯಗ್ದರ್ಶನವೆಂಬ ಲಕ್ಷ್ಮಿಯು ಕಾಮಿನಂ—ಕಾಮುಕನನ್ನು ಸುಖಭೂಮಿ—ಸುಖಕ್ಕೆ ಕಾರಣ

ಳಾದ ಕಾಮಿನೀ ಇವ-ಸ್ತ್ರೀಯಂತೆ ಮಾಂ-ನನ್ನನ್ನು ಸುಖಯತು-ಸುಖ ವಂತನನ್ನಾಗಿ ಮಾಡಲಿ ಸುತಂ-ಪುತ್ರನನ್ನು ಶುದ್ಧಶೀಲಾ-ಸಚ್ಚಾರಿತ್ರ ವುಳ್ಳ ಜನನೀ ಇವ-ತಾಯಿಯಂತೆ ಮಾಂ ಭುನಕ್ತು-ನನ್ನನ್ನು ಸಂರಕ್ಷಿ ಸಲಿ ಕುಲಂ-ವಂಶವನ್ನು ಗುಣಭೂಷಾ-ಸದ್ಗುಣಗಳಿಂದ ಭೂಷಿತಳಾದ ಕನ್ಯಕಾ—ಇವ—ಪುತ್ರಿಯಂತೆ ಮಾಂ-ನನ್ನನ್ನು ಸಂಪುನೀತಾತ್-ಪವಿತ್ರ ನನ್ನಾಗಿ ಮಾಡಲಿ.

**ತಾತ್ಪರ್ಯ:**— ಲೋಕದಲ್ಲಿ ಸುಖಕ್ಕೆ ಕಾರಣರಾದ ಕಾಮಿನಿ ಯರು ಕಾಮುಕರನ್ನು ಸಂತೋಷ ಪಡಿಸುವಂತೆಯೂ, ಸಚ್ಚಾರಿತ್ರವತಿ ಯಾದ ಮಾತೆಯು ಪುತ್ರನನ್ನು ಪ್ರೇಮದಿಂದ ರಕ್ಷಿಸುವಂತೆಯೂ, ಸದ್ಗು ಣಾಭರಣಭೂಷಿತಳಾದ ಪುತ್ರಿಯು ತನ್ನ ವಂಶವನ್ನು ಪವಿತ್ರವನ್ನಾಗಿ ಮಾಡುವಂತೆಯೂ ಭಗವಂತನ ಪಾದಕಮಲದ ನಂಬಿಕೆ-ಸಮ್ಯಗ್ದರ್ಶನ ವೆಂಬ ಸುಖಸ್ಥಾನಳೂ ಸಚ್ಚಾರಿತ್ರವಂತಳೂ ನಿಃಶಂಕಾದಿಗುಣಗಳಿಂದ ಯುಕ್ತಳೂ ಆದ ಲಕ್ಷ್ಮಿಯು ನನ್ನನ್ನು [ ಸಮಂತಭದ್ರಾಚಾರ್ಯ ] ಸಂತೋಷ ಪಡಿಸಲಿ. ರಕ್ಷಿಸಲಿ. ಪವಿತ್ರನನ್ನಾಗಿ ಮಾಡಲಿ, ಅಂದರೆ ಸಮ್ಯಕ್ತ್ವವು ನನ್ನನ್ನು ಉತ್ತಮನನ್ನಾಗಿ ಮಾಡಲೆಂದು ಮುಖ್ಯಾಭಿ ಪ್ರಾಯವು.

**ಇತಿ ಶ್ರೀಸಮಂತಭದ್ರಸ್ವಾಮಿವಿರಚಿತೇ ರತ್ನಕರಂಡನಾಮ್ನಿ**
**ಉಪಾಸಕಾಧ್ಯಯನೇ ಏಕಾದಶಪ್ರತಿಮಾವರ್ಣನಂ**
**ನಾಮ ಸಪ್ತಮಃ ಪರಿಚ್ಛೇದಃ ॥ ೭ ॥**

**ಭದ್ರಂ ಭೂಯಾತ್**

| ರೂಪಾಯಿ | ದೇಣಗಿದಾರರ ಹೆಸರು | ಗ್ರಾಮ |
|---|---|---|
| ೨೦೧ | ಶ್ರೀ. ಭುಪಾಲಪ್ಪಾ ಡೋಂಗರೆ | ಗೋಕಾಕ |
| ೨೨ | ಸೌ. ಕಮಲಾಬಾಯಿ ಶೆಟ್ಟಿ | ,, |
| ೫ | ,, ಪೋಸ್ಟ ಮಾಸ್ತರಿಣ | ,, |
| ೨ | ,, ಗುಪ್ತದಾನ | ,, |
| ೧೧ | ,, ಪುತಳಾಬಾಯಿ ಶ್ರೀಮುಂದರ ಹರ್ದೆ | ,, |
| ೨೧ | ,, ಪದ್ಮಾವತೀ ಭುಪಾಲಪ್ಪಾ ಪತ್ರಾದಳೆ | ,, |
| ೫ | ಶ್ರೀ. ರತ್ನಾಬಾಯಿ ದೆಸಾಯಿ | ,, |
| ೨೫ | ಸೌ. ಶ್ರೀಮತಿ ಶಾಂತಪ್ಪಾ ದರಗಶೆಟ್ಟಿ | ,, |
| ೨ | ,, ಸರೊಜನಿ ಹಿಡಕಲ | ,, |
| ೫೦ | ,, ಪದ್ಮಾವತಿ ಆಣ್ಣಾಪ್ಪಾ ಅಂಗಡಿ | ,, |
| ೨ | ಶ್ರೀ ಚಿಮಾಬಾಯಿ ಅಷ್ಟೆಕರ | ,, |
| ೫ | ಸೌ. ಇಂದುಬಾಯಿ ಶಾಂತಪ್ಪಾ ಮೆಳವಂಕೆ | ,, |
| ೫೧ | ಶ್ರೀ. ಶಿವುಬಾಯಿ ಕಲಪ್ಪಾ ಕಿತ್ತುರ | ,, |
| ೨೫ | ಸೌ. ಚಿಮಾಬಾಯಿ ಶ್ರೀಮುಂಧರ ದರಗಶೆಟ್ಟಿ | ,, |
| ೫ | ,, ಲೀಲಾವತಿ ಶ್ರೀಧರ ಡೊಂಗರೆ | ,, |
| ೨೫ | ,, ಪುತಳಾಬಾಯಿ ದಶರಥಪ್ಪಾ ಶಿರಗುಪ್ಪಿ | ,, |
| ೧೦೧ | ,, ಸುಶಿಲಾಬಾಯಿ ಅನಂತಪ್ಪಾ ಪತ್ರಾವಳೆ | ,, |
| ೧೦೧ | ಶ್ರೀ. ಶಾಂತಾಬಾಯಿ ತಾತಪ್ಪಾ ,, | ,, |
| ೫ | ,, ಪದ್ಮಾಬಾಯಿ ಹರ್ದೆ | ,, |
| ೧೦ | ಸೌ. ಶಕುಂತಲಾಬಾಯಿ ಜಯಕುಮಾರ ಶಿರಗುಪ್ಪಿ | ,, |
| ೧೧ | ,, ದೀಪವ್ವಾ ತವನಪ್ಪಾ ಡೊಂಗರೆ | ,, |